ಪ್ರಕಾಶಕರು:

**ಶ್ರೀ. ಪದ್ಮರಾಜ ಆದಿನಾಥ ಹುನಗುಂದ**

ಶಾಂತಿನಿಕೇತನ, ಮಹಾತ್ಮಾಗಾಂಧಿ ಬೀದಿ, ವಿಜಾಪೂರ



**ಪುಸ್ತಕ ಸಿಕ್ಕುವ ಸ್ಥಳ**

ಪ್ರಕಾಶಕರು ಮತ್ತು ಊರೂರಲ್ಲಿಯ ಪ್ರಮುಖ ಪುಸ್ತಕ ವ್ಯಾಪಾರಿಗಳು

ಬೆಲೆ { ಸಾದಾ ಪ್ರತಿ ರೂ ೨-೧೨-೦
{ ಕ್ಯಾಲಿಕೊ ,, ರೂ ೩-೮-೦

ಮುದ್ರಕರು:

**ಶ್ರೀ. ವೆಂಕಟೇಶ ಭೀಮರಾವ ನಾಯಕ**

ಕರ್ನಾಟಕ ವೈಭವ ಮುದ್ರಣಾಲಯ, ವಿಜಾಪೂರ

# ಅನುಕ್ರಮಣಿಕೆ

# ನಿವೇದನ



ಭಗಿನಿ ಕ್ರಿಸ್ಟಿನ್ (ಅಮೇರಿಕೆಯ ಭಕ್ತಳೊಬ್ಬಳು) ಸ್ವಾಮಿ ವಿವೇಕಾನಂದರ ವಿಷಯದಲ್ಲಿ ತನ್ನ ಜೀವನಸ್ಮೃತಿಯಲ್ಲಿ ಬರೆಯುತ್ತಾಳೆ:-

" ಆಗೊಮ್ಮೆ ಈಗೊಮ್ಮೆ, ಯುಗಯುಗಾಂತರದಲೊಮ್ಮೆ, ಬೇರೊಂದು ಬೆಳಕಿನ ನಾಡಿನಿಂದ ಜೀವಜ್ಯೋತಿಯೊಂದು ಈ ಭೂತಳಕ್ಕೆ ಇಳಿದು ಬರುತ್ತದೆ. ಆ ದೂರದ ನಾಡಿನ ಸಿರಿಯನ್ನು, ಬಲವನ್ನು ಮತ್ತು ಬೆಳಕನ್ನು ಕಂಗಾಲಾದ ಈ ಪ್ರಪಂಚಕ್ಕೆ ತರುತ್ತದೆ !.... ಇಂಥ ಒಂದು ಜ್ಯೋತಿಯನ್ನು ನಾನು ಕಣ್ಣಾರೆ ಕಂಡಿಹೆನು ! ಕಿವಿಯಾರೆ ಕೇಳಿಹೆನು ! ಆ ಜ್ಯೋತಿಯ ಅಡಿಯಲ್ಲಿ ನನ್ನ ಸರ್ವಾತ್ಮದ ಭಕ್ತಿಯನ್ನು ಮುಡಿಪಾಗಿ ಅರ್ಪಿಸಿಹೆನು ! ...

ಆ ಜ್ಯೋತಿ ಹುಟ್ಟಿದ ನಾಡು ಧನ್ಯ ! ಆ ಜ್ಯೋತಿ ಬೆಳಗಿದಾಗ ಆ ಬೆಳಕಿನಲ್ಲಿ ಬಾಳಿದವರು ಧನ್ಯರು ! ಆ ಜ್ಯೋತಿಯ ಅಡಿಯ ಹುಡಿಯಲ್ಲಿ ಮುಡಿಪಾದವರು ಧನ್ಯ ! ಧನ್ಯ !! ಧನ್ಯರು !!! "

ಇಂಥ ಭಕ್ತಿ, ಇಂಥ ಆವೇಶ, ಇಂಥ ಉದ್ಗಾರ ಇಂದಿಗೂ ಸ್ವಾಮಿ ವಿವೇಕಾನಂದರನ್ನು ನೆನೆಯುತ್ತಲೆ ಶ್ರದ್ಧಾಮಯ ಹೃದಯದಲ್ಲಿ ಉಕ್ಕುತ್ತವೆ. ಇಂಥ ದಿವ್ಯ ವಿಭೂತಿಯ ಜೀವನಚಿತ್ರವನ್ನು ದಿವ್ಯವಾಗಿ ಮೂಲಲೇಖಕ ರೊಮೆ ರೊಲಾ ಅತ್ಯಂತ ಶ್ರದ್ಧೆಯಿಂದ ಬರೆದಿರುವರು. ಅದನ್ನು ಕನ್ನಡಿಸಿ ಕನ್ನಡಿಗರ ಕೈಯಲ್ಲಿ ಕೊಡುವ ಸುಯೋಗ ಬಂದುದು ನನ್ನ ಸುದೈವ.

ಇದನ್ನು ಕನ್ನಡಿಸಲು ಅಪ್ಪಣೆಯನ್ನಿತ್ತ ಸ್ವಾಮಿ ಪವಿತ್ರಾನಂದ, ಅಧ್ಯಕ್ಷ, ಅದ್ವೈತಾಶ್ರಮ, ಮಾಯಾವತಿ, ಆಲ್ಮೊರಾ: ಬ್ಲಾಕುಗಳನ್ನು ಒದಗಿಸಿಕೊಟ್ಟ ಸ್ವಾಮಿ ಗಹನಾನಂದ, ವ್ಯವಸ್ಥಾಪಕ ಅದ್ವೈತಾಶ್ರಮ (ಪ್ರಕಾಶನ ವಿಭಾಗ), ಕಲಕತ್ತಾ; ಅಪ್ಪಣೆ ಬ್ಲಾಕುಗಳನ್ನು ದೊರಕಿಸಿ ಕೊಡುವ ಕಾರ್ಯದಲ್ಲಿ ಮತ್ತು ಹಲವು ರೀತಿಯಿಂದ ಸಹಾಯ ಸಲಹೆಗಳನ್ನಿತ್ತ ಸ್ವಾಮಿ ಸಂಬುದ್ಧಾನಂದ, ಅಧ್ಯಕ್ಷ, ರಾಮಕೃಷ್ಣಾಶ್ರಮ,

ನಿವೇದನ

ಖಾರ, ಮುಂಬಯಿ, ಮತ್ತು ಹರಿಜನಸೇವಕ ಶ್ರೀ. ಕಾಕಾ ಕಾರಖಾನೀಸ ವಿಜಾಪೂರ ಇವರು ತಮ್ಮ ಕೃಪಾನುಗ್ರಹಗಳಿಂದ ನನ್ನನ್ನು ಚಿರಋಣಿಯಾಗಿ ಮಾಡಿರುವರು.

ಕೈಬರೆಹದ ಪ್ರತಿಯನ್ನು ಓದಿ ಅವಶ್ಯವಾದ ತಿದ್ದುಪಡೆಗಳನ್ನು ಸೂಚಿಸಿ ಸಹಕರಿಸಿದ ಶ್ರೀ. ರಂ. ಶ್ರೀ. ಮುಗಳಿ, ಪ್ರಾಧ್ಯಾಪಕ ಸಾಂಗಲಿ ಮತ್ತು ಅಚ್ಚಿನ ಕರಡುಗಳನ್ನು ಓದಿ ಮುನ್ನುಡಿಯನ್ನು ಬರೆದು ಉತ್ತೇಜನವನ್ನಿತ್ತ ಪ್ರಿನ್ಸಿಪಾಲ ವ್ಹಿ. ಕೆ. ಗೋಕಾಕ ಕೊಲ್ಹಾಪೂರ ಇವರಿಗೂ ನಾನು ಕೃತಜ್ಞನು.

ಸ್ವಾಮಿ ವಿವೇಕಾನಂದರ "Kali the mother" ಎಂಬ ರುದ್ರರಮಣೀಯ ಮತ್ತು ಭಾವಪೂರ್ಣ ಗೀತದ ಕವಿತಾನುವಾದವನ್ನು ಮೂಲದಷ್ಟೇ ಪ್ರತಿಭಾಪೂರ್ಣವಾಗಿ ಮಾಡಿ ಅದನ್ನು ಈ ಪುಸ್ತಕದಲ್ಲಿ ಸೇರಿಸಲು ಅಪ್ಪಣೆಯನ್ನಿತ್ತುದಕ್ಕಾಗಿ ಕವಿಶ್ರೇಷ್ಠ ಶ್ರೀ ಬೇಂದ್ರೆಯವರಿಗೂ ನಾನು ಚಿರಋಣಿ.

ಮುದ್ರಣ ಮತ್ತು ಮುದ್ರಣಸಾಹಿತ್ಯದ ವಿಷಯಗಳಲ್ಲಿ ಆಗಾಗ ಅವಶ್ಯವಾದ ಸಹಾಯಸಲಹೆಗಳನ್ನಿತ್ತ ಶ್ರೀ. ಕೇಶವರಾವ ನಾಯಿಕ, ರಾಧಾ ಪ್ರಿಂಟಿಂಗ ಪ್ರೆಸ್, ವಿಜಾಪೂರ ಮತ್ತು ಮುದ್ರಣ ಕಾರ್ಯವನ್ನು ಶಕ್ಯವಾದಷ್ಟು ತೀವ್ರವಾಗಿ ಮತ್ತು ಸಾಧ್ಯವಾದಷ್ಟು ಅಂದವಾಗಿ ಕೊನೆಗಾಣಿಸಿದ್ದಕ್ಕಾಗಿ ವಿಜಾಪೂರದ ಕರ್ನಾಟಕ ವೈಭವ ಮುದ್ರಣಾಲಯದ ಒಡೆಯರಿಗೂ ನಾನು ಋಣಿಯಾಗಿರುವೆನು.

ಸದಯಹೃದಯ ಕನ್ನಡಿಗರೂ ನನ್ನ ನಮ್ರ ಸೇವೆಯನ್ನು ಸ್ವೀಕರಿಸಿ ನನ್ನನ್ನು ಋಣಿಯಾಗಿ ಮಾಡಲಿರುವರೆಂದು ನಂಬಿರುವೆನು.

**ಜಯ ಸ್ವಾಮಿ ವಿವೇಕಾನಂದ !**

ಸ್ವಾಮಿ ವಿವೇಕಾನಂದ ಜಯಂತಿ<br>ವಿಕೃತಿ ಸಂವತ್ಸರ: ಪೌಷ್ಯ ಕೃಷ್ಣ ಸಪ್ತಮಿ

**ಪದ್ಮರಾಜ ಹುನಗುಂದ**<br>ಶಾಂತಿನಿಕೇತನ: ವಿಜಾಪೂರ.

# ಮುನ್ನುಡಿ

ನನ್ನ ಸ್ನೇಹಿತರಾದ ಶ್ರೀ. ಹುನಗುಂದ ಪದ್ಮರಾಜರು ರವೀಂದ್ರ ನಾಥರ ಅನೇಕ ಸುಂದರ ಕವನಗಳ ಚೊಕ್ಕಾದ ಅನುವಾದಗಳ ಸಂಗ್ರಹ ವೊಂದನ್ನು ಕನ್ನಡಕ್ಕೆ ಕಾಣ್ಕೆಯಿತ್ತು ಈಗಾಗಲೆ ಪ್ರಸಿದ್ಧರಾಗಿದ್ದಾರೆ. ಜಗತ್ತಿನ ಉತ್ತಮ ಸಾಹಿತ್ಯವನ್ನು ಅಭ್ಯಸಿಸಿ ಅವರ ಮನಸ್ಸು ಪರಿ ಪಕ್ವವಾಗಿದೆ. ತಾವು ಸವಿದ ಸಾಹಿತ್ಯದ ಅಭಿರುಚಿ ಎಲ್ಲ ಕನ್ನಡಿಗರಿಗೂ ಲಭಿಸಬೇಕೆಂಬುದು ಪ್ರತಿಯೊಬ್ಬ ಓದುಗನ ಆಸೆಯಾಗಿರುವದು ಸಹ ಜವಾಗಿದೆ. ಆದರೆ ಈ ಈಪ್ಸಿತ ಸಂಕಲ್ಪವಾಗಿ ಪರಿಣಮಿಸಿ ಬಾಳ ಹಂದರದ ಮೇಲೆ ಬಳ್ಳಿಯಂತೆ ಹಬ್ಬಿ ಪುಷ್ಪಗೊಂಡು ಫಲವೀಯು ವದು ವಿರಳ. ಪದ್ಮರಾಜರ ಅಭ್ಯಾಸ ಈ ದಾರಿಯಲ್ಲಿ ಫಲಪ್ರದವಾ ಗಿದೆ. ರವೀಂದ್ರರ ಕೆಲವು ಕೃತಿಗಳ 'ತಾರಾಮಂಡಲ'ವನ್ನು ಕನ್ನಡ ಕ್ಕಿತ್ತು ಈಗ ಅವರು ರೊಮೆ ರೊಲಾ ಅವರು ಬರೆದ ಸ್ವಾಮಿ ವಿವೇ ಕಾನಂದರ ಚರಿತ್ರವನ್ನು ಕನ್ನಡಕ್ಕೆ ತಿರುಗಿಸಿದ್ದಾರೆ. ರೊಮೆ ರೊಲಾ ಅವರು ರವೀಂದ್ರರಂತೆ ವಿಶ್ವಸಾಹಿತಿಗಳು. ವಿಶ್ವವ್ಯಾಪಕ ದರ್ಶನವುಳ್ಳ ವರು. ಅವರು ಬರೆದ ವಿವೇಕಾನಂದರ ಚರಿತ್ರ ಅರ್ಥಪೂರ್ಣವಾಗಿದೆ; ಮೂಡಣ–ಪಡುವಣಗಳ ನವೀನ ಸಂಬಂಧದ ರತ್ನಪ್ರತೀಕವಾಗಿದೆ. ಅದನ್ನು ಕನ್ನಡಕ್ಕೆ ಮನೋಹರವಾಗಿ ತಿರುಗಿಸಿದ್ದಾರೆ ಪದ್ಮರಾಜರು. ಚಿತ್ತವನ್ನು ತಡೆದು ನಿಲ್ಲಿಸದೆ ಅದನ್ನು ಆಕರ್ಷಿಸಿ ಅಡೆ–ತಡೆಯಿಲ್ಲದೆ ಮುಂದೊಯ್ಯುವದೇ ಅನುವಾದದ ಶೈಲಿಯ ಪ್ರಸಾದಗುಣವಾಗಿದೆ. ಪದ್ಮರಾಜರು ರೊಮೆ ರೊಲಾರ ಚರಿತ್ರವನ್ನೂ ಸಂಗ್ರಹಿಸಿ ಮನಮು ಟ್ಟುವಂತೆ ಬರೆದಿದ್ದಾರೆ. ಆದರಿಂದ ರೊಲಾರ ಮಹೋನ್ನತ ಪ್ರತಿ ಭೆಯು ವಿಶಿಷ್ಟತೆಯು ಅಚ್ಚಳಿಯದೆ ಓದುಗನ ಮನಸ್ಸಿನ ಮೇಲೆ ಮೂಡು ತ್ತದೆ. ಇಂಥ ಲೇಖನಕಾರ್ಯವನ್ನು ಇಷ್ಟು ಪ್ರೀತಿಯಿಂದ ಕೈಕೊಂಡು ಕೊನೆಗಾಣಿಸುವದರಲ್ಲಿ ಪದ್ಮರಾಜರಿಗಿರುವ ಈ ವಿಶ್ವ ದರ್ಶನದ ಮೇಲಿನ ವಿಶ್ವಾಸ ವ್ಯಕ್ತವಾಗುತ್ತದೆ. ವಿಶ್ವಾಸ, ಸಂಕಲ್ಪ,

ಅದರ ಉತ್ತಮ ಫಲ,- ಇವೆಲ್ಲವುಗಳಿಗಾಗಿ ನಾನು ಪದ್ಮರಾಜರನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ. ವಿವೇಕಾನಂದರ ಜೀವನವೇ ಒಂದು ಅದ್ಭುತ ಕಾದಂಬರಿಯಂತೆ ರೋಮಾಂಚಕಾರಿಯಾಗಿದೆ. ರೊಮೆ ರೊಲಾರಂಥ ಪ್ರತಿಭಾವಂತರ ಕೈಯಲ್ಲಿ ಆ ಮಹಾ ಜೀವನದ ಮೂಲ ಕಲ್ಪನೆ ಧೀರಗಂಭೀರವಾಗಿ ಅರಳಿದೆ. ಪದ್ಮರಾಜರ ಅನುವಾದವು ಈ ಜೀವನ-ಪ್ರತಿಭೆಗಳಿಗೆ ಹಿಡಿದ ಕನ್ನಡಿಯಂತಿದೆ.

ಕನ್ನಡದಲ್ಲಿ ಸ್ವಾಮಿ ವಿವೇಕಾನಂದರ ಚರಿತ್ರೆಗಳು ಕೆಲವು ಈಗಾಗಲೆ ಬಂದಿವೆ. ಶ್ರೀ ಪುಟ್ಟಪ್ಪನವರು ತಮ್ಮದೇ ಆದ ಕಾವ್ಯಮಯ ಶೈಲಿಯಲ್ಲಿ ಆ ಚರಿತ್ರೆಯನ್ನು ಅರಳಿಸಿದ್ದಾರೆ. ಆದರೆ ರೊಮೆ ರೊಲಾರು ಬರೆವ ಚರಿತ್ರ ಪಡುವಣದ ಋಷಿಯೊಬ್ಬನು ಬರೆದ ಒಂದು ಉತ್ತಮ ಕಲಾಕೃತಿ. ಒಬ್ಬ ಭಾರತೀಯ ಮಹಾಪುರುಷನ ಚರಿತ್ರವೇ ಆ ಕಲಾಕೃತಿಯ ಸಾಮಗ್ರಿಯಾಗಿದೆ. ಮೂಡಣ-ಪಡುವಣಗಳು ಬೆರೆತು ಬರಲಿರುವ ವಿಶ್ವಸಂಸ್ಕೃತಿಯ ಸಮನ್ವಯಯುಗದ ಪೂರ್ವ ಚಿಹ್ನವೆಂದರೇ ರೊಲಾರ ಈ ಕಲಾಕೃತಿಯೆಂದು ಹೇಳಬಹುದು. ಈ ಸಮನ್ವಯದ ಲಕ್ಷಣಗಳೇನು ? ಪಡುವಣದ ಒಬ್ಬ ಋಷಿ ಮೂಡಣದ ಓರ್ವ ಅವತಾರಿಕ ತಪಸ್ವಿಯನ್ನು ನೋಡುವ ದೃಷ್ಟಿ ಯಾವುದು? ಪಡುವಣವನ್ನು ನಾವು ಹೇಗೆ ಕಾಣಬೇಕು? ನಮ್ಮನ್ನು ಪಡುವಣ ಹೇಗೆ ಕಾಣುತ್ತಿದೆ? ಇವೆಲ್ಲ ವಿಷಯಗಳನ್ನು ತಿಳಿಯಲು ರೊಮೆ ರೊಲಾರ ಕಲಾಕೃತಿ ಹೆಚ್ಚಿನ ಸಾಧನೆಯಾಗಿದೆ. ಅಲ್ಲದೆ ಜಗತ್ಪ್ರಸಿದ್ಧ ಸಾಹಿತಿಯೊಬ್ಬ ಜೀವನಚರಿತ್ರವೆಂಬ ಸಾಹಿತ್ಯಪ್ರಕಾರವನ್ನು ಹೇಗೆ ಬಳಸಿಕೊಂಡಿದ್ದಾನೆ? ಒಂದು ಮಹಾ ಜೀವನದ ಬೇರುಗಳನ್ನು ಕಂಡು ಹಿಡಿದು ಶಾಖೋಪಶಾಖೆಯಾದ ಅದರ ಬೆಳುವಣಿಗೆಯನ್ನು ಹೇಗೆ ವಿವರ-ವಿವರವಾಗಿ ಗುರುತಿಸಿದ್ದಾನೆ? ಇದನ್ನೆಲ್ಲ ನಾವು ಈ ಕಲಾಕೃತಿಯಲ್ಲಿ ಕಾಣುತ್ತೇವೆ.

ಮುಖ್ಯವಾಗಿ ರೊಮೆ ರೊಲಾರವರು ಸ್ವಾಮಿ ವಿವೇಕಾನಂದರ

ಮಾನವೀಯತೆಯನ್ನು ಪ್ರತಿಪಾದಿಸಿದ್ದಾರೆ. ಸೀಲ್ ಎಂಬ ಸಹಾಧ್ಯಾಯಿಯ ಪ್ರಭಾವ, ರಾಮಕೃಷ್ಣ ಪರಮಹಂಸರ ಕೃಪಾದೃಷ್ಟಿ, ನಾಸ್ತಿಕ-ಆಸ್ತಿಕ ವಿಚಾರಗಳ ತಾಕಲಾಟದಲ್ಲಿ ಕೊನೆಗೆ ನೆಲೆಯೂರಿದ ಆಸ್ತಿಕತೆ,-ಇವನ್ನೆಲ್ಲ ವಿವರಿಸಿ ಸ್ವಾಮಿಯವರ ಜೀವನದ ಮುಖ್ಯ ಸೂತ್ರದ ಕಡೆಗೆ ರೊಮೆ ರೊಲಾರವರು ಲಕ್ಷವನ್ನೆಳೆದಿದ್ದಾರೆ: " ಪ್ರಖರ ಅದ್ವೈತಲಾಲಸೆ, ದುಃಖಿಯಾದ ಮಾನವಕುಲದ ವಿಷಯದಲ್ಲಿ ತಡೆಯಲಾರದ ಕರುಣೆ ಈ ಎರಡೂ ಧ್ರುವಗಳ ನಡುವೆ ಅವರು ಸಮತೂಕವನ್ನು ಕೊನೆಯವರೆಗೆ ಸಾಧಿಸಿದುದು ಚಮತ್ಕಾರವೇ ಸರಿ. ಸಮತೂಕ ಶಕ್ಯವಿಲ್ಲದಾಗ, ಎರಡರಲ್ಲಿ ಒಂದನ್ನು ಆರಿಸಬೇಕಾಗಿ ಬಂದಾಗ, ಎರಡನೆಯದಕ್ಕೆ ಗೆಲುವಾಯಿತು." ( ಪು. ೧೩೪ ) ಈ ದ್ವಂದ್ವ ಇಲ್ಲವೆ ಸಾಮರಸ್ಯ ಅದ್ಭುತವಾಗಿ ನಮ್ಮ ಮನಸ್ಸಿನಲ್ಲಿ ನಡುವಂತೆ ರೊಲಾರ ಲೆಕ್ಕಣಿಕೆಯು ತನ್ನ ಕಾರ್ಯವನ್ನೆಸಗಿದೆ.

ವಿಪುಲವಾದ ರಾಮಕೃಷ್ಣವಾಙ್ಮಯದಲ್ಲಿ ಮೂಲ ವಸ್ತುವಿಗೆ ಪೋಷಕವಾಗುವಂತೆ ಉಕ್ತಿಗಳನ್ನೂ ಸನ್ನಿವೇಶಗಳನ್ನೂ ಎತ್ತಿಕೊಳ್ಳುವದರಲ್ಲಿ ರೊಲಾರು ಬಲ್ಲಿದರು. ರಾಮಕೃಷ್ಣರು ಹೊರಗೆ ಭಕ್ತರಾಗಿಯೂ ಒಳಗೆ ಜ್ಞಾನಿಗಳಾಗಿಯೂ ಇದ್ದರು; ತಾವು ಹೊರಗೆ ಜ್ಞಾನಿಗಳಾಗಿಯೂ ಒಳಗ ಭಕ್ತರಾಗಿಯೂ ಇರುವರೆಂಬ ವಿವೇಕಾನಂದರ ಉಕ್ತಿ ಎಷ್ಟು ಅರ್ಥಪೂರ್ಣವಾಗಿದೆ ! ಅಲ್ಲದೆ ಅನುಭಾವದ ವಿಜ್ಞಾನವನ್ನೂ ತಿಳಿಯುವ ಹಟ ಪಡುವಣಕ್ಕಿದೆ. ಅಮರನಾಥ ಗುಹೆಗೆ ನಿವೇದಿತಾ ದೇವಿಯೊಡನೆ ವಿವೇಕಾನಂದರು ಹೋದಾಗ ಅಲ್ಲಿ ಆ ದಿವಸ ದರ್ಶನದ ಆಘಾತದಿಂದ " ಎಡಗಣ್ಣಿನಲ್ಲಿ ರಕ್ತ ಚಿಮ್ಮುತ್ತಿತ್ತು. ಹೃದಯ ಕ್ರಿಯೆಯ ಮೇಲೆ ಪರಿಣಾಮವಾಗಿತ್ತು" ಎಂಬ ಮಾತನ್ನು ಎತ್ತಿ ರೊಮೆ ರೊಲಾರು ಅತ್ತ ನಮ್ಮ ದೃಷ್ಟಿಯನ್ನು ಸೆಳೆದಿದ್ದಾರೆ. ಅದೇ ಮೇರೆಗೆ ವಿವೇಕಾನಂದರ ಕೊನೆಯ ಗಳಿಗೆಯ ಬಗ್ಗೆ ಒಬ್ಬ ಶಿಷ್ಯಬಂಧು ಹೇಳಿದ ಮಾತನ್ನು ಉಲ್ಲೇಖಿಸಿದ್ದಾರೆ: " ಮೂಗಿನಲ್ಲಿ ಬಾಯಿಯಲ್ಲಿ ಮತ್ತು

ಕಣ್ಣಲ್ಲಿ ಕೊಂಚ ನೆತ್ತರವಿತ್ತು."

ನವೀನ ಯುಗದ ವಿಶ್ವರೂಪದರ್ಶನಕ್ಕೆ ರಾಮಕೃಷ್ಣಪರಮಹಂಸರೇ ದೀಕ್ಷಾಗುರು. ಸರ್ವಯೋಗಸಮನ್ವಯ ಅವರಲ್ಲಿ ಮೂರ್ತಿಮಂತವಾಯಿತು. ಸ್ವಾಮಿ ವಿವೇಕಾನಂದರು ಕ್ಷರ-ಅಕ್ಷರ ಬ್ರಹ್ಮರಿಲ್ಲವೆ ಸಗುಣ-ನಿರ್ಗುಣೋಪಾಸನೆಗಳ ಸಮನ್ವಯವನ್ನು ತಮ್ಮ ಜೀವನದಲ್ಲಿಯೇ ಸಾಧಿಸಿ ತೋರಿಸಿದರು. ಪ್ರತಿಯೊಂದು ಜ್ಞಾನಕ್ಷೇತ್ರದಲ್ಲಿ-ಜೀವನಕ್ಷೇತ್ರದಲ್ಲಿ-ವಿವರವಿವರವಾಗಿ ಮೂಡಣ-ಪಡುವಣಗಳ ಸಮನ್ವಯವನ್ನು ಸಾಧಿಸಿ ತೋರಿಸಬೇಕೆಂದು ಅವರ ಹಂಬಲವಿತ್ತು. ಈ ಹಂಬಲದ ಪೂರ್ತಿಯನ್ನು ಶ್ರೀ ಅರವಿಂದರ ಹಾಗೂ ಶ್ರೀ ಮಾತೆಯವರ ಕಾರ್ಯದಲ್ಲಿ ನಾವಿಂದು ಕಾಣುತ್ತೇವೆ. ರೊಮೆ ರೊಲಾರೇ ಬರೆದಂತೆ ಈ ಸಮನ್ವಯದ ಪೂರ್ಣತಮ ಸಿದ್ಧಿಯನ್ನೇ ನಾವು ಶ್ರೀ ಅರವಿಂದರ ಕೃತಿಗಳಲ್ಲಿ ಕಾಣುತ್ತೇವೆ. "ವಿವೇಕಾನಂದರ ಧ್ವನಿಯನ್ನು ನಾನು ಸತತವಾಗಿ ಕೇಳುತ್ತಿದ್ದೇನೆಂಬುದು ನಿಜವಾದ ಸಂಗತಿ. ಸೆರೆಮನೆಯಲ್ಲಿ ನನ್ನ ಏಕಾಂತ ಧ್ಯಾನದಲ್ಲಿ ಅರ್ಧ ತಿಂಗಳ ವರೆಗೆ ಇದು ಸಂಭವಿಸಿತು. ಅವರ ಸನ್ನಿಧಿಯೂ ನನ್ನ ಅನುಭವಕ್ಕೆ ಬರುತ್ತಿತ್ತು. ಆಧ್ಯಾತ್ಮಿಕ ಅನುಭವದ ಒಂದು ವಿಶಿಷ್ಟ, ನಿರ್ದಿಷ್ಟ ಆದರೆ ಮಹತ್ವದ ಕ್ಷೇತ್ರವನ್ನು ಮಾತ್ರ ಕುರಿತು ಆ ದನಿಯು ಮಾತನಾಡಿತು. ಹಾಗೂ ಆ ವಿಷಯವನ್ನು ಕುರಿತು ಹೇಳಬೇಕಾಗಿರುವದನ್ನೆಲ್ಲ ಹೇಳಿದೊಡನೆ ಅದು ಸುಮ್ಮನಾಯಿತು" ಎಂದು ಶ್ರೀ ಅರವಿಂದರೇ ಒಂದೆಡೆಗೆ ಬರೆದಿದ್ದಾರೆ. (ಪು. ೪೩ Sri Aurobindo and his Asram) ಇಂದಿನ ಜೀವನದಲ್ಲಿ ಬೇಕಾದ ಪ್ರವೃತ್ತಿ-ನಿವೃತ್ತಿಗಳ ಶ್ರೇಷ್ಠ ಸಮನ್ವಯವನ್ನು ಸ್ವಾಮಿ ವಿವೇಕಾನಂದರು ತೋರಿಸಿದರು, ಬರಲಿರುವ ಪೂರ್ಣ ವಿಕಾಸದ ಸಂದೇಶವನ್ನು ಶ್ರೀ ಅರವಿಂದರು ಸಾರುತ್ತಿದ್ದಾರೆ. ಹೀಗೆ ಭಾರತದ ಪುನರುಜ್ಜೀವನವು ಒಂದು ಅವಿಚ್ಛಿನ್ನ ಪರಂಪರೆಯನ್ನು ಹಿಡಿದು ಸಾಗಿದೆ.

"ಭಗವಂತನ ಶೋಧವನ್ನು ಎಂದೂ ತೊರೆಯದೆ ಹೋದರೆ ಭಾರತ ಅಮರ ಭೂಮಿ. ರಾಜಕಾರಣ ಹಾಗು ಸಾಮಾಜಿಕ ಕಲಹಗಳಲ್ಲಿ ವೈಮರೆತರೆ ಭಾರತದ ಅವತಾರ ಮುಗಿಯಿತು!" ಎಂದು ಒಂದೆಡೆಗೆ ಸ್ವಾಮಿ ವಿವೇಕಾನಂದರೇ ಹೇಳಿದ್ದಾರೆ. ಈ ರತ್ನಪಾಠವನ್ನು ಇಂದು ದೇಶ ನೆನೆಯಲಿ. ಅಂಥ ನೆನಹಿಗಾಗಿ 'ಕರ್ನಾಟಕಾಂತರ್ಗತ ಭಾರತದೇವಿ'ಗೆ ಈ ಮುದ್ದುಗ್ರಂಥ ನೆರವಾಗಲಿ.

ಕೊಲ್ಲಾಪುರ.
೯-೧೦-೧೯೫೦

ವಿ. ಕೃ. ಗೋಕಾಕ

# ಒಪ್ಪೋಲೆ

| ಪುಟ | ಸಾಲು | | ತಪ್ಪು | ಒಪ್ಪು |
|---|---|---|---|---|
| ೩೧ | ಕೆಳಗಿನಿಂದ | ೫ | ಹೊತ್ತು | ಹೊತ್ತ |
| ೩೨ | ,, | ೩ | ಪ್ರಭಾವ | ಸ್ವಭಾವ |
| ೪೯ | ಮೇಲಿನಿಂದ | ೧೦ | ಅದರೆ ಆವರ | ಆದರೆ ಅವರ |
| ೫೫ | ,, | ೧ | ಬೋ, | ಬೋ |
| ೫೬ | ,, | ೧೭ | ಮುಚ್ಚಿಕೊಂಡು | ಮುಚ್ಚಿಕೊಂಡರು |
| ೫೭ | ,, | ೨ | ಹೆಸರ | ಹೆಸರು |
| ,, | ,, | ೩ | ದೇಸೆದೆಸೆಯಲ್ಲಿ | ದೆಸೆದೆಸೆಯಲ್ಲಿ |
| ೯೨ | ,, | ೧೪ | ವಿವೇಕಾನಂದರ | ವಿವೇಕಾನಂದರು |
| ೯೪ | ಕೆಳಗಿನಿಂದ | ೩ | ಮಹಾತ್ಮ್ಯ | ಮಾಹಾತ್ಮ್ಯ |
| ೯೮ | ,, | ೪ | ಹೊರತು | ಹೊತ್ತು |
| ೧೭೩ | ಮೇಲಿನಿಂದ | ೮ | ಮತೊಬ್ಬ | ಮತ್ತೊಬ್ಬ |
| ೧೭೪ | ,, | ೭ | ಮಹಾತ್ಮ್ಯ | ಮಾಹಾತ್ಮ್ಯ |
| ೧೮೭ | ,, | ೧೪ | ಕತೆಗಾರನ | ಕಲೆಗಾರನ |
| ೧೮೮ | ,, | ೩ | ಒಂದೇ | ಒಂದೇ. |

ಸಂಸಾರದ ಸುಖದುಃಖದ ಸರಸ ಸಂಗಾತಿ-ಗೃಹಲಕ್ಷ್ಮಿ

# ಮಂಜುಳಾದೇವಿಗೆ

## ನಲ್ ಕಾಣಿಕೆ

! ! !



ಅಂದು ನಾನು ಕನ್ಯಾರೆ ಕೈಯಾರೆ
ನಿನ್ನ ಕೈಯಲಿರಿಸಿ ನಲಿಯಬೇಕೆಂದ ಕಾಣಿಕೆ !
ಇಂದು ನೀನು ಕಣ್ಮರೆಯಾಗಿಹೆ !
ಕೈಗೆರವಾಗಿಹೆ ! ಸಾವಿನಾಚೆಯ ಸೀಮೆಗೆ ಹೋಗಿಹೆ !
ನಲ್ಮೆಯ ನೆಲೆಯಿಂದೆ
ಅಳಲ ಅಲೆಯ ಮೇಲೆ ತೇಲಿ ಬರುತಿದೆ ಕಾಣಿಕೆ !
ಕಣ್ಮರೆಯಾಗಿಯೂ ಎಲ್ಲಿರುವೆಯಾದರೂ ಇದೋ ಸ್ವೀಕರಿಸು !



ಭಗವಾನ್ ರಾಮಕೃಷ್ಣ

# ಸ್ವಾಮಿ ವಿವೇಕಾನಂದ

## ೧ ಪ್ರಿಯಶಿಷ್ಯ

ಭಗವಾನ್ ರಾಮಕೃಷ್ಣರ ಶಿಷ್ಯರೆಲ್ಲರೂ ಭಕ್ತಿಯೋಗ-ಕರ್ಮಯೋಗಗಳಲ್ಲಿ ಸಿದ್ಧಿ ಹೊಂದಿದರು. ಅವರೆಲ್ಲರಲ್ಲಿಯೂ ಓರ್ವ ಶಿಷ್ಯನ ವಿಷಯದಲ್ಲಿ ಮಾತ್ರ ಅವರು ಅನನ್ಯಭಾವನೆಯನ್ನು ತಳೆದಿದ್ದರು. ಶ್ರೀರಾಮಕೃಷ್ಣರನ್ನು ಆ ತರುಣ ಇನ್ನೂ ಕಂಡಿರಲಿಲ್ಲ, ಆದರೂ ಅವನ ಹಿಂದುಮುಂದಿನದನ್ನೆಲ್ಲ ಶ್ರೀರಾಮಕೃಷ್ಣರು ತಮ್ಮ ದಿವ್ಯದೃಷ್ಟಿಯಿಂದ ಆಗಲೇ ಕಂಡು ಹಿಡಿದಿದ್ದರು. ಮೊದಲ ನೋಟದಲ್ಲಿಯೇ ಅವನನ್ನು ತಮ್ಮ ಶಿಷ್ಯನೆಂದು ಅರಿಸಿದರು; ಅರಿತರು, ಅವನೇ ಮುಂದಿನ ಮಾನವಕುಲದ ಆಧ್ಯಾತ್ಮಿಕ ಅಧಿನಾಯಕನೆಂದು. ಅವನೇ ನರೇಂದ್ರನಾಥ ದತ್ತ —ಸ್ವಾಮಿ ವಿವೇಕಾನಂದ.

ಸಾಧಕರ ಭವ್ಯ ಭವಿತವ್ಯದ ಭಾಗೀರಥಿಯನ್ನು ಕ್ಷಣಮಾತ್ರದಲ್ಲಿ ಕಂಡು ಹಿಡಿಯುವ ದಿವ್ಯ ಅಂತರ ದೃಷ್ಟಿ ಪರಮಹಂಸರದು. ಭವಿಷ್ಯದ ಗರ್ಭದಿಂದ ಹೊರಬಿದ್ದು ಆ ಮಹಾಶಿಷ್ಯ ಮಾನವನ ಮೈ ಹೊತ್ತು ನಿಲ್ಲುವ ಮುಂಚೆಯೇ ಅವನನ್ನು ಅವರು ದಿವ್ಯ ದರ್ಶನದಲ್ಲಿ ಕಂಡಿದ್ದರು. ಹಿಮಗಿರಿಯ ಕಾಡುಗಲ್ಲಿನ ಕವಚವನ್ನು ಕೊರೆದು ಹೊರಗೆ ಧುಮುಕುವ ಹೊಳೆಯಂತೆ ಶ್ರೀರಾಮಕೃಷ್ಣರ ದೃಷ್ಟಿಪ್ರಹಾರದ ಲೀಲಾಮಾತ್ರದಿಂದ ಮುಸುಕು ಹರಿದು ಹೊರಬಿದ್ದು ಹೊಳೆಯಾಗಿ ಹರಿದ ವಿವೇಕಾನಂದರ ಆಧ್ಯಾತ್ಮಿಕ ಭಾಗ್ಯದ ಭಾಗೀರಥಿ ಶ್ರೀರಾಮಕೃಷ್ಣರಿರದಿದ್ದರೆ ಮರಳುಕಾಡಿನಲ್ಲಿ ಮಾಯವಾಗಿ ಹೋಗುತ್ತಿದ್ದಳು.

ತಮ್ಮ ಸಂಕಲ್ಪದ ಪೂರ್ತಿಗಾಗಿ—ಮಾನವನ ಉದ್ಧಾರಕ್ಕಾಗಿ—ಮಾನವನಿಗೆ ದಾರಿ ತೋರುವುದಕ್ಕೆ—ದೇಹದಿಂದ ತಮಗಿಂತ ಗಟ್ಟಿಗನಾದ

ಆಧ್ಯಾತ್ಮವೀರನನ್ನು ಪ್ರಪಂಚಕ್ಕೆ ಕಳಿಸಬೇಕಾಗಿತ್ತು ಶ್ರೀರಾಮಕೃಷ್ಣರಿಗೆ. ಅವರ ನಿರ್ಧಾರ ಸರಿಯಾಗಿತ್ತು. ಬಲವಾದ ದೇಹ, ಲೋಕವನ್ನೇ ತಿರುವಿ ಹಾಕುವ ತೋಳು, ಪ್ರಪಂಚವನ್ನೇ ಸುತ್ತಿ ಬರುವ ಕಾಲು, ಕಾರ್ಯಕರ್ತರ ತಂಡವನ್ನು ಹುರಿದುಂಬಿಸಿ ಎಳೆದೊಯ್ಯುವ ಮುಂದಾಳು, ಮೇಲಾಗಿ ಪ್ರಪಂಚವನ್ನೇ ಪ್ರೀತಿಯ ತೆಕ್ಕೆಯಲ್ಲಿ ಸೆಳೆದುಕೊಳ್ಳುವ ವಿಶಾಲಹೃದಯ—ಇವೆಲ್ಲ ಮೂರ್ತಿವೆತ್ತು ನಿಂತ ಒಂದು ವ್ಯಕ್ತಿ ಬೇಕಾಗಿದ್ದಿತು ಅವರಿಗೆ. ಆದರೆ ನರೇಂದ್ರನಲ್ಲಿ—ಚಂಡಿ ತಾಳಗೆಟ್ಟ ಮತ್ತು ತೂಕತಪ್ಪಿದ ಆ ಹುಡುಗನಲ್ಲಿ—ಇಂಥ ವ್ಯಕ್ತಿಯನ್ನು ಕಂಡು ಹಿಡಿದ ಶ್ರೀರಾಮಕೃಷ್ಣರ ದಿವ್ಯದೃಷ್ಟಿ ಅದೆಂಥದು !

ಅವರೀರ್ವರ ಮೊದಮೊದಲಿನ ಸಂದರ್ಶನಗಳನ್ನು ವಿವರವಾಗಿ ಬಣ್ಣಿಸುವುದು ಅವಶ್ಯ. ಆ ಗುರುಗಳನ್ನು ಆ ಶಿಷ್ಯ ಆರಿಸಿಕೊಂಡನೇಕೆ, ಅವರಲ್ಲಿ ಬೆರೆತು ಹೋದನೇಕೆ, ಯಾವ ಅನುಭವ ಶಿಷ್ಯನನ್ನು ಗುರುಗಳತ್ತ ಸೆಳೆಯಿತು—ಇವೆಲ್ಲ ಮಾತು ಆಗ ಹೊಳೆಯುವವು.

ಹೆಸರಾದ ಒಂದು ದೊಡ್ಡ ಕ್ಷತ್ರಿಯ ಮನೆತನದಲ್ಲಿ ಹುಟ್ಟಿದನು ನರೇನ್. ಅವನ ಬಾಳ ಮೇಲೆಲ್ಲ ಕ್ಷಾತ್ರ ವರ್ಚಸ್ಸಿನ ಅಚ್ಚು ಒತ್ತಿದಂತಿತ್ತು. ಕಲಕತ್ತೆಯಲ್ಲಿ ೧೮೬೩ನೇ ಇಸವಿಯ ಜನವರಿ ೧೨ ನೇ ದಿನ ಅವನ ಜನ್ಮ. ಅವನ ತಾಯ ಮೊಗದಲ್ಲಿ ರಾಜಕಳೆ ಉಕ್ಕುತ್ತಿತ್ತು. ಒಳ್ಳೇ ವಿದ್ಯಾವತಿ. ರಾಮಾಯಣ ಮಹಾಭಾರತ ಮುಂತಾದ ಮಹಾಕಾವ್ಯಗಳ ಸಾರವನ್ನು ಸವಿದು ಬಲಗೊಂಡಿತ್ತು ಅವಳ ವೀರಹೃದಯ. ಆಡಂಬರದ ಗಡಿಬಿಡಿಯ ಜೀವ ಅವನ ತಂದೆ. 'ನನ್ನ ಮುಂದೆ ಯಾರು' ಎಂಬ ಹಂಗಿಲ್ಲದ ಅಹಂಕಾರ ಮತ್ತು ಮಾನವತೆಯ ವಿಷಯದಲ್ಲಿಯ ವಿಶಾಲ ಭಾವನೆ ಇವುಗಳ ಹುಮ್ಮಸ್ಸಿನಿಂದ ಅವನು ಜಾತೀಯ ಸಂಕುಚಿತ ಸಂಕಲೆಗಳನ್ನು ಕಡಿದು ಹಾಕಿದ್ದನು. ಆದರೆ ನರೇಂದ್ರನ ತಾತ ಸುಸಂಸ್ಕೃತ, ಲಕ್ಷ್ಮೀಪುತ್ರ. ಇಪ್ಪತ್ತೈದು ವರ್ಷದವನಿರುವಾಗಲೇ ಸತಿಸುತರನ್ನು ಸಿರಿಸೊತ್ತುಗಳನ್ನು ತೊರೆದನು. ಸಮಾಜದ ಗೌರವಾಡಂಬರಗಳಿಗೆ

ಶರಣು ಹೊಡೆದು ಅಡವಿಯನ್ನು ಸೇರಿದನು, ಸನ್ಯಾಸಿಯಾದನು. ಅಂದಿನಿಂದ ಅವನ ಸುಳುವೇ ಇಲ್ಲ.

ಮಗು ಮತ್ತು ಬಾಲಕ ಎಂದು ನರೇಂದ್ರ ಕಳೆದ ಬಾಳು ಕಲೆಗಾರನಾದ ಚೆಲುವನಾದ ಅರಸುಮಗನಿಗೆ ಸರಿಹೋಗುವಂಥದಿತ್ತು. ಬುದ್ಧಿಯ ವೈಭವ ಮತ್ತು ವಿವಿಧತೆ ಅವನಿಗೆ ದೈವದ ಕಾಣಿಕೆ. ಅವನದು ಸಿಂಹದ ಧೀರೋದಾತ್ತ ಸೌಂದರ್ಯ. ಎರಳೆಯ ಚತುರ ಚಪಲ ಅಂಗಾಂಗಗಳಲ್ಲಿ ಚಿನ್ಮೂರ್ತಿದ್ದಿತು. ಗರಡೀಸಾಧನೆಯಲ್ಲಿ ಗಂಡುಗಲಿ. ಮುಷ್ಟಿಯುದ್ಧದಲ್ಲಿ ಮುಂದಾಳು. ಈಜುವುದರಲ್ಲಿ ಹುಮ್ಮಸ್ಸು. ಕುದುರೆಯ ಏರಾಟದಲ್ಲಿ ಹೌಸು. ತರುಣತಂಡದ ಬಾಲಕೃಷ್ಣ. ಸೊಬಗಿನ ಮಾಟಗಾರ. ಭಜನ ಸಂಕೀರ್ತನೆಗಳಲ್ಲಿಯೂ ಅವನದು ಕಲಾಮಯ ಭಕ್ತಿಪರವಶ ನರ್ತನ. ಇಂಪಾದ ದನಿ. ಅದೇ ಮುಂದೆ ಶ್ರೀರಾಮಕೃಷ್ಣರನ್ನು ಮೋಹಿಸುವುದಿತ್ತು. ನಾಲ್ಕೈದು ವರ್ಷ ಪರಿಶ್ರಮಿಸಿ ಹಿಂದೂ ಗವಾಯಿಗಳ ಮತ್ತು ಮುಸಲ್ಮಾನೀ ಉಸ್ತಾದರ ಹತ್ತರ ಗಾಯನವಾದನ ಕಲಿತನು, ಗೀತಗಳನ್ನು ಬರೆದನು. ಹಿಂದೂ ಸಂಗೀತದ ಶಾಸ್ತ್ರ ಮತ್ತು ದರ್ಶನ ಇವುಗಳನ್ನು ಕುರಿತು ಸಶಾಸ್ತ್ರ ಸಾಧಾರವಾದ ನಿಬಂಧವೊಂದನ್ನು ಬರೆದು ಪ್ರಕಟಿಸಿದನು. ಗಾಯನದ ವಿಷಯದಲ್ಲಿ ಎಲ್ಲೆಲ್ಲಿಯೂ ಅವನೊಬ್ಬ ಅಧಿಕಾರಿ. ಸರಸ್ವತಿಯ ಮತ್ತು ಅನಂತ ಚಿದಾನಂದನ ಮಂದಿರಕ್ಕೆ ಸಂಗೀತ ಒಂದು ದಾರಿ ಅವನಿಗೆ.

ಕಾಲೇಜದಲ್ಲಿ ಅವನ ತೇಜಸ್ವಿಯಾದ ಬುದ್ಧಿ ಹೆಸರಾದುದು. ಜ್ಯೋತಿಃಶಾಸ್ತ್ರ, ಗಣಿತ, ತತ್ವಜ್ಞಾನ, ಭಾರತೀಯ ಮತ್ತು ಪಾಶ್ಚಿಮಾತ್ಯ ಭಾಷೆ—ಎಲ್ಲದರಲ್ಲಿಯೂ ಅವನನ್ನು ಸರಿಗಟ್ಟುವವರಿಲ್ಲ. ಆಂಗ್ಲ ಮತ್ತು ಭಾರತೀಯ ಕವಿಗಳ ರಸಕೃತಿಗಳನ್ನು ಸವಿದನು. ಗ್ರೀನ್, ಗಿಬನ್ ಮುಂತಾದವರ ಐತಿಹಾಸಿಕ ಗ್ರಂಥಗಳನ್ನು ತಿರುವಿ ಹಾಕಿದನು. ಫ್ರಾನ್ಸದ ರಾಜ್ಯಕ್ರಾಂತಿ ಮತ್ತು ನೆಪೋಲಿಯನ್ ಅಂದರೆ ಅವನ ಮೈ ಉಬ್ಬುತ್ತಿತ್ತು.

ಚಿಕ್ಕಂದಿನಿಂದಲೂ ಅವನಿಗೆ ಧ್ಯಾನದಲ್ಲಿ ಆಸಕ್ತಿ. ಇರುಳಿನಲ್ಲಿ

ವೇದಾಂತ ಮತ್ತು "ಇಮಿಟೇಶನ್ ಆಫ್ ಕ್ರಾಯಿಸ್ಟ್" ಓದುತ್ತಿದ್ದನು. ದಾರ್ಶನಿಕ ಚರ್ಚೆಗಳಲ್ಲಿ ಅವನಿಗೆ ಪ್ರೀತಿ. ಈ ವಾದವಿವಾದ, ವಿಮರ್ಶೆ, ತರ್ಕ, ವಿವೇಕ ಇವೇ ಮುಂದೆ ಅವನಿಗೆ "ವಿವೇಕಾನಂದ" ಎಂಬ ಹೆಸರನ್ನು ತಂದವು.

ಭಾರತೀಯರ ಮತ್ತು ಜರ್ಮನ್ನರ ತತ್ವಸೌಂದರ್ಯದ ಕೂಡ ಗ್ರೀಕರ ಸೌಂದರ್ಯದರ್ಶನವನ್ನು ಸಮನ್ವಯಿಸಿದನು. ಈ ವಿಶ್ವವಿಶಾಲತೆ ಮತ್ತು ಸರ್ವಸಮತೆಗಳ ಮೇಲೆ ಇಟ್ಟ ಮುಕುಟ ಅವನ ಧರ್ಮನಿರ್ಭರತೆ ಮತ್ತು ಚಿತ್ತನಿರ್ಮಲತೆ. ಬಾಳಿನ ಸಿರಿಸೊಗಸು ದೈವಾಯತ್ತವಾಗಿ ಬಂದಿದ್ದರೂ ಈ ಚೆಲುವ ತರುಣ ತನ್ನನ್ನು ಕಡುತರ ವೈರಾಗ್ಯದ ಕಟ್ಟಿನಲ್ಲಿ ಬಿಗಿದುಕೊಂಡನು. ಯಾವ ಮತಪಂಥವೂ ತನ್ನದೆಂಬ ಆಗ್ರಹವಿರಲಿಲ್ಲ ಅವನಿಗೆ ಇನ್ನೂ. ಆದರೂ ಮೈ-ಮನಸುಗಳ ನಿರ್ಮಲತೆ ಒಂದು ಆಧ್ಯಾತ್ಮಿಕ ಶಕ್ತಿಯೆಂದೂ ಅದರ ಜ್ಯೋತಿ ಬಾಳಿನಲ್ಲಿ ಎಲ್ಲೆಲ್ಲೂ ಬೆಳಗುತ್ತದೆಂದೂ ಅವನ ಭಾವನೆ. ಸ್ವಲ್ಪಾದರೂ ಕುಂದು ತಗುಲಿದರೆ ಅದು ಕುಂದುವುದೆಂದು ಅವನ ನಂಬಿಕೆ. ಮೇಲಾಗಿ ಈಶಸಂಕಲ್ಪ ತನ್ನನ್ನು ಯಾವ ಮಹಾಯಾತ್ರೆಯತ್ತ ಎಳೆದೊಯ್ಯುತ್ತಿದೆಂಬ ವಿಷಯದಲ್ಲಿ ನಿಶ್ಚಿತ ಕಲ್ಪನೆ ಇರದಿದ್ದರೂ, ತನ್ನದೊಂದು ಉಜ್ವಲ ಜೀವನೋದ್ದೇಶವಿದೆ, ಅದಕ್ಕೆ ತಾನು ಅಣಿಯಾಗಬೇಕು, ಅದನ್ನು ತಾನು ಸಾಧಿಸಬೇಕು, ಎಂಬದು ಅವನ ಶ್ರದ್ಧೆ.

ಇಂಥ ದೈವಾಯತ್ತ ಗುಣಗಣ ಮತ್ತು ವಿರೋಧಿಯಾದ ಆಕಾಂಕ್ಷೆಗಳ ತಾಕಲಾಟ ಇವುಗಳಿಂದ ಅವನು ಹಲವು ವರ್ಷ—ವ್ಯಕ್ತಿತ್ವದ ಅಚ್ಚು ನಿಚ್ಚಳವಾಗಿ ಮೂಡುವವರೆಗೆ—ದೊಡ್ಡದೊಂದು ಆತ್ಮಿಕ ಬಿರುಗಾಳಿಯಲ್ಲಿ ತೊಳಲಾಡಿದನು. ತನ್ನ ವಯಸ್ಸಿನ ಹದಿನೇಳನೆಯ ಮತ್ತು ಇಪ್ಪತ್ತೊಂದನೆಯ ವರ್ಷಗಳ ನಡುವೆ ಒಂದರ ಮೇಲೊಂದು ಹೆಚ್ಚೆಚ್ಚು ಆಳವಾದ ಬೌದ್ಧಿಕ ಮುಗ್ಗಟ್ಟು ಅವನನ್ನು ಗಾಸಿ ಮಾಡಿದವು. ಆಧ್ಯಾತ್ಮಿಕ ಸ್ತಿಮಿತಕ್ಕೆ ಬರುತ್ತಲೆ ಆ ಮುಗ್ಗಟ್ಟು ಮುಗ್ಗಿದವು.

ಮೊದಲು ಸ್ಟುಅರ್ಟ ಮಿಲ್ ಅವರ "ಧರ್ಮದ ಮೇಲಿನ ನಿಬಂಧ

ಗಳು” ಎಂಬ ಪುಸ್ತಕದ ಪರಿಣಾಮ ಅವನ ಮನಸ್ಸಿನ ಮೇಲೆ ಆಯಿತು. ಬ್ರಹ್ಮ ಸಮಾಜದ ಸುಧಾರಕ ಪಂಥದಲ್ಲಿ ಗಳಿಸಿಕೊಂಡ ಮೇಲಮೇಲಿನ ಆಸ್ತಿಕತೆ ಕುಪ್ಪಳಿಸಿತು. ಪ್ರಕೃತಿಯ ದುಃಸ್ವರೂಪ ಅವನ ಕಣ್ಣಿಗೆ ಕಂಡಿತು. ಅದರ ಕೂಡ ಹೋರಾಡಿದನು. ಆದರೆ ಮಾಯೆಯ, ನಿರ್ವೇದದ ಮುಸುಕನ್ನು ಹರಿದೊಗೆಯಲು ಅಸಮರ್ಥನಾದನು. ಹರ್ಬರ್ಟ್ ಸ್ಪೆನ್ಸರರ ಕೂಡ ಪತ್ರವ್ಯವಹಾರ ಮಾಡಿದನು. ಅವರ ತತ್ವಗಳನ್ನು ಅಂಗೀಕರಿಸಿದನು, ಆದರೂ ವ್ಯರ್ಥ. ತನಗೆ ದಾರಿದೋರಲು ತನಗಿಂತ ಹಿರಿಯರಾದ ವಿದ್ಯಾರ್ಥಿಗಳನ್ನು ಕೇಳಿಕೊಂಡನು, ವಿಶೇಷತಃ ಬ್ರಜೇಂದ್ರನಾಥ ಸೀಲನನ್ನು. ತನ್ನ ನಾಸ್ತಿಕ ಭಾವವನ್ನು ಅವನಿಗೆ ಅರುಹಿ ಸತ್ಯದ ದಾರಿ ತೋರಲು ಅವನನ್ನು ಕೇಳಿಕೊಂಡನು. ಅವನ ಮಾತು ಕೇಳಿ ಶೆಲೆ ಎಂಬ ಆಂಗ್ಲಕವಿಯ ಕಾವ್ಯಸಂಪತ್ತನ್ನು ಸವಿದನು. ವಿಶ್ವವೇ ದೇವ, ದೇವನೇ ವಿಶ್ವ ಎಂಬ ಕವಿಯ ತತ್ವತರಂಗಗಳ ಮೇಲೆ ಅವನ ಕುದಿವ ಆತ್ಮ ತೇಲಿತು, ತಾಪ ತಗ್ಗಿ ತಂಪು ಆಗಲೆಂದು. ಆ ಮೇಲೆ ಪರಬ್ರಹ್ಮದ ವಿಷಯದಲ್ಲಿ ತನ್ನದೇ ಆದ ಒಂದು ವಿಚಾರವನ್ನು ಉಪಾಸನೆ ಮಾಡಲು ಸೀಲನು ಹೇಳಿದನು. ಅವನದೊಂದು ವಿಚಿತ್ರ ಬುದ್ಧಿವಾದ. ವೇದಾಂತದ ಶುದ್ಧ ಅದ್ವೈತ, ಹೆಗೆಲ್ ಎಂಬ ಜರ್ಮನ್ ತತ್ವಜ್ಞಾನಿಯ ಕೇವಲೋಹಂ ಎಂಬ ವಾದ ಮತ್ತು ಫ್ರೆಂಚ್ ರಾಜ್ಯಕ್ರಾಂತಿಯ ಸ್ವಾತಂತ್ರ್ಯ, ಸಮತೆ, ಬಂಧುತ್ವ–ಇವೆಲ್ಲವುಗಳ ವಿಚಿತ್ರ ಸಮನ್ವಯವಾಗಿತ್ತು ಅವನ ವಾದ. ವ್ಯಕ್ತಿವಾದವೇ ವಿಶ್ವದಲ್ಲಿಯ ಅಸತ್, ವಿಶ್ವವಾದವೇ ಸತ್–ಎಂಬ ತತ್ವದಲ್ಲಿ ಅವನ ಶ್ರದ್ಧೆ. ಶುದ್ಧ ಬುದ್ಧಿಯ ವಿಕಾಸವೇ ಇಂದಿನ ದೊಡ್ಡ ಸಮಸ್ಯೆ. ಅದನ್ನು ಕ್ರಾಂತಿಯ ಬಲದಿಂದ ಬಿಡಿಸುವ ವಿಚಾರ ಸೀಲನದು. ನರೇಂದ್ರನ ಸ್ವಭಾವದಲ್ಲಿಯ ಅಹಂಕಾರದ ಅಂಶಕ್ಕೆ ಸೀಲನ ಕ್ರಾಂತಿಕರ ಅಹಂತತ್ವದ ಬುದ್ಧಿವಾದ ಒಗ್ಗಿತು. ಆದರೆ ಇಂಥ ಬಂಧನಗಳಲ್ಲಿ ಸಿಲ್ಕಿರಲು ನರೇಂದ್ರನ ಉತಾವಳಿಯಾದ ಪ್ರಕೃತಿ ಒಪ್ಪಲಿಲ್ಲ. ವಿಶ್ವವಾದವೇ ಶ್ರೇಷ್ಠವೆಂದೂ, ವ್ಯಕ್ತಿವಾದದ ಸಮಾ

ಧಿಯ ಮೇಲೆಯೇ ನೀತಿಯ ನೆಲೆಗಟ್ಟು ಎಂಬ ವಿಚಾರವನ್ನೂ ಅವನ ಬುದ್ಧಿ ಒಪ್ಪಿದರೂ ಅವನ ಬಾಳು ಒಪ್ಪಲಿಲ್ಲ. ಪ್ರಪಂಚದ ಸೌಂದರ್ಯ ಮತ್ತು ಅದರ ಆಶೆ-ಆಕಾಂಕ್ಷೆಗಳಿಗೆ ಮನಸ್ಸೋತು ಮತ್ತನಾದವನವನು. ಮಾಂಸಭಕ್ಷಕ ಮದವೇರಿದ ಹಿಂಸ್ರಪ್ರಾಣಿಗೆ ಶಾಕಾಹಾರ ಮಾಡ ಹೇಳಿದಂತಾಯಿತು ಆ ಬುದ್ಧಿವಾದ ನರೇಂದ್ರನಿಗೆ. ಅವನ ನಿರ್ವೇದ ಮತ್ತು ಆವೇಗ ಇಮ್ಮಡಿಯಾದವು. ಶುಷ್ಕ ಬುದ್ಧಿವಾದದ ಮತ್ತು ನಿಸ್ಸತ್ವ ದೇವವಿಚಾರದ ನೀರಸ ಆಹಾರ ಅವನಿಗೆ ಒಗ್ಗಲಿಲ್ಲ. ಅವನು ಒಬ್ಬ ನಿಜವಾದ ಹಿಂದೂ. ಬಾಳು ಕೇವಲ ಸತ್ಯವಾಗಿದೆಂಬ ಮಾತನ್ನು ಬಿಟ್ಟರೂ ಅದು ಸತ್ಯದ ಮುಖ್ಯ ಮತ್ತು ಆದಿಲಕ್ಷಣವೆಂದಾದರೂ ಅವನ ಅಚಲ ಶ್ರದ್ಧೆ. ದೇವನ ಸಾಕ್ಷಾತ್ಕಾರದ ಹಂಬಲ ಅವನಿಗೆ. "ನಾನು ದೇವನನ್ನು ಕಂಡಿರುವೆ. ಅವನನ್ನು ಮೂದಲಿಸಿರುವೆ. ಅವನೇ ನಾನು" ಎಂದು ಧೈರ್ಯವಾಗಿ ಹೇಳುವ ಒಬ್ಬ ಪಾವನಾತ್ಮನಾದ ಗುರುವಿನ ಹಂಬಲ ಅವನಿಗೆ. ಆದರೂ ಹೃದಯದ ಅಂತರಾತ್ಮದ ಈ ಹಂಬಲದ ಕೂಡ ಪಾಶ್ಚಾತ್ಯವಿಚಾರಗಳಿಂದ ಪುಷ್ಟವಾದ ಮತ್ತು ತಂದೆಯಿಂದ ಬಂದ ಅವನ ವಿವಾದಪಟುವಾದ ಬುದ್ಧಿ ಹೋರಾಟವಾಡಿತು. ಶ್ರೀರಾಮಕೃಷ್ಣರ ಸಂದರ್ಶನದ ನಂತರ ಅವನು ತೋರಿದ ಪ್ರತಿಕ್ರಿಯೆಯಲ್ಲಿ ಈ ಮಾತು ನಿದರ್ಶನಕ್ಕೆ ಬಾರದಿರದು.

ಬರಬರುತ್ತ ಸನ್ಯಾಸವೃತ್ತಿ ಅವನ ಬಾಳಿನಲ್ಲಿ ಕಾಲು ಚಾಚ ಹತ್ತಿತು. ಕೋಣೆಯಲ್ಲಿ ಕತ್ತಲೆ, ತೇವು. ಬಿರುಸಾದ ನೆಲದ ಮೇಲೆ ಬರೀ ಒಂದು ಚಾಪೆ. ಅದರ ಮೇಲೆಯೇ ಒರಗುವುದು. ಸುತ್ತೆಲ್ಲ ಪುಸ್ತಕ ಹೆರವಿಕೊಂಡು ಅಲ್ಲಿಯೇ ಕುಳಿತು ಓದುವುದು. ಹಗಲಿರುಳು ಧ್ಯಾನ. ಕತ್ತಿಯ ಇರಿತದಂತೆ ಮಸ್ತಕದಲ್ಲಿ ಶೂಲಿ. ಆದರೆ ಅವನ ಸ್ವಭಾವದಲ್ಲಿಯ ವಿರೋಧಿ ವಿಕಾರಗಳ ಹೋರಾಟ ಶಾಂತವಾಗುತ್ತಿದ್ದಿಲ್ಲ. ನಿದ್ದೆ ಸರಿಯಾಗಿ ಬರುತ್ತೇ ಇದ್ದಿಲ್ಲ. ಕಲಕಿದ ಅರೆನಿದ್ದೆಯಲ್ಲಿಯೂ ಅದೇ ತಳಮಳ, ಅದೇ ಹೋರಾಟ. ಅವನು ಹೇಳಿರುವನು:

## ಪ್ರಿಯಶಿಷ್ಯ

"ನನ್ನ ಎಳೆಹರೆಯಿಂದಲೂ ನಿತ್ಯವೂ ಇರುಳಿನಲ್ಲಿ ನಿದ್ದೆ ಹೋಗುತ್ತಲೆ ಎರಡು ಕನಸು ಕಾಣುತ್ತಿದ್ದವು: 'ನಾನು ಸಿರಿವಂತ, ಕೀರ್ತಿವಂತ, ಪ್ರಭಾವಶಾಲಿ, ಗೌರವಪೂಜಿತ, ಪ್ರಪಂಚದ ಮಹಾವಿಭೂತಿಗಳಲ್ಲಿ ನಾನೊಬ್ಬ. ಇದನ್ನೆಲ್ಲ ಗಳಿಸಲು ನಾನು ಸಮರ್ಥ—ಹೀಗೆ ಒಂದು ಕನಸು ಕಾಣುತ್ತಿದ್ದೆ. ಇನ್ನೊಂದು ಕನಸು ತೀರ ಬೇರೆ. ಪ್ರಪಂಚದ ಪಸರವನ್ನೆಲ್ಲ ತೊರೆದು, ಕೌಪೀನಧಾರಿಯಾಗಿ, ಭಿಕ್ಷಾನ್ನ ತಿಂದು ಮರದಡಿಯಲ್ಲಿ ಮಲಗುವುದು. ಮುಂಚಿನ ಋಷಿಗಳಂತೆ ಹೀಗೆ ಮಾಡಲೂ ನಾನು ಸಮರ್ಥ, ಎಂದೂ ಅರಿತಿದ್ದೆ. ಈ ಎರಡು ಚಿತ್ರಗಳಲ್ಲಿ ಎರಡನೆಯ ಚಿತ್ರದ್ದೇ ಕೈ ಮೇಲಾಯಿತು. ಈ ಹಾದಿಯಿಂದಲೇ ಪರಮಶ್ರೇಷ್ಠ ಆನಂದವೆಂದು ನನಗೆ ತೋರಿತು. ಆ ಆನಂದದ ಮುಂಡಿಗೆಯನ್ನು ಮನಸ್ಸಿನಲ್ಲಿ ತಿನ್ನುತ್ತ ನಿದ್ದೆ ಹೋಗುತ್ತಿದ್ದೆ. ....ಪ್ರತಿರಾತ್ರಿ ಇದೇ ರೀತಿ...."

ಗುರುವನ್ನು ಕಾಣುವ ಕ್ಷಣದವರೆಗೂ ಹೀಗೆಯೇ. ಭಾರತಯುರೋಪಗಳ ಮಿಲನವಾಗಿದ್ದ ಆ ಕಲಕತ್ತೆಯಲ್ಲಿ ದೊಡ್ಡದೊಡ್ಡವರನ್ನು ಧರ್ಮಜ್ಯೋತಿಗಳನ್ನು ಕಾಣುತ್ತ ನರೇಂದ್ರ ಸುತ್ತಾಡಿದನು. ಮನಸ್ಸಿಗೆ ನೆಮ್ಮದಿಯಾಗಲಿಲ್ಲ. ಹುಡುಕಿದನು, ಪರಿಕಿಸಿದನು, ರುಚಿ ನೋಡಿದನು. ಮುಖ ಕಿವುಚಿಕೊಂಡು ಬಿಸುಟಿದನು. ಪರಮಾನಂದದ ಅಮೃತ ಸಿಕ್ಕಲಿಲ್ಲ. ಅರಸಿದನು. ಅರಸುತ್ತ ಅಲೆದನು. ಅರಸುತ್ತಲೇ ಇದ್ದನು.........

ಆಗ ಅವನಿಗೆ ಹದಿನೆಂಟು ವರ್ಷ. ವಿಶ್ವವಿದ್ಯಾಲಯದ ಮೊದಲನೆಯ ಪರೀಕ್ಷೆಗಾಗಿ ಸಿದ್ಧತೆ ನಡೆಸಿದ್ದನು. ನವ್ಹಂಬರ ೧೮೮೧. ಸುರೇಂದ್ರನಾಥ ಮಿತ್ರರ ಮನೆಯಲ್ಲಿ ಸಣ್ಣದೊಂದು ಸಮಾರಂಭ. ಮಧುರ ಭಕ್ತಿಗೀತಗಳನ್ನು ಮೈಮರೆತು ಹಾಡಿದನು ನರೇಂದ್ರ. ಶ್ರೀರಾಮಕೃಷ್ಣರ ಗರುಡದೃಷ್ಟಿ ಮೊದಲಸಲ ಅವನತ್ತ ತಿರುಗಿತು. ಅವನನ್ನು ಭೇದಿಸಿ ಅವನ ಹಸಿದ ಆತ್ಮದ ಆಳವನ್ನು ನುಗ್ಗಿತು! ದಕ್ಷಿಣೇಶ್ವರದಲ್ಲಿ ಬಂದು ತಮ್ಮನ್ನು ಕಾಣಬೇಕೆಂದು ನರೇಂದ್ರನಿಗೆ ಶ್ರೀರಾಮಕೃಷ್ಣರು ಹೇಳಿದರು.

ಆ ತರುಣ ಬಂದನು. ಜೊತೆಯಲ್ಲಿ ಅವಿಚಾರಿ ಪೋಕರಿ ಗೆಳೆಯರ ತಂಡ. ಬಂದು ಒಳಗೆ ಕುಳಿತನು. ಸುತ್ತಲೆಲ್ಲದರ ಪರಿವೆಯೇ ಇರಲಿಲ್ಲ ಅವನಿಗೆ. ತನ್ನ ವಿಚಾರಗಳಲ್ಲಿಯೇ ಮುಳುಗಿದ್ದನು. ಸುತ್ತಲೆಲ್ಲ ಇಣುಕಲಿಲ್ಲ ಸಹ. ಅವನನ್ನು ನಿರುಕಿಸುತ್ತ ಕುಳಿತ ಶ್ರೀರಾಮಕೃಷ್ಣರಿಂದ "ಹಾಡು" ಎಂದು ಆಣತಿಯಾಯಿತು. ನರೇಂದ್ರನಂತೆ ಪರಮಹಂಸರು ಸಹ ರಸಭಕ್ತರು. ನರೇಂದ್ರ ಹಾಡಿದನು. ಆ ಹಾಡಿನ ಕರುಣ ರಸಲಹರಿ ಎಂಥದು ! ಗುರು ಆನಂದಸಮಾಧಿಯಲ್ಲಿ ಲೀನರಾದರು. ನರೇಂದ್ರನೇ ಹೇಳಲಿ ಆ ಸಂಗತಿಯನ್ನು:-

"ನನ್ನ ಹಾಡು ಮುಗಿಯಿತು. ಅವರು ಒಮ್ಮಿಂದೊಮ್ಮೆ ಎದ್ದು ನನ್ನನ್ನು ಕೈಹಿಡಿದು ಉತ್ತರಕ್ಕೆ ಇರುವ ಮೊಗಸಾಲೆಗೆ ಕರೆದೊಯ್ದರು. ಒಳಗೆ ಹೋಗಿ ಕದ ಮುಚ್ಚಿಕೊಂಡರು. ನಾವೇ ನಾವು. ಇನ್ನಾರೂ ನಮ್ಮನ್ನು ಕಾಣಲರಿಯರು.....ಅದೆಂಥ ಸೋಜಿಗ ! ಆನಂದದ ಕಂಬನಿ ಅವರ ಕಣ್ಣಲ್ಲಿ ಕೋಡಿ ಹರಿಯಿತು. ನನ್ನ ಕೈ ಅಮುಕುತ್ತ ಮೆಲುವಾಗಿ ನುಡಿದರು, ಚಿರಪರಿಚಿತರಂತೆ. 'ಆಃ! ಇಂದು ಬಂದೆಯಾ? ಎಂಥ ನಿಷ್ಕರುಣ ನೀನು? ಇಂದಿನ ವರೆಗೆ ದಾರಿ ಕಾಯಹಚ್ಚುವುದೇ ? ಮಿಕ್ಕ ಜನದ ಮಾತು ಕೇಳಿ ನನ್ನ ಕಿವಿ ಮರಗಟ್ಟಿವೆ. ಅಯ್ಯೋ ನನ್ನ ಒಳಗಿನ ಅನುಭವವನ್ನು ಸ್ವೀಕರಿಸಲು ಅರ್ಹನಾದವನ ಎದೆಯಲ್ಲಿ ನನ್ನಾತ್ಮವನ್ನು ಸುರಿದು ಬಿಡಬೇಕೆಂಬ ಅದೆಂಥ ಹಂಬಲ ನನಗೆ !' ಈ ರೀತಿ ಕೆಲ ಹೊತ್ತು ಗದ್ಗದವಾಗಿ ಮೆಲುನುಡಿ ಆಡಿದರು. ಆ ಮೇಲೆ ನನ್ನೆದುರಿನಲ್ಲಿ ಕೈಮುಗಿದುಕೊಂಡು ನಿಂತು ಅಂದರು: 'ಪ್ರಭು ! ನೀನು ಆದಿನರ ! ನಾರಾಯಣನ ಅವತಾರ ! ಮಾನವನ ದುಃಖನಿವಾರಣೆಗಾಗಿ ಮತ್ತೆ ಭೂಮಿಯ ಮೇಲೆ ಜನ್ಮ ತಾಳಿರುವಿ, ಎಲ್ಲವನ್ನು ಬಲ್ಲೆನು !' ನಾನು ಬೆಚ್ಚಿ ಬಿದ್ದೆನು. ಇದೇನಿದು? ಇವನಿಗೇನು ಹುಚ್ಚುಗಿಚ್ಚು ಹಿಡಿದಿದೆಯೋ? ವಿಶ್ವನಾಥ ದತ್ತರ ಮಗನಲ್ಲವೇ ನಾನು ? ಇದೇನು ಇವನ ಮಾತು ? ಹೊರಹೊರಗೆ ನಿಶ್ಚಲನಾಗಿ ನಿಂತೆನು. ಮತ್ತೆ ನನ್ನ ಕೈಹಿಡಿದು ಅಂದರು,

'ಮತ್ತೊಮ್ಮೆ ನೀನು ಬರುವುದಾಗಿ ಮಾತುಕೊಡು. ಒಬ್ಬನೇ........!
....ಬೇಗನೇ........!"

ಕೇಳಿದ ಮಾತನ್ನು ನರೇಂದ್ರ ಕೊಟ್ಟನು. ಆ ವಿಚಿತ್ರ ಮನುಷ್ಯನ ಕೈಯೊಳಗಿಂದ ಪಾರಾಗಬೇಕಾಗಿತ್ತು ಅವನಿಗೆ. ಆದರೆ ಮತ್ತೆ ಅಲ್ಲಿ ಎಂದಿಗೂ ಕಾಲಿಡಕೂಡದೆಂದು ಮನಸಿನಲ್ಲಿ ಶಪಥ ಮಾಡಿದನು. ಇಬ್ಬರೂ ಮರಳಿ ಎಲ್ಲರೂ ಕುಳಿತಲ್ಲಿಗೆ ಹೋದರು. ಒತ್ತಟ್ಟಿಗೆ ಕುಳಿತು ನರೇಂದ್ರ ಆ ವ್ಯಕ್ತಿಯನ್ನು ನಿರೀಕ್ಷಿಸಹತ್ತಿದನು. ಆ ವ್ಯಕ್ತಿಯ ಮಾತು ರೀತಿಗಳಲ್ಲಿ ವಿಚಿತ್ರವಾದುದೇನೂ ಕಾಣಲಿಲ್ಲ. ಆದರೆ ಆ ವ್ಯಕ್ತಿಯಲ್ಲಿ ಕಾಣುವುದೆಲ್ಲ ಶುದ್ಧ ಸನ್ಯಾಸಜೀವನದ ಮತ್ತು ಸೋಜಿಗಗೊಳಿಸುವ ನಿರ್ಮಲತೆಯ ಫಲವೆಂದು ಅವನಿಗೆ ಹೊಳೆಯಿತು. ಆ ವ್ಯಕ್ತಿಯ ಬಾಯಿಂದ ಹೊರಬಿದ್ದ ಮಾತನ್ನು ನರೇಂದ್ರ ಕೇಳಿದನು, ಮನನ ಮಾಡಿದನು:–

"ಭಗವಂತನ ಸಾಕ್ಷಾತ್ಕಾರ ಶಕ್ಯವಿದೆ. ನಿನ್ನನ್ನು ನೋಡುತ್ತಿರುವಂತೆ, ನಿನ್ನ ಕೂಡ ಮಾತನಾಡುತ್ತಿರುವಂತೆ ಭಗವಂತನ ಕೂಡ ಸಹ ಸಾಧ್ಯವಿದೆ. ಆದರೆ ಇದಕ್ಕಾಗಿ ಹೆಣಗುವವರಾರು ? ಹೆಂಡತಿಗಾಗಿ, ಮಕ್ಕಳಿಗಾಗಿ, ಸಿರಿಸೊತ್ತಿಗಾಗಿ ಜನ ಕಂಬನಿ ಸುರಿಸುತ್ತಾರೆ. ಭಗವಂತನ ಭಕ್ತಿಗಾಗಿ ಕುದಿದು ಕಂಬನಿ ಕರೆದರೆ ಅವನು ಕಣ್ಣೆದುರಿನಲ್ಲಿಯೇ ಕಾಣುವನು. ಆದರೆ ಅವನಿಗಾಗಿ ಕಂಬನಿ ಸುರಿಸುವವರಾರು ?''

ಇರುಳಿರುಳೆಲ್ಲ ನರೇಂದ್ರನ ಹೃದಯದಿಂದ ಹೊರಹೊಮ್ಮಿದ ಹಂಬಲದ ಕೂಗಿಗೆ ಈ ಮಾತು ಉತ್ತರವಲ್ಲವೇ ? ಇದು ಕೆಲಸಕ್ಕೆ ಬಾರದ ಒಣ ಮಾತಲ್ಲ. ಇದನ್ನು ಆಡಿದವನು ಇದರ ಸತ್ಯತೆಯನ್ನು ತೋರಿದ್ದನು. "ಈ ಕ್ಷಣದ ಮುಂಚಿನ ಆ ವಿಚಿತ್ರ ಸಂಗತಿಯೆತ್ತ ? ಮತ್ತು ಈ ಕ್ಷಣಕ್ಕೆ ಕಣ್ಣೆದುರಿನಲ್ಲಿ ಕಾಣುವ ಈ ಸರಲ ಹೃದಯುದ ಶಾಂತ ಮೂರುತಿಯೆತ್ತ ?"— ಎಂದು ತೋರಿ ನರೇಂದ್ರ ಮನಸ್ಸಿನಲ್ಲಿ ಅಂದುಕೊಂಡನು. " ಇವನೇನೋ ಹುಚ್ಚನಂತೆಯೇ ಇದ್ದಾನೆ ! ಆದರೆ

ಈ ಹುಚ್ಚಿನಲ್ಲಿಯೂ ಏನೋ ಗೌರವಾರ್ಹ ಘನತೆಯಿದೆ ! ”

ಯೋಚನೆಯ ಗೊಂದಲದಲ್ಲಿಯೇ ನರೇಂದ್ರ ದಕ್ಷಿಣೇಶ್ವರದಿಂದ ಜಾರಿದನು. “ಶ್ರೀರಾಮಕೃಷ್ಣರ ಮತ್ತು ನಿನ್ನ ಇನ್ನು ಮುಂದಿನ ಸಂಬಂಧವೇನು ? ” ಎಂದು ಆಗ ಯಾರಾದರೂ ಕೇಳಿದ್ದರೆ ಅವನು ಸಂದೇಹವಿಲ್ಲದೆ ಹೇಳುತ್ತಿದ್ದನು: “ಸಂಬಂಧವೇನು ? ಈಗಿದ್ದಂತೆಯೇ ! ”

ಆದರೆ ಆ ಆಶ್ಚರ್ಯಕರವಾದ ದರ್ಶನ ಅವನ ಅಂತರಾತ್ಮನನ್ನು ಕೆರಳಿಸಿತು. ಒಂದು ತಿಂಗಳು ಸಹ ಕಳೆದಿರಲಿಲ್ಲ, ಮತ್ತೆ ದಕ್ಷಿಣೇಶ್ವರದತ್ತ ಹಾದಿ ಹಿಡಿದನು.

“ ಚಿಕ್ಕದೊಂದು ಹಾಸುಗೆಯ ಮೇಲೆ ಒಬ್ಬನೇ ಕುಳಿತಿದ್ದನು. ನನ್ನನ್ನು ಕಾಣುತ್ತಲೆ ಆನಂದದಿಂದ ಕರೆದು ಅಕ್ಕರತೆಯಿಂದ ಹಾಸುಗೆಯ ಒಂದು ನಿಟ್ಟಿನಲ್ಲಿ ಕುಳ್ಳಿರಿಸಿಕೊಂಡನು. ಕ್ಷಣಮಾತ್ರದಲ್ಲಿ ಯಾವುದೋ ಒಂದು ಭಾವಾವೇಶದಿಂದ ಪರವಶನಾದನು. ನನ್ನಲ್ಲಿ ಅವನ ಕಣ್ಣು ನೆಟ್ಟವು. ಮೆಲುದನಿಯಲ್ಲಿ ಏನೋ ಗುಣುಗುಣಿಸಿದನು. ಮೆಲ್ಲನೆ ಹತ್ತಿರಕ್ಕೆ ಸರಿದು ಬಂದನು. ಹಿಂದಿನಂತೆ ಏನೋ ಒಂದು ವಿಚಿತ್ರ ಮಾತು ಉಸುರುವನೆಂದು ನನಗೆ ತೋರಿತು. ಆದರೆ ನಾನು ಬೇಡ ಬೇಡೆನ್ನುವಷ್ಟರಲ್ಲಿಯೇ ನನ್ನ ಮೇಲೆ ತನ್ನ ಬಲಗಾಲು ಊರಿದನು. ಆ ಸ್ಪರ್ಶ ಭಯಂಕರವಾಗಿದ್ದಿತು ! ತೆರೆದ ಕಣ್ಣಿನಿಂದ ನೋಡನೋಡುತ್ತಿರುವಾಗಲೇ ಸುತ್ತಲಿನ ಗೋಡೆ, ಕೋಣೆಯಲ್ಲಿ ಎಲ್ಲೆಲ್ಲವೂ ತಿರುತಿರುಗಿ ಭ್ರಮಿಸಿ ಶೂನ್ಯದಲ್ಲಿ ಮಾಯವಾದಂತಾಯಿತು !........ವಿಶ್ವವೆಲ್ಲ ‘ ನಾನು ’ ಎನ್ನುವುದೆಲ್ಲ ಒಂದೇ ಕಾಲಕ್ಕೆ ಅನಿರ್ವಚನೀಯವಾದ ಶೂನ್ಯದಲ್ಲಿ ಅಡಗಿತು ! ಆ ಶೂನ್ಯ ಎಲ್ಲವನ್ನೂ ಕವಳಿಸಿತು ! ನಾನು ಕಕ್ಕಾವಿಕ್ಕಿಯಾದೆ. ಕಣ್ಣಾರೆ ಸಾವಿನೆದುರಿನಲ್ಲಿಯೇ ಸೆಳೆದೊಯ್ದು ನಿಲ್ಲಿಸಿದಂತಾಯಿತು. ಕೂಗಬಾರದೆಂದರೂ ಕೂಗಿಕೊಂಡೇ ಬಿಟ್ಟೆ:

‘ ಅಯ್ಯೋ ! ಇದನ್ನೇನು ನಡೆಸಿರುವಿ ? ಮನೆಯಲ್ಲಿ ತಾಯಿತಂದೆ ಇದ್ದಾರೆ ನನಗೆ....?’ ಆಗ ಅವನು ನಗಹತ್ತಿದನು. ನನ್ನ ಎದೆಯ ಮೇಲೆ

ಕೈಯಾಡಿಸುತ್ತ ಅಂದನು :— 'ಒಳ್ಳೇದು. ಸದ್ಯಕ್ಕೆ ಇಷ್ಟೇ ಸಾಕು! ಸಕಾಲದಲ್ಲಿ ಅದು ತಾನಾಗಿಯೇ ಬರುವದು !' ಅವನು ಹೀಗೆ ಅನ್ನುತ್ತಿರುವಾಗಲೇ ಆ ಸೋಜಿಗದ ಚಮತ್ಕಾರವೆಲ್ಲ ಮಾಯವಾಯಿತು! ಮೊದಲಿನಂತಾದೆ ! ಒಳಗೂ ಹೊರಗೂ ಎಲ್ಲವೂ ಮೊದಲಿನಂತಾಯಿತು !"

ನರೇಂದ್ರನೆಂದರೆ ಏನೋ ಅಂಧಶ್ರದ್ಧೆಯುಳ್ಳ ಒಂದು ದುರ್ಬಲ ಪ್ರಾಣಿಯಲ್ಲ. ಆ ಗೂಢ ಅನುಭವವನ್ನು ಪ್ರತಿಭಟಿಸಬೇಕೆಂದು ಯತ್ನಿಸದೆ ಇರಲಿಲ್ಲ. ಎಂಥ ಸರ್ವ್ವಮೋಹಕ ಶಕ್ತಿಗೂ ಸೊಪ್ಪು ಹಾಕದ ಸತ್ವಶಾಲಿಯಾದ ಚೇತನ ಅವನದು. "ಇದೇನು ? ಯಾವುದೋ ಮಾಟಕ್ಕೆ ಗುರಿಯಾಗಿರುವೆನೇ ?" ಎಂದು ತನ್ನನ್ನು ತಾನೇ ಕೇಳಿಕೊಂಡನು. ಆದರೆ ಅಂಥದರ ಲಕ್ಷಣವೇನೂ ಇರಲಿಲ್ಲ. ಬೀಸಿ ಹೋದ ಆ ವಿಚಿತ್ರ ಬಿರುಗಾಳಿಯನ್ನು ನೆನೆಯುತ್ತ ಇನ್ನೂ ನಸುನಡುಗುತ್ತ ಅವನು ಜಾಗರೂಕನಾಗಿದ್ದನು. ಆ ಮಹಾ ಆಘಾತದ ಹೊರತು ಆ ಸಲದ ದರ್ಶನದಲ್ಲಿ ಮತ್ತೇನೂ ವಿಶೇಷ ನಡೆಯಲಿಲ್ಲ. ಏನೂ ಆಗದಂತೆಯೇ ಶ್ರೀರಾಮಕೃಷ್ಣರು ತಮ್ಮನ್ನು ಕಾಣಬಂದ ತರುಣನನ್ನು ಬಿಚ್ಚು ಮನಸಿನ ಸಲಿಗೆಯ ಅಕ್ಕರತೆಯಿಂದ ಕಂಡರು.

ಒಂದು ವಾರದ ನಂತರ ಮೂರನೆಯ ಸಲ ನರೇಂದ್ರ ಶ್ರೀರಾಮಕೃಷ್ಣರನ್ನು ಕಾಣಹೋದನು. ತನ್ನ ಎಲ್ಲ ನಿರೀಕ್ಷಕ, ಪರೀಕ್ಷಕ ಮತ್ತು ವಿಮರ್ಶಕ ಸಾಮರ್ಥ್ಯದಿಂದ ಶ್ರೀರಾಮಕೃಷ್ಣರ ಮಂತ್ರಸಾಮರ್ಥ್ಯವನ್ನು ಎದುರಿಸಲು ಅಣಿಯಾದನು. ಅವರು ಅವನನ್ನು ಪಕ್ಕದ ತೋಟಕ್ಕೆ ಕರೆದೊಯ್ದರು. ಅತ್ತಿತ್ತ ತಿರುಗಾಡಿ ಒತ್ತಟ್ಟಿಗೆ ಕುಳಿತರು. ಕೆಲ ಹೊತ್ತಿನಲ್ಲಿಯೇ ಸಮಾಧಿಲೀನರಾಗಿ ನರೇಂದ್ರ ನೋಡನೋಡುವಷ್ಟರಲ್ಲಿ ಅವನ ಮೈಯನ್ನು ತಟ್ಟಿದರು. ಕೂಡಲೆ ಅವನು ಹೊರಗಿನ ಪ್ರಪಂಚವನ್ನೆಲ್ಲ ಮರೆತನು. ಮರಳಿ ಎಚ್ಚರಾಗುತ್ತಿರುವಾಗ ಶ್ರೀರಾಮಕೃಷ್ಣರು ತನ್ನನ್ನು ನೋಡುತ್ತ ತನ್ನ ಎದೆಯ ಮೇಲೆ ಕೈಯಾಡಿಸುತ್ತಿರುವುದನ್ನು ಕಂಡನು.

ಮುಂದೆ ಕಾಲಾಂತರದಲ್ಲಿ ಗುರು ತಮ್ಮ ಶಿಷ್ಯರಿಗೆ ಹೇಳಿದರು:

" ಆ ಸ್ಥಿತಿಯಲ್ಲಿದ್ದಾಗ ಅವನಿಗೆ ಹಲವು ಪ್ರಶ್ನೆ ಕೇಳಿದೆನು. ಅವನ ಪೂರ್ವಾಪರ ಇತಿವೃತ್ತ, ಆಯುರ್ಮಾನ-ಎಲ್ಲವನ್ನೂ ಕೇಳಿದೆನು ತನ್ನ ಒಳಆಳದಲ್ಲಿ ಮುಳುಗುತ್ತ ಏಳುತ್ತ ಅವನು ನನ್ನ ಎಲ್ಲ ಪ್ರಶ್ನೆಗಳಿಗೆ ಸಮರ್ಪಕ ಉತ್ತರಗಳನ್ನಿತ್ತನು. ಅವನ ವಿಷಯದಲ್ಲಿ ನಾನು ಕಂಡದ್ದೆಲ್ಲ ತರ್ಕಿಸಿದ್ದೆಲ್ಲ ಅವನ ಉತ್ತರಗಳಿಂದ ಪ್ರಮಾಣಿತವಾಯಿತು. ಈ ಎಲ್ಲ ಮಾತು ಎಂದಿಗೂ ರಹಸ್ಯವಾಗಿಯೇ ಉಳಿಯತಕ್ಕವು. ಮಾತ್ರ ಅವನು ಒಬ್ಬ ಋಷಿ, ಪೂರ್ಣತೆಗೆ ಹೋದ ಋಷಿ, ಧ್ಯಾನವನ್ನು ಪೂರ್ಣವಾಗಿ ಬಲ್ಲ ಋಷಿ. ತನ್ನ ನಿಜಸ್ವರೂಪವನ್ನು ಅರಿತ ದಿನವೇ ಇಚ್ಛಾಮರಣಿಯಾಗಿ ಹೋಗುವ ಋಷಿ ಎಂದು ನಾನು ಅರಿತೆನು "

ಆಗ ಮಾತ್ರ ಶ್ರೀರಾಮಕೃಷ್ಣರು ಅವನಿಗೆ ಯಾವ ಮಾತನ್ನೂ ಹೇಳಲಿಲ್ಲ. ತಮ್ಮ ಶಿಷ್ಯರೆಲ್ಲರಲ್ಲಿ ಅವನಿಗೊಂದು ವಿಶಿಷ್ಟ ಸ್ಥಾನವನ್ನು ಮಾತ್ರ ದಯಪಾಲಿಸಿದರು.

ಆದರೆ ನರೇಂದ್ರ ಇನ್ನೂ ಶಿಷ್ಯಭಾವವನ್ನು ವಹಿಸಿರಲಿಲ್ಲ. ಯಾರ ಶಿಷ್ಯತ್ವವನ್ನೂ ವಹಿಸುವ ಇಚ್ಛೆ ಇರಲಿಲ್ಲ ಅವನಿಗೆ ಶ್ರೀರಾಮಕೃಷ್ಣರ ಸಾಮರ್ಥ್ಯವನ್ನು ಮಾತ್ರ ಕಂಡು ಚಕಿತನಾಗಿದ್ದನು. ಆ ಸಾಮರ್ಥ್ಯ ಅವನನ್ನು ಸೆಳೆದುಕೊಂಡಿತ್ತು, ಕಬ್ಬಿಣವನ್ನು ಸೂಜಿಗಲ್ಲಿನಂತೆ. ಆದರೆ ಅವನು ಕಬ್ಬಿಣಕ್ಕಿಂತಲೂ ಗಟ್ಟಿಮುಟ್ಟಾಗಿದ್ದನು. ಶ್ರೀರಾಮಕೃಷ್ಣರ ವರ್ಚಸ್ಸಿಗೆ ಮಣಿಯಲೆಳಸಲಿಲ್ಲ ಅವನ ಬುದ್ಧಿ. ತನ್ನ ವಿಚಾರ ಸ್ವಾತಂತ್ರ್ಯವನ್ನು ಕಾಯ್ದುಕೊಳ್ಳಲು ಅವನು ನಿರ್ಧಾರ ಮಾಡಿದನು. ತನ್ನ ಬುದ್ಧಿ ನಿಚ್ಚಳವಾಗಿ ಒಪ್ಪದ ಯಾವುದನ್ನೂ ಅವನು ಗುರುಗಳಿಂದ ಸ್ವೀಕರಿಸಲು ಒಪ್ಪಲಿಲ್ಲ. ಅನ್ಯರ ಅಂಧಶ್ರದ್ಧೆಯಿಂದ ಅವನಿಗ ಜುಗುಪ್ಸೆ.

ದಿನಹೋದ ಆ ಗುರು, ಎಳೆಹರೆಯದ ಆ ಶಿಷ್ಯ; ಆದರೂ ಅವರಲ್ಲಿದ್ದ ಸಂಬಂಧಕ್ಕಿಂತ ಹೆಚ್ಚಿನ ವಿಲಕ್ಷಣ ಸಂಬಂಧ ಇನ್ನಾವುದೂ ಇರಲಾರದು. ಕಂಬನಿಗರೆಯುವದು, ಅಥವಾ ಇಂಥ ಯಾವುದೇ ಹೆಂಗರುಳಿನ ಮಾರ್ದವವನ್ನು ಹೋಲುವ ಯಾವುದೇ ರೀತಿಯ

ಭಾವಭಕ್ತಿಯನ್ನು ಅವನು ಸೇರನು. ಪ್ರತಿಯೊಂದು ಮಾತಿಗೆ ಅವನ ಚಿಕಿತ್ಸೆ. ಒಂದು ಕ್ಷಣ ಸಹ ತನ್ನ ಬುದ್ಧಿಯನ್ನು ಬದಿಗಿರಿಸಿ ಅವನು ಶ್ರದ್ಧೆಗೆ ತಲೆಬಾಗುತ್ತಿದ್ದಿಲ್ಲ ಶ್ರೀರಾಮಕೃಷ್ಣರ ಮಾತನ್ನು ಸಂದೇಹದ, ವಿಚಾರದ ತಕ್ಕಡಿಯಲ್ಲಿ ತೂಗಿ ನೋಡುವ ಶಿಷ್ಯನೆಂದರೆ ಅವನೊಬ್ಬನೇ. ಇದರಿಂದ ಬೆಚ್ಚಿಬೀಳದೆ ಶ್ರೀರಾಮಕೃಷ್ಣರು ಅವನನ್ನು ಇನ್ನೂ ಹೆಚ್ಚಾಗಿ ಪ್ರೀತಿಸುತ್ತಿದ್ದರು. ನರೇಂದ್ರನನ್ನು ಕಾಣುವ ಮುಂಚೆ ಅವರು ಪ್ರಾರ್ಥಿಸುತ್ತಿದ್ದರು: "ಓ ತಾಯಿ, ನನ್ನ ಆತ್ಮಾನುಭವವನ್ನು ಶಂಕಿಸುವ ಯಾವನನ್ನಾದರೂ ನನ್ನೆಡೆಗೆ ಕಳಿಸು !"

ತಾಯಿ ಅವರ ಪ್ರಾರ್ಥನೆಯನ್ನು ಮನ್ನಿಸಿದಳು. ಹಿಂದೂ ದೇವದೇವತೆಗಳನ್ನು ನರೇಂದ್ರ ಅಲ್ಲಗಳೆದನು. ಅದ್ವೈತವನ್ನು ನಾಸ್ತಿಕವಾದವೆಂದನು. ಹಿಂದೂ ಶಾಸ್ತ್ರಗಳ ವಿಧಿನಿಯಮಗಳನ್ನು ಮುಚ್ಚುಮರೆಯಿಲ್ಲದೆ ಅಣಕಿಸಿದನು. ಶ್ರೀರಾಮಕೃಷ್ಣರಿಗೆ ಅಂದನು: "ಕೋಟ್ಯಂತರ ಜನ ನಿಮ್ಮನ್ನು ದೇವಾಧಿದೇವನೆಂದು ಕೂಗಿದರೂ, ನಾನು ಮನಗಾಣುವವರೆಗೆ ಹಾಗೆ ಎಂದಿಗೂ ಕೂಗಲಾರೆ." ನಸುನಗುತ್ತ ಶ್ರೀರಾಮಕೃಷ್ಣರು "ಸರಿ" ಎಂದರು. ಅವರು ತಮ್ಮ ಶಿಷ್ಯರಿಗೆ ಅನ್ನುತ್ತಿದ್ದರು: "ನಾನು ಹೇಳುತ್ತೇನೆಂದು ಏನನ್ನೂ ನಂಬಬೇಡಿ. ಎಲ್ಲವನ್ನೂ ನೀವೇ ವಿಮರ್ಶಿಸಿ ನೋಡಿ."

ನರೇಂದ್ರನ ತೀಕ್ಷ್ಣಟೀಕೆಯಿಂದ ಮತ್ತು ಆವೇಶದ ತರ್ಕವಾದದಿಂದ ಅವರಿಗೆ ಆನಂದ. ಅವನ ಉಜ್ವಲ ಬುದ್ಧಿಸಾಮರ್ಥ್ಯ ಮತ್ತು ಅವಿಶ್ರಾಂತ ಸತ್ಯಾನ್ವೇಷಣೆ ಇವುಗಳನ್ನು ಅವರು ಗೌರವದಿಂದ ಕಾಣುತ್ತಿದ್ದರು. ಮಾಯೆಯನ್ನು ಕೊನೆಗೆ ಗೆಲ್ಲುವ ಶಿವಸಾಮರ್ಥ್ಯವಿದು ಎಂದು ಅವರ ಮತ. ಅವರು ಅನ್ನುತ್ತಿದ್ದರು:—

"ನೋಡು, ನೋಡು. ಅದೆಂಥ ಅವಗಾಹನ ಶಕ್ತಿ! ಎಲ್ಲ ಕಶ್ಮಲಗಳನ್ನು ಸುಟ್ಟುಹಾಕುವ ಭುಗ್ ಭುಗಿಸುವ ಮಹಾಜ್ವಾಲೆ ಅವನೆಂದರೆ! ಮಹಾಮಾಯೆ ಸಹ ಹೆತ್ತಾರು ಅಡಿಗಿಂತ ಹೆಚ್ಚು ಅವನ ಹತ್ತಿರಕ್ಕೆ

ಬರಲಾರಳು. ಅವನಿಗೆ ತಾನೇ ದಯಪಾಲಿಸಿದ ತೇಜಸ್ಸಿಗೆ ಅವಳೇ ಹಿಂಜರಿಯುತ್ತಾಳೆ."

ನರೇಂದ್ರನ ಜ್ಞಾನಸಂಪತ್ತನ್ನು ಕಂಡು ಅವರಿಗೆ ಆಗುವ ಆನಂದ ಒಮ್ಮೊಮ್ಮೆ ಹೊಳೆಯಾಗಿ ಹರಿಯುತ್ತಿತ್ತು. ಆದರೆ ಕೆಲವು ಸಲ ನರೇಂದ್ರನ ಅವಿಚಾರದ ತೀಕ್ಷ್ಣ ಟೀಕೆಯಿಂದ ಆ ವಯೋವೃದ್ಧ ಗುರು ಶ್ರೇಷ್ಠರ ಮನಸ್ಸಿಗೆ ನೋವೂ ಆಗುತ್ತಿತ್ತು. ಅವರ ಮುಖದ ಮೇಲೆಯೇ ಒಮ್ಮೆ ನರೇಂದ್ರ ಅಂದನು:—

"ನಿಮ್ಮ ಅನುಭವಗಳೆಲ್ಲ ಮಿದುಳಿನ ವಿಕಾರದಿಂದ ಹುಟ್ಟಿದ ಸಂಭ್ರಾಂತಿಯಲ್ಲವೆಂದು ನೀವು ಹೇಗೆ ಹೇಳಬಲ್ಲಿರಿ ?"

ಶ್ರೀರಾಮಕೃಷ್ಣರು ನೊಂದು ಕಾಲೀಮಾತೆಯ ಎದುರಿನಲ್ಲಿ ಒರಲುವರು. ತಾಯಿ ಅವರಿಗೆ ಆಶ್ವಾಸನವನ್ನೀಯುವಳು:-

"ತಾಳು; ನರೇಂದ್ರನ ಕಣ್ಣು ಇಷ್ಟರಲ್ಲಿ ತೆರೆಯುವವು !"

ಒಮ್ಮೊಮ್ಮೆ ನರೇಂದ್ರನ ಮತ್ತು ಉಳಿದ ಶಿಷ್ಯರ ಕೊನೆಯಿಲ್ಲದ ವಾಗ್ವಾದ ಕಂಡು ಕಷ್ಟದಿಂದ ಅವರು ಪ್ರಾರ್ಥಿಸುತ್ತಿದ್ದರು:-

"ತಾಯೇ, ನರೇಂದ್ರನಿಗೆ ನಿನ್ನ ಮಾಯೆಯನ್ನು ದಯಪಾಲಿಸು! ಅವನ ಬುದ್ಧಿಯ ತಾಪ ತಗ್ಗಿ ಅವನ ಹೃದಯ ಭಗವಂತನತ್ತ ಹರಿಯಲಿ !"

ಆದರೆ ನರೇಂದ್ರನ ತಳಮಳಿಸುವ ಆತ್ಮ ಕೂಗುತಲಿತ್ತು:- "ನನಗೆ ಭಗವಂತ ಬೇಕಿಲ್ಲ. ನನಗೆ ಬೇಕು ಶಾಂತಿ— ಕೇವಲ ಸತ್ಯ, ಕೇವಲ ಜ್ಞಾನ, ಕೇವಲ ಅನಂತಾನುಭವ !"

ಇಂಥ ಬಯಕೆ ಬುದ್ಧಿಯಾಚೆಯ ಸೀಮೆಯದು ಎನ್ನುವ ಮಾತು ಅವನ ಲಕ್ಷ್ಯದಲ್ಲಿ ಬರಲಿಲ್ಲ. ಇದರಿಂದ ಅವನ ಹೃದಯದ ಅಹಂಮನ್ಯ ವಾದ ಅಸಮಂಜಸತೆ ಕಾಣುವುದು. ಭಗವಂತನನ್ನು ಸಪ್ರಮಾಣವಾಗಿ ತೋರಿಸಿ ಅವನ ಮನಸ್ಸನ್ನು ಸಮಾಧಾನಪಡಿಸುವುದು ಅಶಕ್ಯವೇ ಇತ್ತು. ಅವನು ಅಂದನು:—

"ಭಗವಂತ ಇದ್ದರೆ ಅವನ ಸಾಕ್ಷಾತ್ಕಾರ ಶಕ್ಯ !"

ಆಗಾಗ ಆನಂದ ಸಮಾಧಿಯಲ್ಲಿ ಲೀನರಾಗುವ ಶ್ರೀರಾಮಕೃಷ್ಣರು ಭಾವನೆಯ ಆವೇಗದಿಂದ ಪರವಶರಾಗುತ್ತಾರೆಂದು ನರೇಂದ್ರ ತಿಳಿದಿದ್ದನು. ಆದರೆ ಬುದ್ಧಿಯ ಕ್ಷೇತ್ರದಲ್ಲಿ ಸಹ ಅವರು ತನಗಿಂತಲೂ ಅನಂತಗುಣವಾಗಿ ಸಮರ್ಥರೆನ್ನುವ ಮಾತು ನರೇಂದ್ರನಿಗೆ ಕಾಲಾಂತರದಲ್ಲಿ ಹೊಳೆಯಿತು. ಆಗ ಅವನು ಅವರ ವಿಷಯವಾಗಿ ಅಂದನು:—

"ಅವರು ಹೊರಹೊರಗೆ ಭಕ್ತರು, ಒಳಒಳಗೆ ಜ್ಞಾನಿ. ನಾನು ನೇರವಾಗಿ ತಿರುವುಮುರುವು."

ಆದರೆ ಹೀಗೆ ಅರಿಯುವ ಮುಂಚೆ, ಗುರುಗಳ ಕೈಯಲ್ಲಿ ತನ್ನ ಅಹಂಮನ್ಯ ವಿಚಾರಸ್ವಾತಂತ್ರ್ಯವನ್ನು ಒಪ್ಪಿಸುವವರೆಗೆ, ಅವನು ಗುರುಗಳನ್ನು ಅರಸುತ್ತಲೂ ಅವರಿಂದ ಜಾರುತ್ತಲೂ ಸಾಗಿದನು. ಅವರಿಬ್ಬರಲ್ಲಿ ಪರಸ್ಪರರ ವಿಷಯವಾಗಿ ಅದೊಂದು ಆವೇಶದ ಆಕರ್ಷಣ ಮತ್ತು ಅದೃಶ್ಯ ಹೋರಾಟದ ಆಟವೇ ಆಗಿತ್ತು. ನರೇಂದ್ರನದು ನಿರ್ದಾಕ್ಷಿಣ್ಯವಾದ ಖಂಡತುಂಡ ಮಾತು. ತನಗೆ ನಂಬಿಕೆಯಿಲ್ಲದ ವಿಷಯದಲ್ಲಿ ಸರಿಯಾಗಿ ವಿಚಾರ ಮಾಡುವ ತಾಳ್ಮೆ ಸಹ ಅವನಲ್ಲಿ ಇರಲಿಲ್ಲ. ಪಂಡಿತಂಮನ್ಯರನ್ನು ಕಂಡು ಕಿಡಿಕಿಡಿಯಾಗಿ ಕಾಳಗ ಹೂಡುತ್ತಿದ್ದನು. ಇನ್ನೊಬ್ಬರ ಅಭಿಪ್ರಾಯಕ್ಕೆ ಅವನ ಅಹಂಕಾರ ಸೊಪ್ಪು ಹಾಕುತ್ತಿರಲಿಲ್ಲ. ಈ ಎಲ್ಲ ಕಾರಣಗಳಿಂದ ಅವನಿಗೆ ಅನೇಕರು ಹಗೆಗಳಾಗಿದ್ದರು. ಹಲವರು ಮನಬಂದಂತೆ ಆಡಿಕೊಳ್ಳುತ್ತಿದ್ದರು. ಆದರೆ ಅದನ್ನೆಲ್ಲ ತುಚ್ಛವಾಗಿ ಎಣಿಸುವುದರಲ್ಲಿ ಅವನ ನೈಜ ಉಬ್ಬುತ್ತಿತ್ತು.

ನರೇಂದ್ರನನ್ನು ಆಡಿಕೊಳ್ಳುವುದನ್ನು ಶ್ರೀರಾಮಕೃಷ್ಣರು ತಮ್ಮೆದುರಿನಲ್ಲಿ ನಡೆಯಗೊಡುತ್ತಿದ್ದಿಲ್ಲ. ಅವನ ವಿಷಯದಲ್ಲಿ ಅವರದು ದೃಢ ವಿಶ್ವಾಸ. "ಆ ಎಳೆಹರೆಯದ ಹುಡುಗ ಚೊಕ್ಕ ಚಿನ್ನ. ಪ್ರಪಂಚದ ಕಶ್ಮಲ ಅವನನ್ನು ಕಲಂಕಿಸದು." ಎಂದು ಅವರು ಅನ್ನುತ್ತಿದ್ದರು. ಆದರೆ ಅವರಿಗೆ ಒಂದೇ ಹೆದರಿಕೆ. ಇಂಥ ಉಜ್ವಲ ಸಾಮರ್ಥ್ಯ ಹಾದಿಯನ್ನು

ತಪ್ಪಿ ಹೋದೀತೇ ? ಇವನ ವಿವಿಧ ಶಕ್ತಿಗಳ ದುರುಪಯೋಗವಾದೀತೇ? ಐಕ್ಯಸಮನ್ವಯಗಳಿಗೆ ಮೀಸಲಾಗುವುದನ್ನು ಬಿಟ್ಟು ಹೊಸದೊಂದು ಪಂಥವನ್ನು, ಬೇರೊಂದು ಪಕ್ಷವನ್ನು ಇವನು ಕಟ್ಟುವನೇ ?

ನರೇಂದ್ರನ ವಿಷಯವಾಗಿ ಶ್ರೀರಾಮಕೃಷ್ಣರ ನಲ್ಮೆ ಮೋಹದ ಮಟ್ಟನ್ನು ಮುಟ್ಟಿತ್ತು. ಅವನು ಹೆಚ್ಚು ಹೊತ್ತು ಕಣ್ಮರೆಯಾಗುತ್ತಲೆ ಅವರ ಹಂಬಲ ಕರುಣರಸವಾಹಿಯಾಗಿ ಹೊರಹೊಮ್ಮುತ್ತಿತ್ತು. ಇದನ್ನು ನೋಡಿ ನರೇಂದ್ರನಿಗೆ ಹೇಗೋ ಆಗುತ್ತಿತ್ತು. ಒಮ್ಮೊಮ್ಮೆ ರೇಗುತ್ತಿದ್ದನು. ಇದಕ್ಕಾಗಿ ಶ್ರೀರಾಮಕೃಷ್ಣರಿಗೂ ನಾಚಿಕೆಯಾಗುತ್ತಿತ್ತು. ಆದರೆ ಇದು ಅವರ ಅಳವಿನಾಚೆಯ ಮಾತಾಗಿತ್ತು.

ಇನ್ನೂ ಯಾವ ಕಾರ್ಯವನ್ನೂ ಮಾಡಿ ಮುಗಿಸದ ಈ ಹರೆಯದ ಹುಡುಗ 'ಕೀರ್ತಿಶಾಲಿಗಳಾದ ಕೇಶಬಚಂದ್ರ ಸೇನರಿಗಿಂತಲೂ ಮೇಲುಗೈ' ಎಂದು ಶ್ರೀರಾಮಕೃಷ್ಣರು ಎಲ್ಲರ ಎದುರಿನಲ್ಲಿ ಒಮ್ಮೆ ಸಾರಿದರು. ಈ ಅತಿಪ್ರಶಂಸೆಯಿಂದ ನರೇಂದ್ರ ರೇಗಿದನು. ಅವನು ಕಣ್ಮರೆಯಾಗುತ್ತಲೆ ಕಲಕತ್ತೆಯ ಹಾದಿಬೀದಿಗಳನ್ನು ಸುತ್ತಾಡಿಕೊಂಡು ಬರುತ್ತಿದ್ದರು ಶ್ರೀರಾಮಕೃಷ್ಣರು. ಬ್ರಹ್ಮಸಮಾಜದ ಪೂಜಾಮಂದಿರವನ್ನು ಒಮ್ಮೆ ಹೊಕ್ಕು ನೋಡಿದರು. ಪ್ರವಚನ ಸಾಗಿದಾಗ ಬಂದ ಈ ಆಗಂತುಕನನ್ನು ನೆರೆದವರೆಲ್ಲ ಕಡುತರವಾಗಿ ಟೀಕಿಸಿ ಹೀಯಾಳಿಸಿದರು. ದುರ್ನಿಂದೆ ಮಾಡಿದರು. ಇದರಿಂದ ನರೇಂದ್ರನಿಗೆ ಅಪಮಾನವಾದಂತಾಯಿತು. ನೊಂದುಕೊಂಡನು. ಈ ಪೀಡೆ ಕಡಿದು ಹೋಗಲಿ ಎಂದು ಶ್ರೀರಾಮ ಕೃಷ್ಣರಿಗೆ ಬಿರುನುಡಿ ಆಡಿದನು. ಇನ್ನೊಬ್ಬನ ಮೋಹದಲ್ಲಿ ಈ ಪರಿ ಸಿಲ್ಕಿದರೆ ಶ್ರೀರಾಮಕೃಷ್ಣರು ತಮ್ಮ ಆಧ್ಯಾತ್ಮಿಕ ಘನತೆಗೆ ಎರವಾಗುವ ರೆಂದು ದೂರಿದನು. ಸರಲಹೃದಯದ ಶುದ್ಧಾಂತಃಕರಣದ ಶ್ರೀರಾಮ ಕೃಷ್ಣರು ಅವನ ಬಿರುನುಡಿಯಿಂದ ಬೆಚ್ಚಿಬಿದ್ದರು. ಕಾಳೀಮಾತೆಯತ್ತ ಹೋಗಿ "ಅಮ್ಮಾ !" ಎಂದು ಕೂಗಿಕೊಂಡರು ! ಮನಸ್ಸಿಗೆ ನೆಮ್ಮದಿ ಯಾಯಿತು. ನರೇಂದ್ರನಿಗೆ ಅಂದರು:

" ಆಃ ! ಕಠೋರನೆ ! ನಿನ್ನ ಮಾತಿಗೆ ನಾನು ಸೊಪ್ಪು ಹಾಕಲಾರೆ. ನಿನ್ನಲ್ಲಿ ಭಗವಂತ ಕಾಣುತ್ತಿದ್ದ ಕಾರಣ ನನ್ನ ಈ ನಲ್ಮೆ, ಈ ಮೋಹ ಎಂದು ತಾಯಿ ಹೇಳಿದಳು. ನಿನ್ನಲ್ಲಿ ಭಗವಂತ ಕಾಣದ ದಿನ ನಿನ್ನ ಮುಖ ಸಹ ನೋಡಲಾರೆ !"

ಕೆಲ ದಿನಗಳಲ್ಲಿಯೇ ಇದು ತಿರುವುಮುರುವಾಯಿತು. ನರೇಂದ್ರ ಬಂದು ಕುಳಿತರೆ ಎಳ್ಳಷ್ಟು ಸಹ ಶ್ರೀರಾಮಕೃಷ್ಣರ ಗಮನವಿರಲಿಲ್ಲ. ಇಷ್ಟೇ ಅಲ್ಲ; ಬೇರೆಯವರ ಕೂಡ ಮಾತನಾಡುತ್ತಿರುವಾಗ ಅವನು ಬಂದರೆ ಅವರು ಕತ್ತೆತ್ತಿ ಸಹ ನೋಡುತ್ತಿರಲಿಲ್ಲ. ಈ ರೀತಿ ಹಲವು ವಾರ ಸಾಗಿತು. ಆದರೂ ನರೇಂದ್ರ ಮರಳಿ ಮರಳಿ ಬರುತ್ತಲೇ ಇದ್ದನು. ಅವನ ಕೂಡ ಮಾತು ಸಹ ಆಡದೆ ಇರುವಾಗ ಅವನೇಕೆ ಬರುತ್ತಾನೆಂದು ಶ್ರೀರಾಮಕೃಷ್ಣರು ಕೇಳಿದಾಗ ನರೇಂದ್ರ ಅಂದನು:—

" ಬರೀ ನಿಮ್ಮ ಮಾತಿನ ಮೋಹವಿಲ್ಲ ನನಗೆ. ಅದೇನೋ ಕಾರಣ ತಿಳಿಯದು. ಅವುದೋ ನಲ್ಮೆಯ ಮೋಹದಿಂದ ಮತ್ತೆ ಮತ್ತೆ ನಿಮ್ಮನ್ನು ಕಾಣಬೇಕೆಂದು ಅನಿಸುತ್ತದೆ ಈ ಜೀವಕ್ಕೆ. "

ಗುರುವಿನ ಆತ್ಮ ಪ್ರತಿರೋಧಿಯಾದ ಶಿಷ್ಯನನ್ನು ಆವರಿಸಿತು. ಮೂರ್ತಿಪೂಜೆ ಮತ್ತು 'ಶಿವಃಕೇವಲೋಹಂ'ದಲ್ಲಿ ಶ್ರದ್ಧೆ— ಇಂಥ ಪೂರ್ವ-ಪಶ್ಚಿಮಗಳಂತೆ ಪರಸ್ಪರ ವಿರೋಧಿಯಾದ ತತ್ವಗಳಲ್ಲಿ ಶ್ರೀರಾಮಕೃಷ್ಣರ ನಂಬಿಕೆಯನ್ನು ನರೇಂದ್ರ ಅಪಹಾಸ ಮಾಡಿದನು. ಆದರೂ ವ್ಯರ್ಥ. ಭಗವಂತನ ಮೋಹ ಮೆಲ್ಲನೆ ಅವನನ್ನು ಮುತ್ತಲು ಆರಂಭಿಸಿತ್ತು.

" ನನ್ನ ಕಾಳೀಮಾತೆಯನ್ನು ಒಪ್ಪಲು ಬಯಸದ ನೀನು ಇಲ್ಲಿ ಬರುವುದೇಕೆ ?" ಎಂದೊಮ್ಮೆ ಶ್ರೀರಾಮಕೃಷ್ಣರು ಕೇಳಿದರು.

" ನಾನು ಇಲ್ಲಿಗೆ ಬಂದರೆ ಅವಳನ್ನು ಒಪ್ಪಲೇಬೇಕೇ ?" ಎಂದನು ನರೇಂದ್ರ.

" ಒಳ್ಳೇದು," ಗುರು ಅಂದರು. " ಹೋಗಲಿ. ಕೆಲವೇ ದಿನ

ಹೋಗಲಿ. ಆ ತಾಯಿಯನ್ನು ನೀನು ಒಪ್ಪುವಿ, ಅಪ್ಪುವಿ, ಅವಳ ಬರೀ ಹೆಸರು ಕಿವಿಯಲ್ಲಿ ಬೀಳುತ್ತಲೆ ನೀನು ಭಕ್ತಿಪರವಶನಾಗಿ ಕಂಬನಿಗರೆಯುವಿ ! "

ಜೀವಶಿವಾದ್ವೈತದ ವೇದಾಂತತತ್ವದ ಕದ ತೆಗೆದು ಶ್ರೀರಾಮಕೃಷ್ಣರು ಶಿಷ್ಯನಿಗೆ ತೋರಿಸಬೇಕೆಂದಾಗಲೂ ಇದೇ ರೀತಿ. ಆ ವಿಚಾರ ಅಭದ್ರ ಮೂಢತೆ ಎಂದನು ನರೇಂದ್ರ. ಅದನ್ನು ಗೇಲಿ ಮಾಡಲು ಬಂದ ಯಾವ ಸಂಧಿಯನ್ನೂ ಅವನು ವ್ಯರ್ಥವಾಗಿ ಹೋಗಗೊಡುತ್ತಿದ್ದಿಲ್ಲ. ಒಂದು ದಿನ ಆ ತತ್ವವನ್ನು ಅಣಕವಾಡುತ್ತ ಅವನೂ ಇನ್ನೊಬ್ಬ ಶಿಷ್ಯನೂ ಬಿದ್ದು ಬಿದ್ದು ನಕ್ಕರು. " ಈ ಹೂಜೆ ದೇವರು !.... ಈ ನೊಣ ದೇವರು ! ಆ.... ! ಹಾ ! ಹಾ !...."

ಆ ಹುಡುಗರ ಹುಚ್ಚು ನಗೆಯನ್ನು ಪಕ್ಕದ ಕೋಣೆಯಿಂದ ಕೇಳಿದ ಶ್ರೀರಾಮಕೃಷ್ಣರು ಬಂದರು. ಅರೆಸಮಾಧಿಯಲ್ಲಿ ಅಡಿಯಿಡುತ್ತ ಮೆಲ್ಲನೆ ನರೇಂದ್ರನನ್ನು ತಟ್ಟಿದರು. ಅದೊಂದು ಪ್ರಲಯವೇ ನರೇಂದ್ರನನ್ನು ದೋಚಿಕೊಂಡು ಹೋದಂತಾಯಿತು ! ಎಲ್ಲವನ್ನೂ ಮಾರ್ಪಡಿಸಿತು ! ಭಗವಂತನ ಹೊರತು ಎಲ್ಲಿಯೂ ಬೇರೆ ಏನೇನೂ ಇಲ್ಲವೇ ಇಲ್ಲವೆಂದು ಅವನಿಗೆ ಅನಿಸಿತು ! ಸೋಜಿಗವಾಯಿತು !

ಮರಳಿ ಮನೆಗೆ ಹೋದನು. ಅವನು ಕಂಡದ್ದೆಲ್ಲ ದೇವರು ! ಉಂಡದ್ದೆಲ್ಲ ದೇವರು ! ಮುಟ್ಟಿದ್ದೆಲ್ಲ ದೇವರು ! ತಟ್ಟಿದ್ದೆಲ್ಲ ದೇವರು ! ಎಲ್ಲವೂ ದೇವರೇ ದೇವರು ! ಆ ವಿಶ್ವಶಕ್ತಿಯಿಂದ ಪ್ರಮತ್ತನಾದನು ! ಏನನ್ನೂ ಮಾಡಲಾರದಾದನು ! ತಾಯಿತಂದೆ ಗಾಬರಿಯಾದರು. ಅವನಿಗೇನೋ ಕಾಯಿಲೆಯೇ, ಅಂದರು. ಈ ಸ್ಥಿತಿಯಲ್ಲಿಯೇ ಹಲವು ದಿನ ಕಳೆದನು. ಆ ಮೇಲೆ ಆ ಕನಸು ಕರಗಿತು. ಆದರೆ ಅದ್ವೈತಾನುಭವದ ಆ ಅಪೂರ್ವ ಅನುಭೂತಿಯ ನೆನಪು ಅವನಲ್ಲಿ ಸ್ಥಿರವಾಗಿ ಉಳಿಯಿತು. ಮುಂದೆ ಎಂದಿಗೂ ಅವನು ಅದನ್ನು ಅಲ್ಲಗಳೆಯಲಿಲ್ಲ.

ಆ ನಂತರ ಒಂದರ ಹಿಂದೊಂದು ಗೂಢಾನುಭವದ ಬಿರುಗಾಳಿ

ಅವನ ಮೇಲೆ ನುಗ್ಗಿ, ಬೀಸಿ ಹಾಯ್ದು ಹೋದವು. ಆಗಾಗ ಮತ್ತೆ ಮತ್ತೆ "ಶಿವ ! ಶಿವ !" ಎಂದು ಜಪಿಸುತ್ತಿದ್ದನು. ಹುಚ್ಚನಂತೆ ಕೂಗಿಕೊಳ್ಳುತ್ತಿದ್ದನು. ಸಕರುಣ ಸಹಾನುಭೂತಿಯಿಂದ ಅವನನ್ನು ಕಾಣುತ್ತ ಶ್ರೀರಾಮಕೃಷ್ಣರು ಅಂದರು:-

"ಸರಿ ! ಆ ಸ್ಥಿತಿಯಲ್ಲಿ ನಾನು ಹನ್ನೆರಡು ವರ್ಷ ಕಳೆದೆನು !"

ಕಟುತರ ನಾಸ್ತಿಕವಾದದಿಂದ ಅವನು ಬೆಳಕಿಗೆ ಬಂದನೇನೋ ನಿಜ. ಆದರೆ ಅವನ ನಾಸ್ತಿಕವಾದದ ಕೋಟೆಗೆ ಒಳಬೆಳಕಿನ ಸುರುಂಗದ ಸ್ಫೋಟ ಮಾತ್ರ ಸಾಲದಿತ್ತು. ಹೊರಗಿನಿಂದಲೂ ಪ್ರಬಲ ಆಘಾತವಾಗದಿದ್ದರೆ ಅವನ ಸಿಂಹಹೃದಯ ಈ ಸ್ಥಿರ ಪರಿವರ್ತನವನ್ನು ಹೊಂದುತ್ತಿರಲಿಲ್ಲ. ದುಃಖದ ಚಬಕದ ಸೆಳೆತವೂ ಅವನನ್ನು ಗಾಸಿಯಾಗಿಸಿತು. ನಾಸ್ತಿಕತೆಯು ನೆಮ್ಮದಿಯಿಂದ ಮತ್ತು ಬುದ್ಧಿವಾದದ ಸೊಗಸಿನಿಂದ ಅವನನ್ನು ದುಃಖದ ಸೆಳೆತ ಬಡಿದೆಬ್ಬಿಸಿದವು. ಅವನ ಮದವಿಳಿಯಿತು. ಬಾಳಿನ ದುಃಖದುರ್ದಿನಗಳಲ್ಲಿ ಕಹಿಯಾದ ಕಠೋರವಾದ ಸಮಸ್ಯೆ ಅವನನ್ನು ಎದುರಿಸಿ ನಿಂತಿತು.

೧೮೮೪ನೇ ಇಸವಿಯ ಆರಂಭದಲ್ಲಿ ಹೃದಯ ವಿಕಾರದಿಂದ ಅವನ ತಂದೆ ತೀರಿದನು. ಹಿಂದು ಮುಂದಿನ ಅರಿವಿಲ್ಲದೆ ದುಂದುಗಾರನಾಗಿ ಬಾಳಿದ ತಂದೆಯ ಸಾವಿನಿಂದ ಕುಟುಂಬಕ್ಕೆ ಕಠಿಣ ಅವಸ್ಥೆ ಬಂದಿತು. ಕುಟುಂಬದಲ್ಲಿ ಆರೇಳು ಹೊಟ್ಟೆ. ಸಾಲದುದಕ್ಕೆ ಹಲವು ಸಾಲಗಾರರ ಶೂಲ ತಲೆಯ ಮೇಲೆ. ಅಂದಿನಿಂದ ಕಷ್ಟದ ಕಹಿ ನರೇಂದ್ರನ ಪಾಲಿಗೆ ಬಂದಿತು. ನೌಕರಿಗಾಗಿ ಮನೆಮನೆಗೆ ನಿರರ್ಥಕವಾಗಿ ತಿರುಗಿದನು. ಇಷ್ಟಮಿತ್ರರು ಅವನ ನೆಳಲಿಗೆ ಸಹ ಬರಲಿಲ್ಲ. ಅವನ ಆತ್ಮಕಥೆಯಲ್ಲಿಯ ಈ ಭಾಗ ಬಹಳೇ ಕರುಣಾಮಯವಾಗಿದೆ:—

"ಉಪವಾಸ ! ........ ಉಪವಾಸದಿಂದ ಸಾಯುವುದೊಂದೇ ಉಳಿಯಿತು ! ಕಚೇರಿಯಿಂದ ಕಚೇರಿಗೆ ಬರಿಗಾಲಿನಿಂದ ತಿರುಗಿವೆ ! ಬರಿಗೈಯಿಂದ ತಿರುಗಿ ಬಂದೆ ! ಮಾನವನ ಸಹಾನುಭೂತಿಯ ಅನುಭವ

ವಾಯಿತು ನನಗೆ ! ಬಾಳಿನ ಕಠೋರ ವಾಸ್ತವತೆಯನ್ನು ಅಂದು ಮೊದಲಾಗಿ ಸಂಧಿಸಿದೆ ! ಆರಿತೆ, ದುರ್ಬಲರಿಗೆ ದೀನರಿಗೆ ದುಃಖಿತರಿಗೆ ಬಾಳಿನಲ್ಲಿ ಸ್ಥಾನವಿಲ್ಲ !

"ನನಗೆ ನೆರವಾಗುವ ಸಂಧಿ ಬಂದರೆ ಅದೆಂಥ ಗೌರವದ ಅಭಿಮಾನದ ವಿಷಯ ಎಂದು ಕೆಲ ದಿನಗಳ ಮುಂಚೆಯೇ ತಿಳಿದ ಹಲವರು ಇಂದು ಮುಖ ತಿರುವಿಕೊಂಡು ಹೋದರು, ಅವರಲ್ಲಿ ನೆರವಾಗುವ ಸಾಮರ್ಥ್ಯವಿದ್ದರೂ ಸಹ ! ಪ್ರಪಂಚ ಪಿಶಾಚಿಯ ಸೃಷ್ಟಿ ಎಂದು ತೋರಿತು !

"ಬಿಸಿಲಿನಿಂದ ಬೆಂದ ಒಂದು ದಿನ ಕಾಲ ಮೇಲೆ ನಿಲ್ಲಲಾರದಾದೆ. ಒಂದು ಮಂದಿರದ ಬಳಿ ನೆಳಲಿನಲ್ಲಿ ಕುಸಿದೆ. ಅಲ್ಲಿ ಅನೇಕ ಗೆಳೆಯರಿದ್ದರು. ಭಗವಂತನ ಅಪಾರ ಕರುಣೆಯ ವಿಷಯವಾಗಿ ಒಬ್ಬನು ಹಾಡಹತ್ತಿದನು. ಆ ಹಾಡು– ನನ್ನ ಹಾಡಿನ ಅಣಕವಾಡು ! — ನೇರವಾಗಿ ನನಗೆ ಹಾಕಿದ ಏಟು ! ಮನೆಯಲ್ಲಿಯ ತಾಯಿ ತಂಗಿ ತಮ್ಮ ಇವರೆಲ್ಲರ ಕರುಣಕಥೆ ಕಣ್ಮುಂದೆ ಕಟ್ಟಿತು ! ಕೂಗಿದೆ ! 'ಸಾಕು ಮಾಡು ! ಸಾಕು ಮಾಡು ! ನಿನ್ನಾ ಹಾಡು ! ಯಾರ ಮನೆಯಲ್ಲಿ ತಾಯಿ ತಂದೆ ಹಸಿವೆಯಿಂದ ಸಾಯುತ್ತಿಲ್ಲವೋ ಅಂಥ ಗರ್ಭಶ್ರೀಮಂತರ ಕಿವಿಗೆ ಈ ಹಾಡಿನ ಕವಿಕಲ್ಪನೆ ಇಂಪಾಗಿ ಕೇಳಬಹುದು ! ಒಂದು ಕಾಲದಲ್ಲಿ ನಾನೂ ಹಾಗೆಯೇ ತಿಳಿದಿದ್ದೆ ! ಆದರೆ ಇಂದು ಬಾಳಿನ ನಿಷ್ಕರುಣತೆಯೆಲ್ಲ ನನ್ನೆದುರಿನಲ್ಲಿ ಅಕರಾಳವಿಕರಾಳವಾಗಿ ಕುಣಿಯುತ್ತಿರುವಾಗ ಆ ಹಾಡು ನನಗೆ ಭೀಕರ ಅಣಕವಾಡಾಗಿದೆ !'

"ನನ್ನ ಗೆಳೆಯ ನೊಂದುಕೊಂಡ. ನನ್ನ ಕಡುತರ ಕಷ್ಟ ಅವನ ಕಣ್ಣಿಗೆ ಕಾಣಲಿಲ್ಲ. ಮನೆಯಲ್ಲಿ ಎಲ್ಲರಿಗೂ ಸಾಲುವಷ್ಟು ತಿನ್ನಲು ಇಲ್ಲದಾಗ ಹಲವು ಸಲ ಗೆಳೆಯರ ಮನೆಯಲ್ಲಿ ಔತಣವಿದೆಂದು ಹೇಳಿ ಹೊರಗೆ ಹೋಗುತ್ತಿದ್ದೆ. ಹೊಟ್ಟೆಯನ್ನು ಮರುಗಿಸುತ್ತಿದ್ದೆ. ನನ್ನ ಸಿರಿವಂತರಾದ ಗೆಳೆಯರು ಒಮ್ಮೊಮ್ಮೆ ತಮ್ಮ ಮನೆಗೆ ಹಾಡಲು ನನ್ನನ್ನು

ಕರೆಯುತ್ತಿದ್ದರು. ಆದರೆ ಒಬ್ಬನು ಸಹ ದುಃಖದುರ್ದಿನಗಳ ವಿಷಯದಲ್ಲಿ ಒಂದು ಮಾತನ್ನೂ ವಿಚಾರಿಸಲಿಲ್ಲ. ಅವೆಲ್ಲ ಮಾತು ನನ್ನ ಹೃದಯದ ಸೊತ್ತಾಗಿ ಉಳಿದಿವೆ. ಯಾರ ಮುಂದೂ ನಾನು ಬಾಯಿ ಬಿಚ್ಚಲಿಲ್ಲ.....!"

ಈ ಕಾಲದಲ್ಲೆಲ್ಲ ಅವನು ನಿತ್ಯ ಬೆಳಗಿನಲ್ಲಿ ದೇವರ ಪ್ರಾರ್ಥನೆ ಮಾಡುತ್ತಿದ್ದನು. ಒಂದು ದಿನ ಕೇಳಿ ಅವನ ತಾಯಿ– ಪಾಪ! ಆ ಮಹಾತಾಯಿಯು ತಾಯಿಗರುಳು ಹೊಟ್ಟೆಪಾಡಿಗಾಗಿ ಮರುಗುವ ಮಕ್ಕಳನ್ನು ಕಂಡು ಬೆಂದು ಬೇಗುದಿಯಾಗಿತ್ತು! — ಆ ತಾಯಿ ಕೂಗಿದಳು:—

" ಮೂರ್ಖಾ, ಸುಮ್ಮನಿರು! ಹುಟ್ಟಿದಂದಿನಿಂದ ದೇವರ ಹೆಸರಿನಿಂದ ಕೂಗಿಕೊಂಡು ನಿನ್ನ ಗಂಟಲು ಸೀಳಿ ದನಿಬಿದ್ದು ಹೋಗಿದೆ! ಅವನೇನು ಮಾಡಿದ ನಿನಗಾಗಿ?"

ಅವನಿಗೂ ದೇವರ ಮೇಲೆ ಕೋಪ ಬಂದಿತು. ತನ್ನ ಕರುಣ ಕೂಗಿನ ಮೊರೆಗೆ ಆ ದೇವರ ಮಾರುತ್ತರವೆಲ್ಲಿ? ಇಷ್ಟು ಕಷ್ಟ ಕೊರಗು ಏಕೆ ಈ ಪ್ರಪಂಚದಲ್ಲಿ? — ದೇವರ ಪ್ರಪಂಚದಲ್ಲಿ? ಪಂಡಿತ ವಿದ್ಯಾ ಸಾಗರರ ಕಹಿಮಾತು ಅವನ ಕಿವಿಯಲ್ಲಿ ಕೇಳಿಸಿತು:—

" ಭಗವಂತ ದಯಾಮಯನಿದ್ದರೆ ತುತ್ತುಕೂಳಿಗಾಗಿ ಲಕ್ಷಾಂತರ ಜನ ಸಾಯುವುದೇಕೆ? "

ಭಗವಂತನ ವಿರುದ್ಧ ಅವನ ಹೃದಯದಲ್ಲಿ ದೊಂಬೆಯೆದ್ದಿತು! ದೇವರ ಮೇಲೆ ಅವನ ಕಾಳಗದ ಕಹಳೆ ಕೂಗಿತು!

ತನ್ನ ಮತಗಳ ವಿಷಯದಲ್ಲಿ ಮುಚ್ಚುಮರೆ ಎನ್ನುವುದು ಅವನಿಗೆ ಗೊತ್ತೇ ಇರಲಿಲ್ಲ. ಆದರೆ ಈಗಂತೂ ಅವನು ಘಂಟಾಘೋಷವಾಗಿ ಭಗವಂತನ ವಿರುದ್ಧ ಸಾರಹತ್ತಿದನು:- " ದೇವನಿಲ್ಲ! ಇದ್ದದ್ದೇ ಆದರೆ ಅವನು ದುಷ್ಟನಿದ್ದಾನೆ! "

ನಾಸ್ತಿಕನೆಂದು ಅವನ ಖ್ಯಾತಿಯಾಯಿತು. ಅವನ ನಾಸ್ತಿಕತೆಗೆ ಧರ್ಮಮಾರ್ತಂಡರು ಎಂಥೆಂಥ ಕಾರಣಗಳನ್ನೋ ಹಚ್ಚಿದರು. ಅವನ

ರೀತಿನೀತಿಗಳನ್ನು ಸಹ ನಿಂದಿಸಿದರು. ಮಿಥ್ಯಾಪವಾದಗಳಿಂದ ಅವನ ಮನಸ್ಸು ಇನ್ನೂ ಕಠೋರವಾಯಿತು. ಇಂಥ ಅಧಃಪತಿತ ಪ್ರಪಂಚದಲ್ಲಿ ದುಃಖದುರ್ದಿನಗಳಿಗೆ ಗುರಿಯಾದ ತನ್ನ ಮನಸ್ಸಿಗೆ ತೋರಿದ ಮತಗಳನ್ನು ಸಾರುವುದರಲ್ಲಿ ಆಗುವ ಕ್ಷಣಿಕ ಸಮಾಧಾನವನ್ನಾದರೂ ಪಡೆಯುವ ಅಧಿಕಾರ ತನ್ನದೆಂದು ಎದೆಯುಬ್ಬಿಸಿ ಮುಚ್ಚುಮರೆಯಿಲ್ಲದೆ ಹೇಳುವುದರಲ್ಲಿ ಅವನಿಗೆ ಒಂದು ತೆರನಾದ ಆನಂದವೇ ಆಗುತ್ತಿತ್ತು, ಅಭಿಮಾನವೆನಿಸುತ್ತಿತ್ತು. ಇಂಥ ಹಾದಿಯಿಂದಲೂ ತನ್ನ ಮನಸ್ಸಿಗೆ ಹಾಯಾಗುತ್ತಿದ್ದರೆ ಇನ್ನೊಬ್ಬರ ಹೆದರಿಕೆಯಾದರೂ ಏಕೆ ಎಂದು ಅವನ ನಂಬಿಕೆ. 'ಭಕ್ತಿಯುತರಿಗೆ ಇದು ಸರಿಯಲ್ಲ' ಎಂದು ಶ್ರೀರಾಮಕೃಷ್ಣರ ಕೆಲ ಶಿಷ್ಯರು ಬೋಧಿಸಿದರು. " ಬರೀ ಹೆದರಿಕೆಯಿಂದಲೇ ದೇವರಿದ್ದಾನೆ ಎನ್ನುವದು ಹೇಡಿತನ " ಎಂದು ಗದರಿಸಿದನು. ಮತ್ತು ಅವರನ್ನು ದೂಡಿ ಹಾಕಿದನು. ಉಳಿದವರಂತೆ ಶ್ರೀರಾಮಕೃಷ್ಣರೂ ತನ್ನನ್ನು ದೂಷಿಸುವರೇ ಎಂಬ ಅಂಜಿಕೆ ಮಾತ್ರ ಅವನನ್ನು ಬಾಧಿಸಿತು. ಆದರೆ ಅವನ ಅಹಂಕಾರ ಕೆರಳಿತು. " ಅದರಲ್ಲೇನು ? ಒಬ್ಬ ಮನುಷ್ಯನ ಒಳ್ಳೇ ಹೆಸರು ಇಂಥ ಹೇಡಿ ತಳಹದಿಯ ಮೇಲೆ ನಿಲ್ಲುವುದಾದರೆ ಅದರ ಪರಿವೆಯೇಕೆ ? ನಾನು ಅದನ್ನು ಕಾಲ್ಕೆಳಗೆ ತುಳಿದು ಬಿಡುತ್ತೇನೆ .... !"

ಈ ಹುಡುಗ ಕೈಬಿಟ್ಟಿತು ಎಂದರು ಎಲ್ಲರೂ. ದಕ್ಷಿಣೇಶ್ವರದಲ್ಲಿ ಕುಳಿತ ಶ್ರೀರಾಮಕೃಷ್ಣರು ಮಾತ್ರ ನರೇಂದ್ರನಲ್ಲಿ ನೆಲಸಿದ ನಂಬಿಗೆಗೆ ಎರವಾಗಲಿಲ್ಲ. ಕಾಲ ಬರುವುದು. ತನ್ನಿಂದ ತಾನೇ ನರೇಂದ್ರನ ಉದ್ಧಾರವಾಗುವುದು. ಆ ಕಾಲ ಬರುವುದು ಎಂದು ಅವರ ಬಲವಾದ ವಿಶ್ವಾಸ.

ಬೇಸಗೆ ಕಳೆಯಿತು. ಬಾಳಿನ ಕೂಳಿಗಾಗಿ ಅಂಡಲೆಯುವ ಭಂಡಾಟ ತಪ್ಪಿರಲಿಲ್ಲ ನರೇಂದ್ರನಿಗೆ. ಒಂದು ದಿನ ಸಂಜೆ ಹೊಟ್ಟೆಯಲ್ಲಿ ಏನೂ ಇರಲಿಲ್ಲ. ಕಂಗೆಟ್ಟು ಕಾಲು ಸಾಗದೆ ಒಂದು ಮನೆಯ ಎದುರಿನಲ್ಲಿ

ಬೀದಿಯಲ್ಲಿಯೇ ಕುಪ್ಪಳಿಸಿದನು. ಅವನ ಕಂಗಾಲಾದ ದೇಹದಲ್ಲೆಲ್ಲ ಜ್ವರದ ಬಾಧೆ. ಹಿಂದೆಂದೂ ಆಗದ ಅನುಭವವೊಂದು ಆಗಿಹೋಯಿತು. ತನ್ನ ಆತ್ಮವನ್ನು ಮುತ್ತಿದ ಪಟಲ ಹರಿದಂತಾಯಿತು. ಒಳಗಿನಿಂದ ಬೆಳಕು ಚಿಮ್ಮಿದಂತಾಯಿತು. ಅವನ ಸಂದೇಹಗಳೆಲ್ಲ ತಮ್ಮಿಂದ ತಾವೇ ಬಯಲಾದವು. ನಿಜವಾಗಿಯೂ ಅವನು ಅನ್ನಬಹುದಾಗಿತ್ತು:—

"ಕಂಡೆ! ಅರಿತೆ! ನಂಬಿದೆ! ಮೋಹದೂರನಾದೆ ....!"

ಅವನ ದೇಹಕ್ಕೆ ಮನಸ್ಸಿಗೆ ನೆಮ್ಮದಿಯಾಯಿತು. ಏಕಾಂತದಲ್ಲಿ ಹೋಗಿ ಇರುಳನ್ನೆಲ್ಲ ಧ್ಯಾನದಲ್ಲಿ ಕಳೆದನು. ಬೆಳಗಾಗುತ್ತಲೆ ಮನಸ್ಸು ನಿರ್ಧಾರಕ್ಕೆ ಬಂದಿತು. ತನ್ನ ತಾತನಂತೆ ತಾನೂ ಸಂಸಾರಕ್ಕೆ ಶರಣು ಹೊಡೆದು ಬಿಡಬೇಕೆಂದು ನಿರ್ಣಯಿಸಿದನು. ಈ ಪ್ರತಿಜ್ಞೆ ಪೂರ್ಣ ಮಾಡುವ ದಿನವನ್ನೂ ಗೊತ್ತುಪಡಿಸಿದನು.

ಅಂದು, ಆ ದಿನವೇ, ಯಾರೂ ಅರಿಯದಂತೆ ಶ್ರೀರಾಮಕೃಷ್ಣರು ಕಲಕತ್ತೆಗೆ ಬಂದರು. ಅಂದಿನ ಇರುಳನ್ನು ದಕ್ಷಿಣೇಶ್ವರದಲ್ಲಿ ತಮ್ಮ ಜೊತೆಯಲ್ಲಿ ಕಳೆಯಲು ನರೇಂದ್ರನನ್ನು ಕರೆದರು. ಅವನು ತಪ್ಪಿಸ ಬೇಕೆಂದು ಯತ್ನಿಸಿದನು; ವ್ಯರ್ಥವಾಯಿತು. ಗುರುಗಳ ಬೆನ್ನು ಹತ್ತಿ ಹೋಗಲೇಬೇಕಾಯಿತು.

ಆ ರಾತ್ರಿ ಕೋಣೆಯಲ್ಲಿ ಕದ ಮುಚ್ಚಿ ನರೇಂದ್ರನನ್ನು ಹತ್ತಿರ ಕುಳ್ಳಿರಿಸಿಕೊಂಡು ಶ್ರೀರಾಮಕೃಷ್ಣರು ಭಜನಗೀತವನ್ನು ಹಾಡಿದರು. ಅವರ ಮಧುರ ಭಕ್ತಿಗೀತದಿಂದ ಆ ತರುಣ ಶಿಷ್ಯನ ಕಂಬನಿ ಕೋಡಿ ಹರಿದವು. ತನ್ನ ಇಂಗಿತವನ್ನು ತನ್ನ ನಿರ್ಧಾರವನ್ನು ಕಂಡು ಹಿಡಿದಿರುವರೆಂದು ಅವನಿಗೆ ಹೊಳೆಯಿತು. ಶ್ರೀರಾಮಕೃಷ್ಣರು ಅಂದರು:—

"ನೀನು ಸಂಸಾರದಲ್ಲಿ ಸಿಲ್ಕಿರಲಾರೆ. ಆದರೆ ನನಗಾಗಿ ನಾನಿರುವ ವರೆಗೆ ಇರು."

ನರೇಂದ್ರ ಮನೆಗೆ ಮರಳಿದನು. ವಕೀಲರ ಕಚೇರಿಯಲ್ಲಿ ಭಾಷಾಂತರ ಮಾಡುವ ಯಾವುದೋ ಕೆಲಸ ಸಿಕ್ಕಿತು. ಅದೂ ತಾತ್ಪೂರ್ತಿಕವೇ.

ಇಂದಿನ ಚಿಂತೆ ತಪ್ಪಿದರೆ ನಾಳಿನ ಚಿಂತೆ ಬಿಟ್ಟಿರಲಿಲ್ಲ. ತನಗಾಗಿ ತನ್ನವರಿಗಾಗಿ ಪ್ರಾರ್ಥಿಸಲು ಅವನು ಶ್ರೀರಾಮಕೃಷ್ಣರಿಗೆ ಬಿನ್ನವಿಸಿದನು. ಶ್ರೀರಾಮಕೃಷ್ಣರು ಅಂದರು:—

"ಮಗು, ಆ ಪ್ರಾರ್ಥನೆ ನಾನು ಮಾಡಲಾರೆ. ನೀನೇ ಏಕೆ ಮಾಡುವುದಿಲ್ಲ ?"

ನರೇಂದ್ರ ಕಾಳೀಮಾತೆಯ ಗುಡಿಯನ್ನು ಹೊಕ್ಕನು. ಭಕ್ತಿ ತುಂಬಿತ್ತು. ಉತ್ಸಾಹ ಹೊರಸೂಸುತ್ತಿತ್ತು. ಪ್ರೇಮಶ್ರದ್ಧೆ ಹೃದಯದಿಂದ ಹೊರಹೊಮ್ಮಿದವು. ಮರಳಿ ಬರುತ್ತಲೆ ಶ್ರೀರಾಮಕೃಷ್ಣರು 'ಪ್ರಾರ್ಥನೆ ಯಾಯಿತೇ ?' ಎಂದು ಕೇಳಿದರು. ತನ್ನ ಕಷ್ಟ ಕಳೆಯಲು ತಾನು ಬೇಡಿಕೊಳ್ಳಲೇ ಇಲ್ಲ ಎಂದು ನರೇಂದ್ರನಿಗೆ ಹೊಳೆಯಿತು. ಮತ್ತೆ ಹೋಗಹೇಳಿದರು. ಮತ್ತೆ ಹೋದನು. ಬಂದನು. ಮೂರನೆಯ ಸಲ ಮತ್ತೆ ಹೋದನು. ಮತ್ತೂ ಮರಳಿ ಬಂದನು. ಗುಡಿಯನ್ನು ಹೊಕ್ಕಾ ಕ್ಷಣಕ್ಕೆ ತನ್ನ ಪ್ರಾರ್ಥನೆಯ ಉದ್ದಿಷ್ಟವನ್ನೇ ಮರೆತು ಬಿಡುತ್ತಿದ್ದನು. ಮತ್ತೊ ಒಂದು ಸಲ ಹೋದನು. ತಾನು ಏಕೆ ಪ್ರಾರ್ಥಿಸಬಂದಿರುವೆ ನೆಂಬುದರ ನೆನಪಾಗುತ್ತಲೆ ಅವನಿಗೆ ನಾಚಿಕೆಯಾಯಿತು. "ಅಮ್ಮಾ! ಅದೆಂಥ ಸಣ್ಣ ಮಾತಿಗಾಗಿ ನಿನ್ನನ್ನು ನಾನು ಬೇಡಲು ಬಂದಿರುವೆ ನಮ್ಮಾ !" ಬೇಡುವುದನ್ನು ಬಿಟ್ಟು ಭಜನೆಯನ್ನು ಮಾಡಿದನು:-

"ತಾಯೇ, ನಿನ್ನನ್ನು ಅರಿಯಲು, ನಿನ್ನನ್ನು ನಂಬಲು, ಬಲ ಬೇಕು. ಆ ಬಲವನ್ನು ನನಗೆ ದಯಪಾಲಿಸು. ಇನ್ನೇನೂ ಬೇಕಿಲ್ಲ ನನಗೆ !"

ಅಂದಿನಿಂದ ಹೊಸದೊಂದು ಬಾಳಿಗೆ ಮೊದಲಾಯಿತು. ಅವನು ಅರಿತನು, ನಂಬಿದನು. ಕಂಬನಿಯಿಂದ ಹಸನಾದ ರೊಟ್ಟಿಯನ್ನು ಮಾತ್ರ ಅವನು ಮರೆಯಲಿಲ್ಲ. ಆ ರೊಟ್ಟಿಯಲ್ಲಿ ಪಾಲುಗಾರರಾದ ಸಮದುಃಖಿ ಗಳಾದ ಬಂಧುಗಳನ್ನೂ ಅವನು ಎಂದಿಗೂ ಮರೆಯಲಿಲ್ಲ.

ಅವನ ಶ್ರದ್ಧೆ ಅಚಲವಾಗಿದ್ದಿತು. ಒಂದು ನಿರ್ಧಾರದ ಘೋಷ

ಅವನ ಶ್ರದ್ಧೆಯನ್ನು ವಿಶ್ವಕ್ಕೆ ಸಾರಿತು:—

" ನಿಖಿಲ ಜೀವಸೃಷ್ಟಿಯೇ ನನ್ನ ದೇವ! ಏಕಮಾತ್ರ ದೇವ! ಅವನಲ್ಲಿಯೇ ನನ್ನ ಶ್ರದ್ಧೆ! ಎಲ್ಲಕ್ಕೂ ಮೇಲಾಗಿ, ದುರುಳರಲ್ಲಿ ಹುದುಗಿದ ದೇವನೇ ದೇವ! ದೀನರಲ್ಲಿ ಲೀನನಾಗಿಹ ದೇವನೇ ದೇವ! ಕಂಗಾಲರಲ್ಲಿ ಕೊರಗುತಿಹ ದೇವನೇ ದೇವ! ಎಲ್ಲ ಜನಾಂಗಗಳ ದೀನ ದರಿದ್ರರೇ ನನ್ನ ದೇವದೇವ....!"

ಅವನ ಅಹಂಕಾರವನ್ನು ಕರಗಿಸಿಬಿಟ್ಟರು ಶ್ರೀರಾಮಕೃಷ್ಣರು. ಆಳಲು ಹುಟ್ಟಿದ ಆ ವೀರ ಕ್ಷತ್ರಿಯನಿಗಿಂತ ಹೆಚ್ಚಿಗೆ ವಿಧೇಯನಾದ ಗುರುಶಿಶು ಶ್ರೀರಾಮಕೃಷ್ಣರಿಗೆ ಅಂದಿನಿಂದ ಮುಂದೆ ಇನ್ನಾರೂ ಸಿಕ್ಕ ಲಿಲ್ಲವೆನ್ನಬಹುದು. ಗುರುಶಿಷ್ಯರಿಬ್ಬರೂ ಒಬ್ಬರೊಬ್ಬರಲ್ಲಿ ಪೂರ್ಣ ಬೆರೆತು ಹೋದರು. ಗುರು ಎಂದರೆ ಶಿಷ್ಯ. ಶಿಷ್ಯನೆಂದರೆ ಗುರು. ಆದರೂ ಅನನ್ಯಶರಣನಾದ ಗುರುಭಕ್ತಿಪರವಶನಾದ ಆ ಶಿಷ್ಯನನ್ನು ಅಳತೆಯಲ್ಲಿ ಡುವುದು ಅವಶ್ಯವಿತ್ತು. ಅರ್ಥಮರ್ಥ ಅನ್ನುವುದು ಅವನಿಗೆ ಗೊತ್ತೇ ಇರಲಿಲ್ಲ. ಇಂಥ ವೃತ್ತಿ ಭಯಪ್ರದವೆಂದು ಗುರು ಬಲ್ಲರು. ಬುದ್ಧಿಯ ಸೀಮೆ ದಾಟಿ, ಜ್ಞಾನದಿಂದ ಭಕ್ತಿಗೆ, ಧ್ಯಾನದಿಂದ ಕರ್ಮಕ್ಕೆ, ಹೀಗೆ ಎಲ್ಲವನ್ನೂ ಒಂದೇ ತೆಕ್ಕೆಯಲ್ಲಿಯೇ ತನ್ನದಾಗಿ ಮಾಡಿಕೊಳ್ಳುವ ಹಂಬಲ ಆ ಶಿಷ್ಯನ ಆತ್ಮಕ್ಕೆ. ಶ್ರೀರಾಮಕೃಷ್ಣರ ಬಾಳಿನ ಕೊನೆ ಕೊನೆಯ ದಿನಗಳಲ್ಲಿ ಶಿಷ್ಯ ಗುರುಗಳನ್ನು ಬಲು ಕಾಡಿದನು, ಬ್ರಹ್ಮಾ ನಂದದಲ್ಲಿ, ನಿರ್ವಿಕಲ್ಪಸಮಾಧಿಯಲ್ಲಿ ಲೀನನಾಗಿ ಹೋಗಲು ಅಪ್ಪಣೆ ಕೊಡಬೇಕೆಂದು. ಅದಕ್ಕೆ ಗುರು ಸರ್ವಥಾ ಒಪ್ಪಲಿಲ್ಲ. ಸ್ವಾಮಿ ಶಿವಾ ನಂದರು ಬರೆಯುತ್ತಾರೆ:— "ಒಂದು ದಿನ ಕಲಕತ್ತೆಯ ಬದಿಯ ಕಾಶೀಪುರ ತೋಟದಲ್ಲಿ ನರೇಂದ್ರ ಈ ನಿರ್ವಿಕಲ್ಪ ಸ್ಥಿತಿಯ ತೀರ ಹತ್ತಿರಹತ್ತಿರಕ್ಕೆ ಹೋಗಿದ್ದನು. ಮೈಮರೆತನು. ಅವನ ಮೈ ಹೆಣ ದಂತೆ ಸೆಟೆದು ಹೋಯಿತು. ಗಾಬರಿಯಾಗಿ ನಾವು ಗುರುಗಳತ್ತ ಓಡಿ ಹೋಗಿ ಹೇಳಿದೆವು. ನಿಶ್ಚಿಂತೆಯಿಂದ ಶಾಂತಿಯಿಂದ ಮೆಲುನಗೆ ನಗುತ್ತ

ಗುರು 'ಒಳ್ಳೇದು, ನಡೆಯಲಿ!' ಎಂದು ಸುಮ್ಮನಾದರು. ಮತ್ತೆ ಎಚ್ಚರಿಕೆ ಬರುತ್ತಲೆ ನರೇಂದ್ರ ಗುರುಗಳ ಬಳಿ ಸೇರಿದನು. ಗುರು ಅಂದರು: "ಈಗಲಾದರೂ ತಿಳಿಯಿತೇ? ಇದನ್ನು ಇನ್ನು ಮುಂದೆ ಭದ್ರವಾಗಿ ಬೀಗದಲ್ಲಿರಿಸು. ಕಾಲೀಮಾತೆ ನಿನಗೊಪ್ಪಿಸಿದ ಕಾರ್ಯ ನೀನು ಮಾಡಬೇಕಾಗಿದೆ. ಅದು ಕೊನೆಗಾಣುತ್ತಲೆ ಅವಳೇ ಆ ಬೀಗ ತೆಗೆದು ಕದ ತೆರೆಯುವಳು!" ನರೇಂದ್ರ ಅಂದನು:— "ಗುರು, ಆ ಸಮಾಧಿಯಲ್ಲಿ ನಾನು ಸುಖಿಯಾಗಿದ್ದೆ. ಆ ಅನಂತ ಆನಂದದಲ್ಲಿ ಪ್ರಪಂಚವನ್ನೇ ಮರೆತು ಹೋಗಿದ್ದೆ. ಆ ಸ್ಥಿತಿಯಲ್ಲಿಯೇ ಇರಲು ಅಪ್ಪಣೆಯನ್ನು ದಯಪಾಲಿಸುವಿರಾ?" ಗುರು ಕೂಗಿದರು, "ಛೀ! ನಾಚಿಕೆಗೇಡಿ! ಹೇಗದು ಇಂಥದನ್ನು ಬೇಡುವುದು? ನೀನು ಪ್ರಪಂಚದ ಜೀವನದ ಮಹಾಸಾಗರವೆಂದು ನಾನು ತಿಳಿದಿರುವೆನು. ಮಿಕ್ಕ ಸಾಮಾನ್ಯ ಜೀವಿಯಂತೆ ನೀನು ಸ್ವಾರ್ಥಿಯಾಗಿ ಇಂಥ ಆನಂದದಲ್ಲಿ ಮೈಮರೆತು ಹೋಗಲೆಳಸುವಿಯಾ? ಆದರೆ ಆ ಮಹಾತಾಯಿಯ ಪ್ರಸಾದದಿಂದ ಇಂಥ ಆನಂದ ನಿನಗೆ ಸ್ವಾಭಾವಿಕವೇ ಆಗಿ ಹೋಗುವುದು. ನಿತ್ಯದ ಬಾಳಿನಲ್ಲಿ ಸಹ ಸರ್ವವ್ಯಾಪಿಯಾದ ಭಗವಂತನ ಅನುಭವ ನಿನಗೆ ಯಾವಾಗಲೂ ಆಗುತ್ತಲೇ ಇರುವುದು. ಪ್ರಪಂಚದಲ್ಲಿ ನಿನ್ನಿಂದ ಮಹಾ ಕಾರ್ಯವಾಗಬೇಕಾಗಿದೆ. ದೀನರ, ದರಿದ್ರರ, ದುಃಖಿತರ ದುಃಖವನ್ನು ನೀನು ದೂರಮಾಡಬೇಕಾಗಿದೆ....!"

ಶಿಷ್ಯನ ಪಾಲಿಗೆ ಮೀಸಲಾದ ಭಗವತ್ಸಂಕಲ್ಪಿತ ಕಾರ್ಯವನ್ನು ಗುರು ಕಂಡು ಹಿಡಿದಿದ್ದರು. ಒಲ್ಲೆನೆಂದರೂ ಅವನ ಮೇಲೆ ಗುರು ಈ ಕಾರ್ಯದ ಭಾರ ಹೇರಿದರು. "ಸಾಮಾನ್ಯ ಆತ್ಮರು ಪಾಠ ಕಲಿಸುವ ಹೊಣೆಗೆ ಹೆದರುತ್ತಾರೆ. ಹಗುರಾದ ಕಟ್ಟಿಗೆಯ ಸಣ್ಣ ತುಂಡು ನೀರ ಮೇಲೆ ತೇಲುತ್ತಿರುವುದೇನೋ ಸರಿ. ಆದರೆ ಚಿಕ್ಕ ಹಕ್ಕಿಯೊಂದು ಮೇಲೆ ಬಂದು ಕುಳಿತಾಕ್ಷಣಕ್ಕೆ ಆ ತುಂಡು ಮುಳುಗುತ್ತದೆ. ಆದರೆ ನರೇಂದ್ರನ ಮಾತು ಬೇರೆ. ಭಾಗೀರಥಿಯ ವಿಶಾಲ ಪ್ರವಾಹದ ಮೇಲೆ

ಪಶುಪಕ್ಷಿ, ದನಕರು, ಮಾನವರನ್ನೂ ಎತ್ತಿ ಹಿಡಿದು, ತೇಲಿಸುತ್ತ, ಗಂಭೀರವಾಗಿ ಸಾಗುತ್ತಿರುವ ಹೆಮ್ಮರದ ಹಿರಿದಾದ ತಾಳು ನರೇಂದ್ರನ ಬಾಳು! ”

# ೨ ಗುರು-ಶಿಷ್ಯ

ಭಗವಾನ್ ಶ್ರೀರಾಮಕೃಷ್ಣ ಪರಮಹಂಸರ ಆಧ್ಯಾತ್ಮಿಕ ಕಾರ್ಯ ವನ್ನು ಮುಂದೆ ಸಾಗಿಸುವುದಿತ್ತು. ಅವರ ವಿಚಾರಗಳ ಸಸಿಗಳನ್ನು ಲೋಕದಲ್ಲೆಲ್ಲ ಹರಡುವುದಿತ್ತು. ಈ ಎಲ್ಲ ಹೊಣೆ ಒಬ್ಬ ಶಿಷ್ಯೋತ್ತಮನ ಪಾಲಿಗೆ ಬಂದಿತು. ಆವರೆ ಶಾರೀರಿಕ ಮತ್ತು ಆತ್ಮಿಕ ದೃಷ್ಟಿಗಳಿಂದ ನೋಡಿದರೆ ಆ ಗುರು-ಶಿಷ್ಯರಲ್ಲಿ ಅದೆಂಥ ವ್ಯತ್ಯಾಸ! — ಅದೆಂಥ ವೈಷಮ್ಯ!

ಚಿನ್ಮಯ ಭಗವತೀ ವಿಶ್ವಮಾತೆಯ ಅಡಿದಾವರೆಯಲ್ಲಿ ತಮ್ಮ ಬಾಳನ್ನೆಲ್ಲ ಸವೆಯಿಸಿದರು ಆ ದಿವ್ಯಾತ್ಮರಾದ ಗುರುಶ್ರೇಷ್ಠರು. ಚಿಕ್ಕಂದಿನಿಂದಲೂ ಅವರ ಬಾಳು ಅವಳಿಗೆ ಮೀಸಲು. ಅವರಿಗೆ ಆತ್ಮಜ್ಞಾನ ವಾಗುವ ಮುಂಚೆಯೇ ಅವರ ಭಕ್ತಿ ಅವಳಲ್ಲಿ ಬೇರೂರಿತು. ಅವಳ ಸನ್ನಿಧಿ ಸೇರಲು—ಸೇರುವ ಮುಂಚೆ-ಅವರು ವರ್ಷಾನುವರ್ಷ ಯಾತನೆ ಗಳನ್ನು ಅನುಭವಿಸಿದರು. ಅವಳಲ್ಲಿ ನಿರ್ಮಲ ಪ್ರೇಮವನ್ನೂ ಭಕ್ತಿ ಯನ್ನೂ ಅರ್ಪಿಸುವ ಅರ್ಹತೆ ಆ ಯಾತನೆಗಳಿಂದಲೇ ಅವರಲ್ಲಿ ಬಂದುದು. ಕಟ್ಟಡವಿಯಲ್ಲಿ ಅಂಕಡೊಂಕಾಗಿ ಸಿಕ್ಕಸಿಕ್ಕಂತೆ ಹಾದಿಯನ್ನು ಹುಡುಕಿ ಕೊಂಡು ಕೊನೆಗೆ ಅವರು ತಮ್ಮ ಗುರಿಯನ್ನು ಕಂಡರು. ಅನೇಕ ನಾಮರೂಪಗಳಲ್ಲಿ ಹುದುಗಿಕೊಂಡ ವಿಶ್ವಮಾತೆ ಅವರ ಏಕಮಾತ್ರ ಗುರಿ. ಅವಳನ್ನು ಕಾಣುತ್ತಲೆ ಅವಳ ವ್ಯಕ್ತಸ್ವರೂಪವಾದ ಅನೇಕ ನಾಮರೂಪಗಳನ್ನು ಅವರು ಅರಿತರು, ಅಕ್ಕರತೆಯಿಂದ ಅಪ್ಪಿದರು. ಅವಳಲ್ಲಿ ಅವರು ವಿಶ್ವವನ್ನೆಲ್ಲ ಕಂಡು ಒಲಿದು ನಲಿದರು. ಈ ಬ್ರಹ್ಮಾನಂದದ ಪ್ರಶಾಂತ ಪರಿಪೂರ್ಣತೆಯಲ್ಲಿ ಅವರು ಮಿಕ್ಕಬಾಳನ್ನೆಲ್ಲ ಕಳೆ

ದರು. ಒಂದಕ್ಕೊಂದು ತಿಕ್ಕಿ ತಾಕಲಾಡುವ ಕಾರ್ಮೋಡಗಳ ಸಂದಿನಲ್ಲಿ ಇಣುಕುವ ಕಿರಣದಂತೆ ಅನ್ಯ ಸಾಧಕರಿಗೆ ಕಾಣುವುದು ಆ ಚಿದಾನಂದ ಜ್ಯೋತಿ. ಆದರೆ ಮಿಂಚುಮಬ್ಬುಗಳ ಮಂಜುಮುಸುಕಿನ ಆಚೆಯ ಆ ಘನನೀಲ ಅನಂತತೆಯಲ್ಲಿ ಭಗವಾನ್ ರಾಮಕೃಷ್ಣಪರಮಹಂಸರು ವಿಶ್ವ ವಿಶಾಲವಾದ ರೆಕ್ಕೆಗಳನ್ನು ಹರವಿ ಮಾನಸ ಸರೋವರದಲ್ಲಿಯ ಹಂಸನಂತೆ ವಿಹರಿಸಿದರು.

"ನಾನು ! ನಾನು !" ಎಂಬ ಹೆಮ್ಮೆಯಿಂದ ಎದೆಯ ಮೇಲೆ ಕೈಯನ್ನಿಡುವ ಮಹಾನ್ ಮಹಾನ್ ಶಿಷ್ಯರಿಗೂ ಅವರನ್ನು ಸರಿಗಟ್ಟುವುದು ಅಸಾಧ್ಯವಾಯಿತು. ಆ ಶಿಷ್ಯರಲ್ಲಿ ಸರ್ವಶ್ರೇಷ್ಠರಾದ ವಿವೇಕಾನಂದರು ಸಹ ಒಮ್ಮೆಲೇ ಧೀಂಕಿಟ್ಟು ನೆಗೆದು, ಮೊಳಗುವ ಮೋಡಗಳನ್ನು ಮೆಟ್ಟಿ ಒಮ್ಮೊಮ್ಮೆ ಮೇಲೆ ಹಾರುತ್ತಿದ್ದರು. ಆದರೆ ಅಲ್ಲಿ ಕೆಲಕಾಲ ಶಾಂತಿಯಲ್ಲಿ ವಿಹರಿಸುವಾಗಲೂ ಸುತ್ತೆಲ್ಲ ಬೀಸುವ ಬಿರುಗಾಳಿ ಅವರ ಆತ್ಮದ ಹರಿಗೋಲನ್ನು ಅಲ್ಲೋಲಕಲ್ಲೋಲವಾಗಿ ಮಾಡುತ್ತಿತ್ತು. ಬಾಳಿನ ಕೂಗು, ಯುಗಯುಗಗಳ ಯಾತನೆ ಇವೆಲ್ಲ ಹಸಿದ ಹಕ್ಕಿಗಳಂತೆ ಅವರ ಸುತ್ತೆಲ್ಲ ಕೂಗಾಟವನ್ನು ಎಬ್ಬಿಸುತ್ತಿದ್ದವು. ಸಾಮರ್ಥ್ಯದ (ದೌರ್ಬಲ್ಯದವಲ್ಲ) ಉದ್ರೇಕಗಳು ಅವರ ಸಿಂಹಸಮ ಹೃದಯದಲ್ಲಿ ಹೋರಾಡುತ್ತಿದ್ದವು. ಅವರು ಮೂರ್ತಿವೆತ್ತ ಪ್ರಾಣಶಕ್ತಿ. ಕರ್ಮವೇ ಅವರ ಸಂದೇಶ. ಅದೇ ಸರ್ವಸದ್ಗುಣಗಳ ತಾಯಿಬೇರು. ಭಾರತದಲ್ಲಿ ನೆಲೆಗೊಂಡ ನೈಷ್ಕರ್ಮ್ಯವನ್ನು ಕಂಡು ಸಿಡಿದೆದ್ದು ಅವರು ಹೀಗೂ ಕೂಗಿದರು:-

"ಎಲ್ಲಕ್ಕೂ ಮೊದಲು ಸಮರ್ಥರಾಗಿರಿ ! ವೀರರಾಗಿರಿ ! ದುಷ್ಟನಾದರೂ ಚಿಂತೆಯಿಲ್ಲ, ಗಟ್ಟಿಗನಾಗಿ ಗಂಡುಸಾಗಿ ಬಾಳುವವನಲ್ಲಿ ನನಗೆ ಆದರವಿದೆ ! ಗಟ್ಟಿಗನಾದವನು ಒಮ್ಮಿಲ್ಲೊಮ್ಮೆ ತನ್ನ ದುಷ್ಟತನ ಬಿಟ್ಟು ಸ್ವಾರ್ಥವನ್ನು ತೊರೆದು ಸತ್ಕರ್ಮಯೋಗವನ್ನು ಸಾಧಿಸಿ ಸತ್ಯದ ಹಾದಿಯನ್ನು ಹಿಡಿಯುವನು."

ಶ್ರೀರಾಮಕೃಷ್ಣರ ಮೈಕಟ್ಟು ಮೆತ್ತಗೆ. ಆದರೂ ಹುರಿಯಾಗಿತ್ತು. ಆದರೆ ವಿವೇಕಾನಂದರದು ಜಟ್ಟಿಯ ಮೈಕಟ್ಟು. ಐದು ಅಡಿ ಎಂಟೂವರೆ ಅಂಗುಲ ಎತ್ತರದ ನಿಲುವು. ತುಂಬಿದ ತೋಳು. ಹರವಾದ ಎದೆ. ನೂರಾಎಪ್ಪತ್ತು ಪೌಂಡು ತೂಕದ ಮಲ್ಲಶರೀರ. ಹುರಿಕಟ್ಟಾಗಿ ತಿರುವಿದ ತೋಳು ಆಟಪಾಟಗಳಲ್ಲಿ ನುರಿತಿದ್ದವು. ಎಣ್ಣೆಗೆಂಪು ಮೈಬಣ್ಣ. ಅಗಲಾದ ತುಂಬುಮೊಗ. ಹರವಾದ ಹಣೆ. ಗಟ್ಟಿ ಗಟ್ಟಿಯಾದ ಮೆಲುಕು. ಮೊಗದ ಮೇಲೆ ಎದ್ದು ಕಾಣುತ್ತ ಹೊಳೆಯುವ ಬೊಗಸೆಗಣ್ಣು. ಮೇಲೆ ಕಮಲದಲದಂತೆ ಕಂಗೊಳಿಸುವ ದಪ್ಪಾದ ರೆಪ್ಪೆ. ಅವರ ನೋಟದ ಮಾಟ ವಿಶ್ವವಿಜಯಿಯಾಗಿತ್ತು. ಅವರ ಮುಖಮುದ್ರೆ ಮನಸೆಳೆವ ಮೋಹವನ್ನು ಬೀರಬಲ್ಲದು. ಸಹೃದಯ ವಿನೋದದಿಂದ ಹಿರಿ ಹಿರಿ ಹಿಗ್ಗಬಲ್ಲದು. ಕಿಡಿಕಿಡಿ ಕಾರಿ ಕಮರಿಸಬಲ್ಲದು. ಹರ್ಷದಿಂದ ಮೈಮರೆಯಬಲ್ಲದು. ಗಂಭೀರ ಯೋಗ-ಸಮಾಧಿಯಲ್ಲಿ ಲೀನವಾಗಬಲ್ಲದು. ಅದರ ಮುಖ್ಯ ಲಕ್ಷಣ ಚಕ್ರವರ್ತಿಯ ವರ್ಚಸ್ಸು. ಚಕ್ರವರ್ತಿಯಾಗಿಯೇ ಹುಟ್ಟಿದಂತಿದ್ದರು ಅವರು. ಹಿಂದುಸ್ತಾನದಲ್ಲಾಗಲಿ ಅಮೇರಿಕೆಯಲ್ಲಾಗಲಿ ಅವರ ಹತ್ತರ ಬರುತ್ತಲೆ ಅವರ ತೇಜಸ್ಸಿಗೆ ಮಣಿಯದವರಿಲ್ಲ. ನಮೋ ಎಂದು ಕೈಮುಗಿಯದವರಿಲ್ಲ.

ಚಿಕ್ಯಾಗೋ ಪಟ್ಟಣದಲ್ಲಿ ೧೮೯೩ರ ಸಪ್ಟಂಬರದಲ್ಲಿ ಸರ್ವಧರ್ಮ ಸಮ್ಮೇಲನದ ಪ್ರಾಸ್ತಾವಿಕ ಸಭೆಯ ಉದ್ಘಾಟನವನ್ನು ಕಾರ್ಡಿನಲ್ ಗಿಬನ್ಸರು ಮಾಡಿದಾಗ, ಕೇವಲ ಮೂವತ್ತು ವರ್ಷ ವಯಸ್ಸಿನ ಈ ಅಜ್ಞಾತ ತರುಣನ ತೇಜೋವಲಯದಲ್ಲಿ ಮಿಕ್ಕ ಧರ್ಮಪ್ರತಿನಿಧಿಗಳೆಲ್ಲರೂ ಸಪ್ಪೆಯಾದರು. ಕಣ್ಣಿಗೆ ಕಾಣದಂತಾದರು. ಈ ತರುಣನ-ವಿವೇಕಾನಂದರ-ಸಾಮರ್ಥ್ಯ ಮತ್ತು ಸೌಂದರ್ಯ, ಲಲಿತಗಂಭೀರ ಚರ್ಯೆ, ಕಣ್ಣುಗಳ ದುರ್ದಮ್ಯ ತೇಜ, ವಿಜಯ-ವರ್ಚಸ್ಸಿನ ಭವ್ಯ ಮುಖಮುದ್ರೆ, ಮಾತ ನಾಡಲು ಎದ್ದುನಿಂತ ಕ್ಷಣದಿಂದಲೇ ಆ ಮುಖದಿಂದ ಹೊರಹೊಮ್ಮಿ ನಿರರ್ಗಲವಾಗಿ ಭೋರ್ಗರೆಯುವ ನದಿಯಂತೆ ಹರಿಯುವ ಮತ್ತು

ಮೇಘಗರ್ಜನೆಯಂತೆ ಮಂದ್ರಗಂಭೀರವಾಗಿ ಮಾರ್ದನಿಯನ್ನು ಎಬ್ಬಿಸುವ ಅವರ ದಿವ್ಯವಾಣಿಯ ರುದ್ರಸಂಗೀತ!— ವಿವೇಕಾನಂದರ ವಿಷಯದಲ್ಲಿ ವರ್ಣವೈಮನಸ್ಯದಿಂದ ವಿಪರೀತಗ್ರಹದೂಷಿತರಾದ ಅಮೇರಿಕೆಯ ಆಂಗ್ಲೋಸ್ಯಾಕ್ಸನ್ ಜನರ ಅದ್ಭುತ ಶ್ರೋತೃಸಮುದಾಯವು ಸಹ ಸ್ತಂಭಿತವಾಯಿತು ! ಮಂತ್ರಮುಗ್ಧ ನಾಗಿಣಿಯಂತೆ ಮೈಮರೆತು ಮರುಳಾಯಿತು ! ಅಮೇರಿಕೆಯ ಹೃದಯದ ಮೇಲೆ ಭಾರತದ ಈ ವೀರವೈರಾಗಿಯ ರೂಪ ಕೆತ್ತಿದಂತೆ ಕಂಗೊಳಿಸಿತು !

ಹೋದ ಹೋದಲ್ಲೆಲ್ಲ ಎಲ್ಲರಿಗಿಂತಲೂ ಅವರು ಮುಂದೆ. ಇನ್ನೊಬ್ಬರು ಮುಂದೆ, ಅವರು ಹಿಂದೆ ಎಂಬ ಕಲ್ಪನೆ ಸಹ ಅಸಾಧ್ಯ. ಒಮ್ಮೆ ಒಂದು ದಿವ್ಯದರ್ಶನದಲ್ಲಿ ತಮ್ಮ ಪ್ರಿಯಶಿಷ್ಯನ ಮಗ್ಗುಲಲ್ಲಿ ತಾವು ಒಬ್ಬ ಮಹರ್ಷಿಯ ಹತ್ತಿರ ಒಂದು ಹಸುಗೂಸಾಗಿ ಕಂಡಂತೆ ಆಯಿತೆಂದು ಶ್ರೀರಾಮಕೃಷ್ಣರು ಹೇಳಿರುವರು. ಇಂಥ ಯೋಗ್ಯತೆ ಸರ್ವಥಾ ತನ್ನದಲ್ಲೆಂದು ಶಿಷ್ಯ ತನ್ನನ್ನು ತಾನು ಕಠೋರವಾಗಿ ನಿಂದಿಸಿಕೊಂಡರೂ ಗುರು ಎಳ್ಳಷ್ಟೂ ಒಪ್ಪಲಿಲ್ಲ. ವಿವೇಕಾನಂದರನ್ನು ಕಾಣುತ್ತಲೆ “ ಆಃ ! ಇವನೇ ನಮ್ಮ ಮುಂದಾಳು ! ದೇವದೂತನಿವನು ! ಆಜ್ಞಾಸಾಮರ್ಥ್ಯದಿಂದ ಎಲ್ಲರನ್ನೂ ಆಳಲು ಹುಟ್ಟಿದ ಪರಾಕ್ರಮಿ ! ” ಎಂದು ಎಲ್ಲರಿಗೂ ಹೊಳೆಯುತ್ತಿತ್ತು. ಅವರು ಹಿಮಾಲಯದ ಗುಡ್ಡಗಾಡಿನಲ್ಲಿ ಅಲೆಯುವಾಗ ಎದುರಾದ ದಾರಿಕಾರನೊಬ್ಬ ಅವರನ್ನು ಕಾಣುತ್ತಲೆ ಬೆಚ್ಚಿಬಿದ್ದು, ನಿಂತು, ಅವರಾರೆಂದು ಅರಿಯದೆ ಸೋಜಿಗದಿಂದ ಉಸುರಿದನು:-

“ ಶಿವ ! ಶಂಭೊ ! ” ಅವರ ಇಷ್ಟದೈವತನಾದ ಶಿವನು ಅವರ ಹರವಾದ ಹಣೆಯ ಮೇಲೆ ತನ್ನ ಹೆಸರನ್ನು ಮೂಡಿಸಿದ್ದನೋ ?- ಎನ್ನುವ ಹಾಗಿತ್ತು !

ಆದರೆ ಎತ್ತರದ ಗಿರಿಶಿಖರಕ್ಕೆ ದಿಕ್ಕು ದಿಕ್ಕುಗಳ ಬಿರುಗಾಳಿ ಅಪ್ಪಳಿಸಿದುವು. ಪ್ರಸನ್ನತೆಯ ಅಚಲ ಶಾಂತಿಯಿಂದ ಶ್ರೀರಾಮಕೃಷ್ಣರ ಮೋರೆಯ ಮೇಲೆ ಮೆಲುನಗೆ ಸೂಸುತ್ತಿತ್ತು. ಅಂಥ ಶಾಂತಿಯ ಮೆಲು

ನಗೆ ವಿವೇಕಾನಂದರಲ್ಲಿ ಅಪರೂಪವೇ. ಅವರ ಮಹಾಬಲಶಾಲಿಯಾದ ಶರೀರ ಮತ್ತು ಅತಿವಿಶಾಲ ಮೇಧಾಶಕ್ತಿ ಅವರ ಅಲ್ಲೋಲಕಲ್ಲೋಲ ಅಂತರಾತ್ಮನ ಆವೇಗಗಳಿಗೆ ರಣಾಂಗಣವೇ ಆಗಬೇಕೆಂದು ದೈವಸಂಕಲ್ಪವಿತ್ತು. ಭೂತ-ವರ್ತಮಾನ, ಪೂರ್ವ-ಪಶ್ಚಿಮ, ಕನಸು-ಕೃತಿ,— ಇವುಗಳ ಹೋರಾಟ ಆ ರಣಾಂಗಣದಲ್ಲಿ. ಪ್ರಕೃತಿಪುರುಷರ ತಾಕಲಾಟದಿಂದ ಆ ರಣಾಂಗಣದಲ್ಲಿ ಕೋಲಾಹಲವೆದ್ದಿತು. ಪರಸ್ಪರವಿರೋಧಿ ಶಕ್ತಿಗಳ ಸಮನ್ವಯವಾಗಬೇಕಾದರೆ ಹಲವು ವರ್ಷಗಳ ಹೋರಾಟ ನಡೆಯಿತು. ಆ ಹೋರಾಟದಲ್ಲಿ ಅವರ ಎದೆ ಬಿರಿಯಿತು. ಬಾಳು ಸಹ ಬಲಿಯಾಯಿತು. ಹೋರಾಟವೇ ಬಾಳು, ಬಾಳೇ ಹೋರಾಟವಾಗಿತ್ತು ಅವರಿಗೆ. ಅದರಲ್ಲಿಯೇ ಅವರ ಅವತಾರಸಮಾಪ್ತಿಯಾಯಿತು. ಶ್ರೀರಾಮಕೃಷ್ಣರು ಸಮಾಧಿ ಹೊಂದಿದಂದಿನಿಂದ ವಿವೇಕಾನಂದರು ಸಮಾಧಿ ಹೊಂದುವ ವರೆಗೆ ಹದಿನಾರು ವರ್ಷ ಮಾತ್ರ ಸಂದವು..... ಹದಿನಾರು ವರ್ಷಗಳ ಅಗ್ನಿದಿವ್ಯ ! ಜಗಜಟ್ಟಿಯ ದೇಹಯಷ್ಟಿ ಚಿತೆಯ ಮೇಲೆ ಒರಗಿದಾಗ ನಲವತ್ತು ವರ್ಷ ಸಹ ಬಾಳಿದ್ದಿಲ್ಲ ........!

ಆದರೆ ಆ ಚಿತೆಯ ಜ್ವಾಲೆ ಇಂದಿಗೂ ಬೆಳಕನ್ನು ಚಿಮ್ಮುತ್ತಿದೆ ! ಆ ಭಸ್ಮರಾಸಿಯಿಂದ ಭಾರತದಲ್ಲಿ ನವಚೈತನ್ಯ ಉರಿದೆದ್ದಿದೆ ! ಆತ್ಮಶ್ರದ್ಧೆಯ ಗರುಡಹಕ್ಕಿ ತನ್ನ ಹರವಾದ ರೆಕ್ಕೆ ಹರಡಿದೆ ! ವೇದಕಾಲದಿಂದಲೂ ಋಷಿಗಳ ಧ್ಯಾನದಲ್ಲಿ ಚಿಂತನದಲ್ಲಿ ಮನನದಲ್ಲಿ ರೂಪಗೊಂಡ ಮಹಾಮಂತ್ರವಲ್ಲಿ ಮತ್ತೆ ಶ್ರದ್ಧೆಯನ್ನು ವಹಿಸಿ, ಮಾನವ್ಯದ ವಿಷಯದಲ್ಲಿ ತಾನು ಹೊತ್ತು ಹೊಣೆಯನ್ನು ಭಾರತ ಪೂರೈಸಬೇಕಾಗಿದೆ !

# ೩ ಪರಿವ್ರಾಜಕ

## ಸಂಚಾರಿಯಾದ ಆತ್ಮನಿಗೆ ಸಂಸಾರದ ಕೂಗು

೧೮೮೬ನೇ ಇಸವಿಯ ಕ್ರಿಸ್‌ಮಸ್ ರಾತ್ರಿ. ಪರಂಜ್ಯೋತಿಯಲ್ಲಿ ಲೀನರಾದ ಗುರುಶ್ರೇಷ್ಠರನ್ನು ನೆನೆದು ಹರಿದ ನಲ್ಮೆಯ ಕಂಬನಿಗಳಿಂದ

ಪಾವನವಾದ ಹೊಸ ಸನ್ಯಾಸಿಸಂಘವೊಂದು ನಿರ್ಮಾಣವಾಯಿತು. ಆದರೆ ಹಲವು ತಿಂಗಳು—ಕೆಲ ವರ್ಷ—ಸಂದರೂ ಶ್ರೀರಾಮಕೃಷ್ಣರ ವಿಚಾರ ಕಾರ್ಯರೂಪಕ್ಕೆ ಇಳಿಯಲಿಲ್ಲ.

ಅದೊಂದು ಸೇತುಬಂಧವೇ— ಅಂದು ಇಂದುಗಳನ್ನು ಹೊಂದಿಸುವ— ಸೇತು ಬಂಧವೇ ಆಗಬೇಕಾಗಿತ್ತು. ಮೊದಲು ಮೊದಲು ಅದನ್ನು ಕೈಕೊಳ್ಳುವ ಧೈರ್ಯವೇ ಅವರಿಗೆ ಆಗಲಿಲ್ಲ. ಅವಶ್ಯವಿದ್ದ ಕ್ರಿಯಾಶಕ್ತಿ ಮತ್ತು ವಿಧಾಯಕ ಪ್ರತಿಭೆಯುಳ್ಳ ನರೇನ್ ("ನರೇಂದ್ರನಾಥ ದತ್ತ": ಅಮೇರಿಕೆಗೆ ಹೊರಟಾಗ "ವಿವೇಕಾನಂದ"ರಾದರು) ಸಹ ಹಿಂಜರಿದನು. ಕನಸು-ಕೃತಿಗಳ ಜಗ್ಗಾಟದಲ್ಲಿ ನುಗ್ಗಾದನು. ಸೇತುಬಂಧಕ್ಕೆ ಮುಂಚೆ ಆಚೆಯ ದಂಡೆಯನ್ನು ಅವನು ಕಂಡುಕೊಳ್ಳಬೇಕಾಗಿತ್ತು— ನಿಜವಾದ ಭಾರತ ಮತ್ತು ಇಂದಿನ ಯುಗ, ಇದರ ಅರಿವು ಆಗಬೇಕಾಗಿತ್ತು. ಕಣ್ಣಿಗೆ ಏನೂ ನಿಚ್ಚಳವಾಗಿ ಕಾಣಲೊಲ್ಲದು. ಇಪ್ಪತ್ತುಮೂರನೆಯ ವರ್ಷ ಸಹ ಇನ್ನೂ ದಾಟದ ಎಳೆಹರೆಯದ ತರುಣ. ಆ ಯುಗಪುರುಷನಾದ ಯುವಕನ ಕುದಿಯುವ ಹೃದಯದಲ್ಲಿ ಮುಂದೆ ಮಾಡಬೇಕಾದ ಜೀವನಕಾರ್ಯ ಮುಸಕುಮುಸಕಾಗಿ ಕಾಣುತ್ತಿತ್ತು. ಆ ಕಾರ್ಯ ಕರ್ಮರಂಗಕ್ಕೆ ಬರುವ ಮುಂಚೆ ಅಂತರಂಗದಲ್ಲಿ ರೂಪಗೊಳ್ಳಬೇಡವೇ ? ಅದನ್ನು ಕೈಕೊಳ್ಳುವುದೆಂದು ? ಅದರ ಆರಂಭವೆಲ್ಲಿಂದ ? ಈ ಯೋಚನೆಗಳ ತಿಕ್ಕಾಟದಲ್ಲಿ ಗಾಸಿಯಾಗಿ ನಿರ್ಣಯವನ್ನು ಮುಂದಕ್ಕೆ ನೂಕಹತ್ತಿದನು. ಆದರೆ ಅಂತರಂಗದ ಆಳದಲ್ಲಿ ಆ ಯೋಚನೆಗಳ ಕೋಲಾಹಲ ಶಾಂತವಾಯಿತೇ ?

ಹಗಲಿರುಳು ಆ ಕೋಲಾಹಲ ಅವನ ಬೆನ್ನು ಬಿಡಲಿಲ್ಲ ! ಸಂಸಾರದಲ್ಲಿ ಈಸಿ ಜಯಿಸಲೇ? ಅಥವಾ ಈಶಸಾಕ್ಷಾತ್ಕಾರಕ್ಕಾಗಿ ಸಂಸಾರ ಸೂರೆ ಮಾಡಲೇ ? ಈ ವಿರೋಧಿಯಾದ ಆಕಾಂಕ್ಷೆಗಳ ತಿಕ್ಕಾಟ. ಪ್ರಭಾವದಲ್ಲಿಯ ವಿರೋಧಿಯಾದ ರಾಗಗಳ ತಿಕ್ಕಾಟ. ಇವೆರಡರ ಭೀಕರ ತಾಕಲಾಟದಲ್ಲಿಯೂ ಆ ಕೋಲಾಹಲ ಕೈತೊಳೆದು ಬೆನ್ನೇ ಹತ್ತಿದ್ದಿತು !

ಅವನ ಇಡೀ ಬಾಳಿನಲ್ಲೆಲ್ಲ ಈ ಕೋಲಾಹಲ ಅವ್ಯಾಹತವಾಗಿ ಸಾಗಿಯೇ ಇತ್ತು. ವಿಶ್ವವೂ ಬೇಕು. ವಿಶ್ವರೂಪನೂ ಬೇಕು. ಎಲ್ಲವನ್ನೂ ಬಿಡುವ, ಎಲ್ಲವನ್ನೂ ಹಿಡಿಯುವ, ಎಲ್ಲವನ್ನೂ ಗೆಲ್ಲುವ, ಎಲ್ಲವನ್ನೂ ಆಳುವ ಹಂಬಲ ಆ ವಿಜಯಿಯಾದ ವೀರನಿಗೆ. ಆ ಮಲ್ಲಶರೀರದಲ್ಲಿ ಶಕ್ತಿ ಬುದ್ಧಿಯ ಕೂಡ ಹೋರಾಟವಾಡಿತು. ಅಣ್ಣತಮ್ಮಂದಿರಂತೆ ಅಹಮ ಹಮಿಕೆಯಿಂದ ಹೋರಾಡುವ ಆ ಹಂಬಲಗಳಿಗೆ ಕೊನೆಗೆ ಯಾವ ಹಾದಿ? ಕೊನೆಗೆ 'ಅಹಮೇಕೋ' ಎನ್ನುವ ಭಗವಂತನಿಗೆ ಅನನ್ಯಶರಣನಾಗಿ ಶರಣು ಹೋದ ಆ ವೀರನಲ್ಲಿ ಹೊರಹೊಮ್ಮುತಲಿದ್ದ ಚಿತ್‌ಶಕ್ತಿ ದೇವನ ದಾರಿಯಲ್ಲಿ ಭೋರ್ಗರೆಯುವ ಹೊಳೆಯಾಗಿ ಹರಿಯಿತು ! ಮಿಕ್ಕ ಎಲ್ಲ ದಾರಿ ಸಾಲದೆ ಹೋದವು !

ಇನ್ನೂ ಮೂರನೆಯದೊಂದು ಶಕ್ತಿ. ಶ್ರೀರಾಮಕೃಷ್ಣರು ಒಳ್ಳೇ ದೂರದೃಷ್ಟಿಯಿಂದ ಅದನ್ನು ಕಂಡು ಹಿಡಿದಿದ್ದರು. ಅದು ನರೇಂದ್ರನಿಗೆ ಹೊಳೆದಿದ್ದಿಲ್ಲ. ಪರಸ್ಪರ ವಿರೋಧಿಯಾದ ಭಾವನೆಗಳ ತಿಕ್ಕಾಟದ ರಣರಂಗದಂತಿದ್ದ ಈ ತರುಣನ ವಿಷಯದಲ್ಲಿ ಮಿಕ್ಕವರೆಲ್ಲರೂ ಚಿಂತೆ ಅಥವಾ ಅವಿಶ್ವಾಸ ತಳೆದಾಗ ಗುರುಭಗವಾನ್ ಸಾರಿದ್ದರು:

"ದೀನ-ದುಃಖಿತರ ನಿಟ್ಟುಸಿರು ನರೇಂದ್ರನನ್ನು ಸೋಂಕಿದ ಕ್ಷಣವೇ ಅವನ ಪ್ರಕೃತಿಯ ಅಹಂಕಾರ ಕರಗಿ ಅನಂತ ಕರುಣೆಯಾಗಿ ಹರಿಯು ವುದು. ಕಳೆದುಕೊಂಡ ಶ್ರದ್ಧೆವಿಶ್ವಾಸಗಳನ್ನು ನಿರಾಶ ಜೀವಿಗಳಲ್ಲಿ ಮತ್ತೆ ಹುರಿದುಂಬಿಸುವುದು ಅವನ ಆತ್ಮವಿಶ್ವಾಸ. ಪ್ರಬಲ ಮನೋನಿಗ್ರಹದ ತಳಹದಿಯ ಮೇಲೆ ನಿಂತ ಅವನ ವರ್ತನ ನಿಜವಾದ ಆತ್ಮಸ್ವಾತಂತ್ರ್ಯದ ಸ್ವರೂಪವನ್ನು ತಾಳಿ ಜನರ ಕಣ್ಣಿಗೆಲ್ಲ ಉಜ್ವಲವಾಗಿ ಹೊಳೆಯುವುದು."

ಕಣ್ಣಾರೆ ಕಾಣುವ ದುಃಖ ! ಮಗ್ಗುಲಲ್ಲಿಯೇ ಮೈದೋರುವ ದುಃಖ ! ಅವನ ಜನದ ದುಃಖ ! ಭಾರತದ ದುಃಖ ! ಅದರ ಸೋಂಕು ಅವನ ಸರ್ವಾತ್ಮವನ್ನು ಉರಿದೆಬ್ಬಿಸುವುದು— ಬೆಣಚುಗಲ್ಲಿಗೆ ಉಕ್ಕು ತಗಲಿ ಉರಿದೆದ್ದ ಕಿಡಿಯಂತೆ ! ಆ ಆತ್ಮಜ್ಯೋತಿಯ ವೇದಿಕೆಯ ಮೇಲೆ

ಅವನ ಅಹಂಕಾರ, ಆಕಾಂಕ್ಷೆ, ಪ್ರೀತಿ, ಭಕ್ತಿ, ಶ್ರದ್ಧೆ, ತತ್ವ, ಕರ್ಮ— ಇವೆಲ್ಲ ಏಕಾಕಾರವಾಗಿ ದೇದೀಪ್ಯಮಾನವಾದ ತೇಜೋರಾಶಿಯಾಗಿ ಮಾನವಕುಲದ ಉದ್ಧಾರಕ್ಕಾಗಿ ಕುದಿಯಿತು. "ಆತ್ಮಶ್ರದ್ಧೆಯನ್ನು ಉರಿದೆಬ್ಬಿಸಿ, ರಾಷ್ಟ್ರದ ಸ್ವಾಭಿಮಾನವನ್ನು ಕೆರಳಿಸಿ ನನ್ನ ಸುತ್ತಿಲ್ಲ ತೊಳಲುವ ಬಳಲುವ ದೀನದುರ್ಬಲರಿಗೆ ಅನ್ನದಾನ ವಿದ್ಯಾದಾನವನ್ನೀ ಯುವ ಸಾಮರ್ಥ್ಯವನ್ನು ತಂದು ಕೊಡುವುದೇ ಧರ್ಮ........ ದೇವ ನನ್ನು ಕಾಣಬಯಸುವಿಯಾದರೆ ಮಾನವಸೇವೆಯ ಮಾಡು!"

ಭಾರತಮಾತೆಯ ಹೃದಯಭೇದಕ ದುಃಖದುರ್ಧರ ರೂಪ ಕಣ್ಣಾರೆ ಕಾಣಬೇಕಾದರೆ, ಕೈಯಾರೆ ಮುಟ್ಟಬೇಕಾದರೆ ಅವನಿಗೆ ಹಲವು ವರ್ಷಗಳ ಪ್ರತ್ಯಕ್ಷ ಅನುಭವ ಬೇಕಾಯಿತು. ಆ ಮೇಲೆಯೇ ತನ್ನ ಜೀವನ ಕಾರ್ಯದ ಅರಿವು ಅವನಿಗಾಯಿತು. ಆ ಆದರ್ಶದಿಂದ ಅವನು ಆವೇಶ ಹೊಂದಿದನು.

ಬರಾನಗರದಲ್ಲಿಯ ಮೊದಲಿನ ಕೆಲ ತಿಂಗಳು, ಮೊದಲನೆಯ ವರ್ಷ, ಪರಸ್ಪರ ಬೋಧನೆಯಲ್ಲಿಯೇ ಶಿಷ್ಯರು ಕಳೆದರು. ಲೋಕಕ್ಕೆ ಬೋಧಿಸಲು ಅವರಲ್ಲಿ ಒಬ್ಬನೂ ಸಿದ್ಧನಿರಲಿಲ್ಲ. ಪರಮಾತ್ಮಸಿದ್ಧಿಯೇ ಅವರ ಹಿರಿದಾದ ಹಂಬಲ. ಆತ್ಮಿಕ ಜೀವನದ ಆನಂದಕ್ಕೆ ಮನಸೋತು ಅವರು ಹೊರಗಿನ ಪ್ರಪಂಚವನ್ನು ಕಣ್ಣೆತ್ತಿ ನೋಡಲಿಲ್ಲ. ಈ ಅನಂತದ ಹಂಬಲ ನರೇಂದ್ರನಿಗೂ ಇದ್ದಿತು. ಆದರೆ ಕರ್ಮಯೋಗವೇ ಅವನ ಕನಸು. ವಿರಕ್ತ ಜೀವಿಗಳ ಅನಂತದ ಹಸಿವು ಅವರನ್ನು ನೈಷ್ಕರ್ಮ್ಯದ ಮೈಗಳ್ಳತನದಲ್ಲಿ ನೂಕುವುದೆಂದು ಅವನು ಅರಿತಿದ್ದನು. ಬರೀ ಮನನ ಚಿಂತನದಲ್ಲಿ ಆಲಸರಾಗಿ ಕಾಲಕಳೆಯಲು ಅವರಿಗೆ ಆವನು ಅನುವನ್ನೀಯಲಿಲ್ಲ. ಆ ಏಕಾಂತ ಜೀವನದ ಕಾಲವನ್ನು ಆತ್ಮಿಕ ಶಿಕ್ಷಣದ, ಆತ್ಮಶಕ್ತಿಯ ಸಾಧನೆಯ ಒಂದು ಮಹಾಪಾಠಶಾಲೆಯನ್ನೇ ಮಾಡಿಬಿಟ್ಟನು. ಅವರಲ್ಲಿ ಹಲವರು ಅವನಿಗಿಂತಲೂ ಹಿರಿಯರು. ಆದರೆ ಅಸ್ಸಾದೃಶ ಪ್ರತಿಭೆ, ಜ್ಞಾನ ಮತ್ತು ಪಾಂಡಿತ್ಯಗಳ ಪ್ರಭಾವದಿಂದ

ಮೊದಲಿನಿಂದಲೂ ಅವನು ತನ್ನ ಜೊತೆಗಾರರ ಮುಂದಾಳಾದನು. ಅಗಲುವ ಮುಂದೆ ಗುರುದೇವ ಸಹ ಅಂದಿರಲಿಲ್ಲವೇ ?

" ನರೇನ್, ಈ ಹುಡುಗರು ........ ಜೋಕೆ ........ ! "

ದೃಢನಿಶ್ಚಯದಿಂದ ನರೇನ್ ಆ ಸಂಘದ ಸಂಚಾಲಕನಾದನು. ಭಗವಂತನ ಹೆಸರಿನಿಂದ ಮೈಗಳ್ಳತನದಲ್ಲಿ ಹೊತ್ತುಗಳೆಯುವುದು ಅವನಿಂದ ಅವರಿಗೆ ಅಶಕ್ಯವಾಯಿತು. ಸಂಘದವರನ್ನು ಯಾವಾಗಲೂ ಎಚ್ಚರಿಸಿ ಅವರ ಮನಸ್ಸನ್ನು ದಯೆಮಾಯೆಯಿಲ್ಲದೆ ಸಿಗಿಯುತ್ತಿದ್ದನು. ಮಾನವಕುಲದ ವಿಚಾರಪ್ರಗತಿಯನ್ನು ಉದ್ಘೋಷಿಸುವ ಉತ್ತಮೋತ್ತಮ ಗ್ರಂಥಗಳನ್ನು ಅವರಿಗೆ ಓದಿ ಹೇಳಿದನು. ವಿಶ್ವದ ಉತ್ಕ್ರಾಂತಿಯನ್ನು ತಿಳಿಸಿ ಹೇಳಿದನು. ಉಚ್ಚ ದರ್ಶನಗಳನ್ನು ಮತ್ತು ಧಾರ್ಮಿಕ ವಿಷಯಗಳನ್ನು ನಿಷ್ಪಕ್ಷಪಾತದಿಂದ ನಿರ್ವಿಕಾರನಾಗಿ ವಿಚಾರ ಮಾಡಹಚ್ಚಿದನು. ಸಕಲ ಮತ, ಪಂಥ, ದೇಶ, ಕೋಶ, ಶಾಖೆ, ಜನಾಂಗಗಳ ಮೇರೆ ಮೀರಿದ ಅನಂತ ಸತ್ಯದ ವಿಶಾಲ ವಾತಾವರಣಕ್ಕೆ ಅವರನ್ನು ಎಳೆದೊಯ್ಯಲು ಅನವರತ ಹೆಣಗಿದನು. ಶ್ರೀರಾಮಕೃಷ್ಣರ ಭಕ್ತಿಧರ್ಮದ ಸಂದೇಶವನ್ನೇ ಈ ಸಮನ್ವಯವು ಸಾರಿತು. ಅವರ ಎಲ್ಲ ಸಮ್ಮೇಲನಗಳು ಅದೃಶ್ಯ ಗುರುದೇವರ ಅಧ್ಯಕ್ಷತೆಯಲ್ಲಿ ಸಾಗಿದವು. ಗುರುದೇವರ ವಿಶ್ವ-ವಿಶಾಲ ಹೃದಯದ ಸೇವೆಗೆ ಅವರ ಜ್ಞಾನ-ತಪಸ್ಸು ಮೀಸಲಾಯಿತು.

ಪೌರ್ವಾತ್ಯರು ನಿಷ್ಕರ್ಮಿಗಳೆಂದು ಪಾಶ್ಚಾತ್ಯರು ಅನ್ನಲಿ. ಆದರೆ ಒಂದು ಮೂಲೆಯಲ್ಲಿ ಹುದುಗಿಕೊಂಡು ಕುಳಿತಿರುವುದು ಧರ್ಮನಿಷ್ಠ ಭಾರತೀಯನ ಸ್ವಭಾವದಲ್ಲಿಯೇ ಇಲ್ಲ. ಧ್ಯಾನಾಸಕ್ತರ ಮನಸ್ಸು ಸಹ ಪ್ರಪಂಚಸಂಚಾರಕ್ಕೇನೆ ಎಳಸುತ್ತದೆ. ಅವರ ವಿಶಾಲ ಸಂಚಾರಕ್ಕೆ ಸ್ಥಾನಮಾನಗಳ ಇತಿಮಿತಿಯಿಲ್ಲ. ಬಂಧನಗಳ ಜಾಲವಿಲ್ಲ. ಸ್ನೇಹ ಸಂಬಂಧಗಳ ಶೃಂಖಲೆಗಳಿಲ್ಲ. ಅವರು ಹೋದ ಹೋದಲ್ಲೆಲ್ಲ ಅನಿರ್ಬಂಧ ಸಂಚಾರಿ, ಸ್ವತಂತ್ರವಿಹಾರಿ. ಹಿಂದೂಧರ್ಮದ ಪರಿಭಾಷೆಯಲ್ಲಿ ಪರಿವ್ರಾಜಕ ವೃತ್ತಿಯೆಂದು ಎನಿಸಿದ ಈ ಭಾವನೆ ಬರಾನಗರದಲ್ಲಿಯ ಸನ್ಯಾಸಿ

ಬಂಧುಗಳ ಹೃದಯದಲ್ಲಿ ತೀವ್ರವೇ ಸಂಚರಿಸಿತು. ಸಂಘ ಸಂಸ್ಥಾಪನೆ ಯಾದಂದಿನಿಂದ ಎಲ್ಲರೂ ಇನ್ನೂ ಒತ್ತಟ್ಟಿಗೆ ಸೇರಿರಲಿಲ್ಲ. ೧೮೮೬ರ ಆ ಕ್ರಿಸ್‌ಮಸ್ ರಾತ್ರಿ ಯೋಗಾನಂದ ಮತ್ತು ಲಾತೂ— ಪ್ರಮುಖ ರೀರ್ವರು – ಇರಲಿಲ್ಲ. ಮಿಕ್ಕ ಕೆಲವರು ಶ್ರೀರಾಮಕೃಷ್ಣರ ಸತಿ-ಶಾರದಾಮಣಿದೇವಿಯವರ ಜೊತೆಯಲ್ಲಿ ವೃಂದಾವನಕ್ಕೆ ತೆರಳಿದ್ದರು. ತಾವು ಹೋಗುವುದೆಲ್ಲಿಗೆ ಎನ್ನುವುದನ್ನು ಸಹ ಯಾರಿಗೂ ಹೇಳದೆ ಕೇಳದೆ ತರುಣ ಶಾರದಾನಂದನಂತೆ ಇನ್ನುಳಿದ ಕೆಲವರು ಒಮ್ಮೆಲೆ ಕಾಣದಾದರು. ಆ ಸನ್ಯಾಸಿಸಂಘ ಕರಗಿ ಹೋಗಬಾರದೆಂಬ ಹವ್ಯಾಸ ವುಳ್ಳ ನರೇಂದ್ರನನ್ನು ಸಹ ಈ ಪರಿವ್ರಾಜಕ ಭಾವನೆ ಬಾಧಿಸದೆ ಇರಲಿಲ್ಲ. ವಿಶ್ವದ ವಿಶಾಲತೆಯಲ್ಲಿ ಅನಿರ್ಬಂಧವಾಗಿ ಸೇರಿಹೋಗಲೆಳಸುವ ಆತ್ಮನ ಸಂಚಾರಲಾಲಸೆಗೆ ಮತ್ತು ಸಂಘಜೀವನದ ಬಂಧನಕ್ಕೆ ಹೊಂದಿಕೆಯಾಗುವುದೆಂತು ? ಸ್ವೈರವಿಹಾರಿಯಾದ ಗರುಡನು ಗೂಡಿನ ಗೊಂದಲದಲ್ಲಿ ಆದೆಷ್ಟು ಹೊತ್ತು ಸಿಕ್ಕಿ ಬಿದ್ದಿರುವನು ? ಸಂಘದ ಕೆಲವರು ಮಾತ್ರ ಬರಾನಗರದಲ್ಲಿ ಇರಬೇಕೆಂದು ಗೊತ್ತಾಯಿತು. ಮಿಕ್ಕ ಸಂಘಬಂಧುಗಳೆಲ್ಲ ಕಾನನದ ಕೂಗಿಗೆ ಕಿವಿಗೊಟ್ಟು ಕಾಲ್ದೆಗೆದರು. ಒಬ್ಬನು ಮಾತ್ರ—ಶಶಿ—ಅಲ್ಲಿಂದ ಕದಲಲಿಲ್ಲ. ಅವನು ಮಠದ ನಂಬಿಗೆಯ ಕಾವಲಾಗಿ ನಿಂತನು.

ತಾನೂ ಓಡಿ ಹೋಗಬೇಕೆನ್ನುವ ಹೆವಣಿಕೆಯನ್ನು ನರೇನ್ ಎರಡು ವರ್ಷ ತಡೆದು ಹಿಡಿದನು. ಆಗಾಗ ಅತ್ತಿತ್ತ ಸುಳಿದಾಡಿದರೂ ೧೮೮೮ರ ವರೆಗೆ ನರೇನ್ ಬರಾನಗರದಲ್ಲಿಯೇ ಉಳಿದನು. ಅನಂತರ ಅವನು ಒಮ್ಮೆಲೇ ಹೊರಬಿದ್ದನು. ಮೊದಲು ಒಬ್ಬನೇ ಹೋಗದೆ ಜೊತೆಗೆ ಒಬ್ಬನನ್ನು ತೆಗೆದುಕೊಂಡು ಎರಡೂವರೆ ವರ್ಷ ತಿರುಗಿದನು. ಜಾರಿ ಹೋಗಬೇಕೆನ್ನುವ ಹಂಬಲ ಬಹಳಾಯಿತು. ಆದರೂ ಆಗಾಗ ಯಾರಾದರೂ ಸನ್ಯಾಸಿಬಂಧು ಹೇಳಿಕಳಿಸಿದಾಗ ಅಥವಾ ಆಕಸ್ಮಿಕ ಕರೆ ಬಂದಾಗ ಮರಳಿ ಮಠ ಸೇರುತಲಿದ್ದನು. ಆದರೆ ೧೮೯೧ ರಲ್ಲಿ ಮಾತ್ರ

ಕಾಲ್ದೆಗೆದು ಕಣ್ಣು ತಪ್ಪಿಸಿ ಜಾರಿ ಮರೆಯಾಗಬೇಕೆಂಬ ಹಂಬಲ- ಹುಚ್ಚು- ದಿವ್ಯ ಉನ್ಮಾದ - ಮೀರಿ ಹೋಯಿತು. ಒಬ್ಬಾನೊಬ್ಬನೇ, ಜೊತೆಗೆ ಯಾರೂ ಇಲ್ಲದೆ, ಹೆಸರುದೆಸೆ ತೊರೆದು, ಹೆಗಲಿಗೆ ಜೋಳಿಗೆ ಹಾಕಿ ಕೈಯಲ್ಲಿ ಕಾಷ್ಠ ಹಿಡಿದು ಯಾರೂ ಅರಿಯದ ಬೀದಿಯ ಭಿಕಾರಿಯಂತೆ ಭಾರತದ ವಿಶಾಲತೆಯಲ್ಲಿ ಸೇರಿ ಹೋದನು !

ಆದರೆ ಆ ಸಂಚಾರದಲ್ಲೆಲ್ಲ ಒಂದು ಕಾಣದ ಕರೆ ಅವನಿಗೆ ದಾರಿಯನ್ನು ತೋರುತ್ತಿತ್ತು. ಈ ಕಾಣದ ಕರೆ ಕಾಣದ ದೇವನನ್ನು ತೋರಲು ಭಕ್ತರನ್ನು— ಈಶಸಾಕ್ಷಾತ್ಕಾರದ ಹಂಬಲದಿಂದ ಹುಚ್ಚರಾಗಿ ಪಿರಿಪಿರಿ ತಿರುಗಿ ‘ ವೈದೋರು, ಬಾ ನನ್ನೆದುರು ’ ಎಂದು ದೇವನ ಕೂಡ ಹವಣಿಸಿ ಹೋರಾಟ ಹೂಡುವ ಸಾಧಕರನ್ನು— ಕರೆದೊಯ್ದು ಜೀವನಕರ್ತವ್ಯದ ದಾರಿಯನ್ನು ಅವರಿಗೆ ತೋರುವುದು.

ತನ್ನದೊಂದು ಜೀವನಕರ್ತವ್ಯವಿದೆ ಎಂಬ ವಿಷಯದಲ್ಲಿ ನರೇಂದ್ರ ನಿಗೆ ಸಂದೇಹವಿರಲಿಲ್ಲ. ಅವನ ಶಕ್ತಿ ಅವನ ಪ್ರತಿಭೆ ಅವನಲ್ಲಿ ಕೂಗಿ ಹೇಳಿದವು. ಯುಗದ ಹಂಬಲ ! ಕಾಲದ ಕಷ್ಟ ! ಸುತ್ತೆಲ್ಲ ಕಿವಿಗೆ ಅಪ್ಪಳಿಸುವ ಆರ್ತ ಭಾರತದ ಕರುಣ ಕೂಗು ! ಆಗಿನ ಭಾರತದ ಭವ್ಯ ಪ್ರಭಾವಶಾಲಿಯಾದ ವೈಭವವೆಲ್ಲಿ ?— ಈಗಿನ ಭಾರತದ ದೀನದೌರ್ಬಲ್ಯ- ವೆಲ್ಲಿ ! ಎಂಥ ಭಯಾನಕ ದೃಶ್ಯ ! ಸಾವಿನ ಮಧ್ಯದಲ್ಲಿ ಬಾಳಿನ ಹೋರಾಟ ! ನಿರಾಶೆಯಲ್ಲಿ ನಲ್ಮೆಯ ಹಂಬಲ ! ಇವೆಲ್ಲ ಅವನ ಹೃದಯವನ್ನು ಕೊರಗಿಸಿ ಮರುಗಿಸಿ ಕರಗಿಸಿದವು. ಆದರೆ ಅವನ ಜೀವನಕರ್ತವ್ಯವಾವುದು ? ಅದನ್ನು ಅವನಿಗೆ ಹೇಳಿಕೊಡುವವರಾರು? ನಿಶ್ಚಿತವಾದ ದಾರಿ ತೋರದೆ ಗುರುದೇವ ಮರೆಯಾದರು. ತನ್ನ ದಾರಿಯನ್ನು ಬೆಳಗುವವರು ಯಾರಾದರೂ ಇರುವರೇ ? ಭಗವಂತ ! ಕೇವಲ ಭಗವಂತನೊಬ್ಬನೇ ! ಹಾಗಾದರೆ ಅವನಾದರೂ ಕೂಗಿ ಹೇಳಲಿ ! ಅವನೂ ಮೂಕನೇಕೆ ? ಮರುಮಾತು ಉಸುರನೇಕೆ ?

ಅವನನ್ನು ಅರಸಲು ಹೊರಹೊರಟನು ನರೇಂದ್ರ !

೧೮೮೮ರಲ್ಲಿ ಒಮ್ಮೊಂದೊಮ್ಮೆ ಕಲಕತ್ತೆಗೆ ಶರಣು ಹೊಡೆದು ಕಾಶಿ, ಅಯೋಧ್ಯಾ, ಲಖನೌ, ಆಗ್ರಾ, ವೃಂದಾವನ, ಹಥ್ರಸ, ಮತ್ತು ಹಿಮಾಲಯ ಮುಂತಾದಲ್ಲೆಲ್ಲ ಅಲೆದಾಡಿದನು. ಈ ಅಥವಾ ಇನ್ನು ಮುಂದಿನ ಯಾತ್ರೆಗಳ ವಿಷಯದಲ್ಲಿ ಯಾವ ಸಮಾಚಾರವೂ ತಿಳಿಯದು. ತನ್ನ ಧಾರ್ಮಿಕ ಅನುಭವಗಳನ್ನು ನರೇಂದ್ರ ಮರೆಮಾಜಿದನು. ಅವನ ಸಂದರ್ಶನಕ್ಕೆ ಬಂದ ಅಥವಾ ಜೊತೆಗಾರರಾದ ಸಂಘಬಂಧುಗಳಿಗೆ ಮಾತ್ರ ಅವನು ಆ ಅನುಭವಗಳನ್ನು ಒಮ್ಮೊಮ್ಮೆ ಹೇಳುತ್ತಿದ್ದನು. ಈ ಮೊದಲು ಅವನು ವೃಂದಾವನ ದಾಟಿ ಹಥ್ರಸಕ್ಕೆ ಹೋದನು. ಅದೊಂದು ಸಣ್ಣ ರೈಲುನಿಲ್ದಾಣ. ಕನಸುಮನಸಿನಲ್ಲಿ ಕಾಣದ ಶಿಷ್ಯನೊಬ್ಬ ಅಲ್ಲಿ ದೊರಕಿದನು— ಶರಚ್ಚಂದ್ರ ಗುಪ್ತ ( ಮುಂದೆ "ಸದಾನಂದ" ನಾದನು). ಒಬ್ಬರನ್ನೊಬ್ಬರು ಎಂದೂ ಕಾಣರು. ಅರಿಯರು. ಆದರೆ ಕ್ಷಣಮಾತ್ರದಲ್ಲಿ ನರೇಂದ್ರನ ಮೊನೆನೋಟಕ್ಕೆ ಮರುಳಾಗಿ ಮನೆಮಾರು ಮರೆತು ತನ್ನದೆನ್ನುವುದನ್ನೆಲ್ಲ ತೊರೆದು ಹೊರಬಿದ್ದನು. ಸಾಯುವ ವರೆಗೆ ಗುರುನಿಷ್ಠ ಶಿಷ್ಯನಾದನು. *

---

* ಶರಚ್ಚಂದ್ರನು ಹಥ್ರಸದ ತರುಣ ಸ್ಟೇಶನ್ ಮಾಸ್ತರ. ಹಸಿವೆಯಿಂದ ಸಾಯಲಾದ ನರೇಂದ್ರ ನಿಲ್ದಾಣದಲ್ಲಿ ಕಾಲಿಟ್ಟುದನ್ನು ಕಂಡನು. ಅವನ ನೋಟಕ್ಕೆ ಸೆರೆಯಾದನು. " ಆ ಹೊಳೆಯುವ ಕಣ್ಣುಗಳ ಬೆನ್ನು ಹತ್ತಿಯೇ ಬಿಟ್ಟೆನು " ಎಂದು ಮುಂದೊಮ್ಮೆ ಉಸುರಿದನು ಸದಾನಂದ. ಅಪರಿಚಿತನನ್ನು ಮನೆಯ ಕಡೆಗೆ ಕರೆದೊಯ್ದನು. ಅತಿಥಿ ಮನೆಯಿಂದ ಹೊರಬೀಳುತ್ತಲೆ ತಾನೂ ಹೊರ ಬಿದ್ದನು— ಕೊನೆಯ ವರೆಗೂ ಬಾಳ ಜೊತೆಗಾರನಾಗಿ !

ಇಬ್ಬರೂ ತರುಣರು. ಕವಿಗಳು. ಕಲಾಲೋಲರು. ಸದಾನಂದನು ಸುಶಿಕ್ಷಿತ ಬುದ್ಧಿವಂತನೇನೋ ಸರಿ. ಫಾರ್ಶೀ ಭಾಷೆಯಲ್ಲಿ ನಿಪುಣ. ಸೂಫೀ ವೇದಾಂತ ದಿಂದ ಸ್ಫೂರ್ತಿ ಹೊಂದಿದವನು. ಅವನ ಗುರುವಿನಂತೆ— ನರೇಂದ್ರನಂತೆ-ಅವನಿಗೂ ಪ್ರಕೃತಿಸೌಂದರ್ಯವೆಂದರೆ ಪಂಚಪ್ರಾಣ. ಹಳ್ಳಿಗಾಡಿನ ಸೊಗಸಿಗೆ ಮನಸೋತವನು. ಆದರೆ ಸದಾನಂದನ ತತ್ವಜ್ಞಾನದಲ್ಲಿ ಬುದ್ಧಿಗೆ ಪ್ರಾಧಾನ್ಯವಿರಲಿಲ್ಲ. ತನ್ನ ಗುರುವಿನ ಬಾಳಿನಲ್ಲಿ ಸಮರಸನಾಗಿ ಹೋದನು. ಕಣ್ಣುಮುಚ್ಚಿ ಗುರುಸ್ಮರಣೆ ಮಾಡಿದರೆ

ಗುರುಶಿಷ್ಯರೀರ್ವರೂ ಭಿಕಾರಿಗಳ ವೇಷದಲ್ಲಿ ಅಲೆದರು. ಆಗಾಗ ಜನರಿಂದ ಅನಾದರ ತಿರಸ್ಕಾರ ಅವರಿಗೆ ಕಟ್ಟಿಟ್ಟ ಹಾಗೆಯೇ. ಒಮ್ಮೊಮ್ಮೆ ಹಸಿವೆ ನೀರಡಿಕೆಗಳಿಂದ ಕಂಗಾಲಾಗಿ ಸಾಯಲಾದರು. ಜಾತಿಹೀನ ಜ್ಯೋತಿಗಳಾಗಿ ಹೊಲೆಯನ ಹರಿವಾಣಕ್ಕೆ ಪಾಲುಗಾರರಾದರು. ಸದಾನಂದ ಬೇನೆ ಬಿದ್ದನು. ಕಟ್ಟಡವಿಯಲ್ಲೆಲ್ಲ ನರೇಂದ್ರ ಅವನನ್ನು ಹೆಗಲ ಮೇಲೆ ಹೊತ್ತು ತಿರುಗಿದನು. ನರೇಂದ್ರನಿಗೂ ಬೇನೆ ಗಂಟು ಬಿದ್ದಿತು. ಇಬ್ಬರೂ ಮರಳಿ ಕಲಕತ್ತೆಯನ್ನು ಕಾಣಬೇಕಾಯಿತು.

ಈ ಮೊದಲನೆಯ ಪರ್ಯಟನದಲ್ಲಿಯೇ ನರೇಂದ್ರನ ಕಣ್ಣೆದುರಿನಲ್ಲಿ ಭಾರತವು ಕಟ್ಟಿದಂತಾಯಿತು ! ಭಾರತ ! ಅಮರ ಭಾರತ ! ವೇದಗಳ ಭಾರತ ! ವೀರರ ಭಾರತ ! ದೇವದೇವತೆಗಳ ಭಾರತ ! ಪುರಾಣೇತಿಹಾಸಗಳ ಭಾರತ ! ಆರ್ಯರ, ಮೊಗಲರ, ದ್ರಾವಿಡರ ಭಾರತ !—

---

ಸಾಕು. ಕ್ಷಣಮಾತ್ರದಲ್ಲಿ ಗುರುಸ್ವರೂಪದಲ್ಲಿ ಮತ್ತು ಅವನ ಗಂಭೀರವಿಚಾರ ಸಾಗರದಲ್ಲಿ ಸಮಾಧಿ ಹೊಂದುತ್ತಿದ್ದನು. "ನನ್ನ ಆತ್ಮದ ಶಿಶು" ಎಂದು ವಿವೇಕಾನಂದರು ಅವನನ್ನು ಒಮ್ಮೆ ಬಣ್ಣಿಸಿದರು. ಮಹಾರೋಗಿಗಳನ್ನು ದೇವರೆಂದು ಪೂಜಿಸಿ ಉಪಚರಿಸಿದನು. ಒಮ್ಮೆ ಇಡೀ ರಾತ್ರಿ ಮೈಲೀ ಬೇನೆಯಿಂದ ಬಳಲುವ ಒಬ್ಬನನ್ನು ತನ್ನ ತೋಳತೆಕ್ಕೆಯಲ್ಲಿ ಬಿಗಿಯಾಗಿ ಅಪ್ಪಿಕೊಂಡಿದ್ದನು !— ರೋಗಿಯ ಜ್ವರಬಾಧೆ ತಗ್ಗಲೆಂದು ! ಪ್ಲೇಗಿನ ಹಾವಳಿಯಲ್ಲಿ ಕಸಗುಡಿಸುವವರ ಪಥಕವನ್ನೇರ್ಪಡಿಸಲು ಸಂಘದಿಂದ ಮುಂದೆ ಬಂದವರಲ್ಲಿ ಅವನೇ ಮೊದಲಿನವನು. ಅಸ್ಪೃಶ್ಯರನ್ನು ಬಲು ಅಕ್ಕರೆಯಿಂದ ಕಾಣುತ್ತಿದ್ದನು. ಅವರ ಬಾಳಿನಲ್ಲಿ ಸಂಗಾತಿ. ಅವನನ್ನು ಕಂಡರೆ ತರುಣರಲ್ಲಿ ಪ್ರೀತಿಭಕ್ತಿ ಬಹಳ. ಅವನ ಬಾಳ ಕೊನೆಯ ಅನಾರೋಗ್ಯದ ದಿನಗಳಲ್ಲಿ ಅವನ ಭಕ್ತವೃಂದವು ಭಕ್ತಿಪರವಶತೆಯಿಂದ ಅವನ ಶುಶ್ರೂಷೆ ಮಾಡಿತು. ತಾವು ಸದಾನಂದರ ಕಾವಲಿನ ನಾಯಿಗಳೆಂದು ಅವರು ಹೇಳಿಕೊಳ್ಳುತ್ತಿದ್ದರು. ಅವರ ವಿಷಯದಲ್ಲಿ ಅವನು ಗುರುಭಾವವನ್ನು ಎಂದಿಗೂ ಒಪ್ಪಲಿಲ್ಲ. ಅವರ ಕೇವಲ ಗೆಳೆಯನಂತಿದ್ದನು. ಸದಾ ನಗುಮೋರೆ. 'ಸದಾನಂದ'ನೆಂಬುದು ಅವನಾಗಿ ಆರಿಸಿದ ಹೆಸರು. ಜೊತೆಗಾರರಿಗೆ ತಗಲುವ ಸುಂಕ ಅವನ ಆನಂದ. ಅವನ ನಲ್ಮೆಯ ನೆನಪು ಎಂದಿಗೂ ಅವರ ಮನದಲ್ಲಿ ಮಿನುಗಿತು.

ಎಲ್ಲವೂ ಒಂದೇ ! — ಭಾರತ ! ಈ ಪ್ರಥಮ ಪರಾಮರ್ಶೆಯಲ್ಲಿಯೇ ಭಾರತದ ಮತ್ತು ಏಶಿಯದ ಆಧ್ಯಾತ್ಮಿಕ ಸಮರಸತೆಯನ್ನು ಅವನು ಮನಗಂಡನು. ಈ ಶೋಧವನ್ನು ಬರಾನಗರದ ಬಂಧುಗಳಿಗೆ ತಿಳಿಸಿದನು.

೧೮೮೮ರಲ್ಲಿ ಅವನ ಎರಡನೆಯ ಪರ್ಯಟನ; ಗಾಜೀಪುರಕ್ಕೆ. ಯಾವ ತತ್ವವನ್ನು ಪಾಶ್ಚಾತ್ಯ ಪ್ರಜಾಸತ್ತೆಗಳು ಅರಿವು ಅನಿಸಿಕೆ ಇಲ್ಲದೆ ಕಣ್ಣು ಮುಚ್ಚಿ ಬರೆಯುತ್ತಿರುವವೋ ಆ ಮಾನವ ಕುಲದ ಆದರ್ಶವನ್ನು ಅವನು ತನ್ನ ಪ್ರತಿಭಾಮಯ ದೃಷ್ಟಿಯಿಂದ ಈ ದ್ವಿತೀಯ ಪರ್ಯಟನದಲ್ಲಿ ಕಂಡು ಹಿಡಿದನು. ಮೊದಲು ಒಂದು ವ್ಯಕ್ತಿಯದೆಂದು ಗಣಿಸಲಾದ ಆಧ್ಯಾತ್ಮಿಕ ಅನುಭವನದ ಅಧಿಕಾರ ಈಗ ಮತಪಂಥಗಳ ಸೊತ್ತಾಗಿರದೆ ಎಲ್ಲರಿಗೂ ಸೇರಿದ್ದೆಂದು ಪಾಶ್ಚಿಮಾತ್ಯರೂ ತಿಳಿಯಹತ್ತಿರುವರು. ನಿಸರ್ಗದ ದೈವಿಕತೆ ಮತ್ತು ಏಕತಾನತೆ ಇವನ್ನು ಮಾನವನ ಆತ್ಮ ಅರಿತಿದೆ. ಯುರೋಪ ಅಮೇರಿಕೆಗಳಲ್ಲಿ ಸಮಾಜಕ್ಕೆ ಸುಖಕರವಾದ ವಿಚಾರಗಳನ್ನು ಭಾರತದಲ್ಲಿ ಹರಡುವ ಅವಶ್ಯಕತೆಯಿದೆಯೆಂದು ಅರಿತು ಅವನು ಅದನ್ನೇ ಘಂಟಾಘೋಷವಾಗಿ ಹೇಳಿದನು. ಹೀಗೆ ಸಕಲರ ಯತ್ನದಿಂದ ಸಾಧ್ಯವಾಗತಕ್ಕ ಸರ್ವರ ಆಧ್ಯಾತಿಕ ಪ್ರಗತಿ, ಅಖಂಡ ಮಾನವಕುಲದ ಕಲ್ಯಾಣ ಇವನ್ನು ಬಯಸಿ ಅರಸುವ ವಿಚಾರಸ್ವಾತಂತ್ರ್ಯ ಮತ್ತು ಹೃದಯದ ವಿಶಾಲತೆ ಮುಂಚಿನಿಂದಲೂ ಅವನಲ್ಲಿ ಮೈದೋರಿದವು.

೧೮೮೯ ಮತ್ತು ೧೮೯೦ ರಲ್ಲಿ ಪ್ರಯಾಗ ಮತ್ತು ಗಾಜೀಪುರಕ್ಕೆ ಕೈಕೊಂಡ ಚಿಕ್ಕ ಯಾತ್ರೆಗಳಲ್ಲಿ ಈ ವಿಶ್ವಾತ್ಮದ ಕಲ್ಪನೆ ಇನ್ನೂ ಬೆಳಗಿತು. ಹಿಂದೂಧರ್ಮ ಮತ್ತು ಆಧುನಿಕ ವಿಜ್ಞಾನಶಾಸ್ತ್ರ, ವೇದಾಂತ ವಿಚಾರ ಮತ್ತು ಆಧುನಿಕ ಸಾಮಾಜಿಕ ಪ್ರಗತಿ, ಪವಿತ್ರ ಚೈತನ್ಯ ಮತ್ತು ಭಿನ್ನಧರ್ಮಗಳ ನಾನಾ ದೇವದೇವತೆ— ಇವೆಲ್ಲವುಗಳ ಸಮನ್ವಯದ ಕಡೆಗೆ ಅವನು ಒಲಿಯಹತ್ತಿದ ಸಂಗತಿ ಗಾಜೀಪುರದಲ್ಲಿಯ ಅವನ ಸಂದರ್ಶನಗಳಲ್ಲಿ ಎದ್ದು ಕಾಣುತ್ತದೆ.

ಈ ಎಲ್ಲ ಕಲ್ಪನೆ ಅವನಲ್ಲಿ ಮಿಂಚಿನಂತೆ ಸುಳಿದವು. ಅಣೋ ರಣೀಯಾನ್ ರೂಪದಲ್ಲಿ ಕಾಣಿಸಿಕೊಂಡ ಈ ಕಲ್ಪನೆ ಅವನ ಬುದ್ಧಿಯ ಕುಲುಮೆಯಲ್ಲಿ ಕುದಿಕುದಿದು ಮುಂದೆ ಮಹತೋ ಮಹೀಯಾನ್ ಜ್ಯೋತಿಯಿಂದ ಬೆಳಗಿದವು. ಸಂಘಮಿತ್ರರ ಸಹವಾಸದಲ್ಲಿ ಸಾಧನೆ, ಉಪಾಸನೆ, ನಿತ್ಯನೈಮಿತ್ತಿಕ ಧಾರ್ಮಿಕ ವಿಧಿ ಮುಂತಾದ ಬರಾನಗರದ ನಿರ್ಬಂಧಗಳಲ್ಲಿ ಇನ್ನು ಮೇಲೆ ಹುದುಗಿ ಬಿದ್ದಿರಲಾರದ ಒಂದು ಮಹಾಶಕ್ತಿ ಈ ತರುಣನಲ್ಲಿ ಪ್ರಜ್ವಲಿಸಹತ್ತಿತು. ಈ ಬಂಧನಗಳ ಬಲೆಯನ್ನು ಹರಿದು ಬಿಸುಟುವಂತಾಯಿತು. ಇಂದಿನ ವರೆಗೆ ತುಳಿದ ಬಾಳಿನ ಹಾದಿ, ಧರಿಸಿದ ಹೆಸರು, ಹೊಂದಿದ ದೇಹ ಈ ಎಲ್ಲ ಸಂಕಲೆ ಗಳನ್ನು ಸೀಳಿ ದೆಸೆಗೆಸೆದು, 'ನರೇನ್' ಎನ್ನುವುದನ್ನೆಲ್ಲ ತೊರೆದೊಗೆದು ಬೇರೆ ಹಾದಿ ಹಿಡಿದು ಬೇರೆ ದೇಹ ಧರಿಸಿ ಪುನರ್ಜನ್ಮ ಹೊಂದಿ ತನ್ನಲ್ಲಿ ಮೈದೋರಿ ಮುಸುಗುಟ್ಟುತ್ತಿದ್ದ ಮಹಾಶಕ್ತಿ ಲೀಲೆಯಿಂದ ಉಸುರಾಡಿ ಸುವಂತೆ ಭವ್ಯಾತ್ಮನಾಗಬೇಕೆಂಬ ಆವೇಶ ಹಿಡಿಸಲಾರದಾಯಿತು. ಈ ಪುನರ್ಜನ್ಮವೇ "ವಿವೇಕಾನಂದ !"

ತನ್ನವರನ್ನೆಲ್ಲ ತೊರೆದು ದೇವನನ್ನು ಅರಸಲು ಹೊರಟ ಭಕ್ತನಿಗೆ ಬರುವ ಕೂಗು ಇವನಿಗೆ ಬಂದುದಲ್ಲ. ಬಳಕೆಯಿಲ್ಲದೆ ಬಿದ್ದುಕೊಂಡು ತುಕ್ಕುತಿಂದ ಅಂತಃಶಕ್ತಿಗಳ ಕುದಿಯಿಂದ ಸೊರಗಿ ಸಾಯಲಾದ ಈ ತರುಣ ಸನ್ಯಾಸಿ ಹೊಸ ಚೈತನ್ಯದಿಂದ ಉರಿದೆದ್ದು ಕಾಶಿಯಲ್ಲಿ ಕೂಗಿದನು:—

" ನಾನು ಹೊರಹೊರಟಿರುವೆ. ಆದರೆ ಸಮಾಜದ ಮೇಲೆ ನಾನು ಬಾಂಬಿನಂತೆ ಸಿಡಿದು ಬೀಳುವ ಸಾಮರ್ಥ್ಯ ಬಂದು ಅದು ನಾಯಿಯಂತೆ ನನ್ನ ಬೆನ್ನು ಹತ್ತುವಂತೆ ಆಗುವವರೆಗೆ ನಾನು ಸರ್ವಥಾ ಮರಳಿ ಬರಲಾರೆ !"

ಮುಂದೆ ಮುಂದೆ ಬರಬರುತ್ತ ಈ ಅಹಂಕಾರ ಮಹತ್ವಾಕಾಂಕ್ಷೆ ಗಳ ಪಾಶವೀ ಶಕ್ತಿಯನ್ನು ಹತ್ತಿಕ್ಕಿದನು. ರಾಜಸ ಶಕ್ತಿಗಳ ರಾಕ್ಷಸೀ

ಆವೇಶವನ್ನು ಮುರಿದಿಕ್ಕಿದನು. ತನ್ನ ಎಲ್ಲ ಮಹಾಶಕ್ತಿಗಳನ್ನು ಹೀನ ದೀನ ಮಾನವರ ನಮ್ರ ಸೇವೆಗಾಗಿ ಮೀಸಲಾಗಿರಿಸಿದನು. ಆದರೆ ಆಗ ಮಾತ್ರ ವಿಶ್ವಸತ್ತೆಯ ಲಾಲಸೆ ತಾಳಿ ಮೇರೆ ಮೀರಿದ ಮಹಾ ಶಕ್ತಿಗಳ ಹವಣಿಕೆಯಿಂದ ಅವನು ತಳಮಳಿಸಿದನು. ಅವನಲ್ಲಿ ಹುದುಗಿದ್ದನು ಒಬ್ಬ ನೆಪೋಲಿಯನ್ !

ಶ್ರೀರಾಮಕೃಷ್ಣರ ದಿವ್ಯವಾದ ಆತ್ಮ ಹೆರವಿದ ರೆಕ್ಕೆಗಳ ಕೆಳಗೆ ನೆಮ್ಮದಿಯಾದ ಆಧ್ಯಾತ್ಮಿಕ ಗೂಡಿಗೆ— ಬರಾನಗರದಲ್ಲಿ ತಾನು ಸ್ಥಾಪಿಸಿದ ಮೆಚ್ಚಿನ ಮಠಕ್ಕೆ— ಶರಣು ಹೊಡೆದನು. ೧೮೯೦ರ ಜುಲೈ ತಿಂಗಳಲ್ಲಿ ತನ್ನ ಬಂಧನಗಳನ್ನೆಲ್ಲ ಹರಿದೊಗೆದು ಹೊರಟಿದ್ದನು. ಆವನ ರೆಕ್ಕೆ ಅವನನ್ನು ಸೆಳೆದೊಯ್ದುವು. ತನ್ನ ಸುದೀರ್ಘ ಯಾತ್ರೆಗಾಗಿ ಆಶೀರ್ವಾದ ಪಡೆಯಲೆಂದು ಶಾರದಾಮಣಿ ದೇವಿಯರಲ್ಲಿಗೆ ಹೋದನು. ಸಕಲ ಸಂಕಲೆಗಳನ್ನು ಸವರಿ ಹಾಕಿ ಸರ್ವಸ್ವತಂತ್ರನಾಗಿ ಹಿಮಾಲಯದ ಏಕಾಂತ ದಲ್ಲಿ ಸೇರಿ ಹೋಗಬೇಕೆಂಬ ಹಂಬಲ ಅವನಿಗೆ. ಆದರೆ ಏಕಾಂತ ಬಲು ದುರ್ಲಭ. ಆಪ್ತ ಬಂಧು ಮಿತ್ರ ಪರಿವಾರದವರು ಏಕಾಂತವನ್ನು ಹಾರಿ ಹೊಡೆಯುತ್ತಾರೆ. ದೂರ ಜಾರಿ ಹೋಗಬೇಕೆನ್ನುವವರನ್ನು ನಾನಾ ಬಂಧನಗಳಿಂದ ಸಮಾಜವು ಬಿಗಿದು ಹಾಕುತ್ತದೆ. ಅಂದ ಮೇಲೆ ಇಂಥ ಬಂಧನಗಳಲ್ಲಿ ಸಿಲ್ಕಿದ ಈ ತರುಣನ ಅವಸ್ಥೆಯನ್ನು ಕೇಳಬೇಕೆ ? ನರೇನ್ ಕೂಡ ಇದನ್ನು ಮನಗಂಡನು. ಆದರೆ ತನ್ನ ಮತ್ತು ತನ್ನವರ ಸುಖವನ್ನು ಸೂರೆಗೈದ ನಂತರವೇ !

ಅವನ ಬೆನ್ನು ಬಿಡಬಾರದೆಂದು ಸನ್ಯಾಸಿಬಂಧುಗಳು ನಿಶ್ಚಯಿ ಸಿದರು. ಪಾಶವೀ ನಿಷ್ಠುರತೆಯಿಂದ ಅವರ ಪಲ್ಲು ಹರಿದುಕೊಂಡು ನರೇನ್ ಹೊರಬಿದ್ದನು. ಆದರೆ ಜಗದ ದುಃಖ ಅವನಿಗೆ ಜಗತ್ತನ್ನು ಮರೆಯಗೊಡಲಿಲ್ಲ. ಅಕ್ಕರೆಯ ತಂಗಿಯ ಸಾವು ಏಕಾಂತದಲ್ಲಿಯೂ ಅವನ ಬೆನ್ನು ಬಿಡಲಿಲ್ಲ. ನಿಷ್ಕರುಣ ಸಮಾಜದ ಮೂಕಬಲಿ— ಅವನ ತಂಗಿ ! ಹಿಂದೂ ಹೆಂಗಸು ಯಜ್ಞಪಶು ಎಂದು ಅವನ ನಿದರ್ಶನಕ್ಕೆ ಬಂದಿತು.

ತನ್ನ ಜನಾಂಗಜೀವನದ ದುಃಖಮಯ ಸಮಸ್ಯೆ ಅವನ ಕಣ್ಣೆದುರು ಕಟ್ಟಿದವು. ಇವನ್ನೆಲ್ಲ ಕಣ್ಣಾರೆ ಕಂಡು ಕಲ್ಲಿನಂತೆ ಕುಳಿತಿರುವುದು ಅವನಿಗೆ ಅಪರಾಧವೆನಿಸಿತು !—ಪಾಪವೆನಿಸಿತು !

ಈಶಸಂಕಲ್ಪವಿದ್ದಿತೋ ಏನೋ ಅನ್ನುವಂತೆ ಆಗಾಗ ಅವನನ್ನು ಶಾಂತ ಏಕಾಂತದಿಂದ ಹೊರಗೆ ಎಳೆಯಲಾಯಿತು. 'ಇನ್ನೇನು ? ಇದು ನನ್ನ ಶಾಂತ ಅಚಲ ಏಕಾಂತ !' ಎಂದು ಅವನು ಅನ್ನನ್ನುತ್ತಲೆ ಹಿಮಾಲಯದ ಹಿಮದಿಂದ ಕೆಳಗೆ ಬಾಳ ಹುಡಿಗೆ, ಬಾಳಿನ ಹೋರಾಟದ ಕೋಲಾಹಲದಿಂದ ಮಾರ್ದನಿಗೊಳ್ಳುತ್ತಿದ್ದ ಬಯಲಿಗೆ ಅವನನ್ನು ತಳ್ಳಲಾಯಿತು! ಈ ಮಾನಸಿಕ ಆಂದೋಲನ, ಪ್ರವಾಸದ ಪ್ರಯಾಸ, ಉಪವಾಸ-ವನವಾಸಗಳ ಮೂಲಕ ರುದ್ರಪ್ರಯಾಗದಲ್ಲಿ ಮತ್ತು ಹೃಷೀಕೇಶದಲ್ಲಿ ಹೀಗೆ ಎರಡು ಸಲ ಬೇನೆಬಿದ್ದನು. ಒಮ್ಮೆಯಂತೂ ಸತ್ತು ಸತ್ತು ಉಳಿದನು. ಹೀಗಾಗಿ ತೀರ ನಿತ್ರಾಣನಾದನು. ಏಕಾಕಿಯಾಗಿ ಕೈಕೊಂಡ ಆ ಮಹಾಪರ್ಯಟನ ಮತ್ತೂ ಕಠಿಣವಾಯಿತು.

ಆದರೂ ಪರ್ಯಟನದ ಪರಿಸಮಾಪ್ತಿಯನ್ನು ಮಾಡಿಯೇ ತೀರಿದನು. ಸಾಯುವುದಾದಲ್ಲಿ ದಾರಿಯ ಮೇಲೆಯೇ ಸಾಯಬೇಕು—ದೇವ ತೋರಿದ ದಾರಿಯಲ್ಲಿಯೇ ! ೧೮೯೧ರ ಫೆಬ್ರುವರಿಯಲ್ಲಿ ಗೆಳೆಯರ ಕೈಯಿಂದ ಕೊಸರಿಕೊಂಡು ದಿಲ್ಲಿಯಿಂದ ಒಬ್ಬಾನೊಬ್ಬನೇ ಹೊರ ಹೊರಟನು. ಅದು ಅವನ ಮಹಾಭಿನಿಷ್ಕ್ರಮಣ ! ಮೌಕ್ತಿಕಕ್ಕಾಗಿ ಮುಳುಗಿ ಸಮುದ್ರತಲವನ್ನು ಸಂಶೋಧಿಸುವವನಂತೆ ಅವನು ಭಾರತದ ಮಹಾಸಾಗರದಲ್ಲಿ ಹಾರಿದನು. ಮುಳುಗುತ್ತ ತೇಲುತ್ತ ಸಾಗಿದನು. ಆ ಅನಂತ ಮಹಾ ಮಾನವ ರಾಶಿಯಲ್ಲಿ ಸಾವಿರಾರು ಸನ್ಯಾಸಿಗಳು ! ಅವರಲ್ಲಿ ಅವನೂ ಒಬ್ಬ ! ಹೆಸರು ದೆಸೆಗಳಿಲ್ಲದ ಗೇರು ಬಣ್ಣದ ಸನ್ಯಾಸಿ ! ಆದರೆ ಕಣ್ಣುಗಳಲ್ಲಿ ಉಕ್ಕುತ್ತಿದ್ದಿತು ಪ್ರತಿಭೆಯ ದಿವ್ಯ ತೇಜ ! ಆ ವೇಷದಲ್ಲಿಯೂ ಅವನೊಬ್ಬ ಚಕ್ರವರ್ತಿ! ಸನ್ಯಾಸಿಸಮ್ರಾಟ್ !

# ೪ ಭಾರತಯಾತ್ರಿಕ

ನರೇನ್ ಎರಡು ವರ್ಷ ಭಾರತದ ಮಹಾಯಾತ್ರೆ ಮಾಡಿದನು. ಮುಂದೆ ಮೂರು ವರ್ಷ ಜಗತ್ತನ್ನು ಸುತ್ತಿದನು. ( ಇದು ಮೊದಲು ಸಂಕಲ್ಪಿತವಾದ ಯೋಜನೆಯೇ ?) ಸ್ವಾತಂತ್ರ್ಯ ಮತ್ತು ಸೇವಾಧರ್ಮ— ಇವು ಅವನ ಸ್ವಭಾವದಲ್ಲಿಯ ಎರಡು ಮುಖ್ಯ ವೃತ್ತಿಗಳು. ಅವಕ್ಕೆ ಅನುಗುಣವಾಗಿಯೇ ಅವನ ಮಹಾಯಾತ್ರೆ ಸಾಗಿತು. ನಿಯೋಜಿತ ಕಾರ್ಯಕ್ರಮವಿಲ್ಲ. ಮನೆ ಮಠ ಮತ ಪಂಥಗಳ ಬಂಧನವಿಲ್ಲ. ಸಂಪೂರ್ಣ ಮುಕ್ತನಾಗಿ ತಿರುಗಿದನು. ಒಬ್ಬಾನೊಬ್ಬನೇ. ಭಗವಂತನೇ ಜೊತೆಗಾರ. ಹೋದ ಹೋದಲ್ಲಿ ಊರಲ್ಲಾಗಲಿ ಊರ ಹೊರಗಾಗಲಿ ಬಡವರ ಬಲ್ಲಿದರ ಕಷ್ಟ, ಆಕಾಂಕ್ಷೆ, ವೇದನೆ, ಯಾತನೆ, ಬಾಳಿನ ಹೋರಾಟ— ಇವುಗಳ ಸಂಬಂಧ ಕ್ಷಣಮಾತ್ರ ಸಹ ಅವನಿಗೆ ತಪ್ಪಲಿಲ್ಲ. ಯಾವ ಪುಸ್ತಕಾಲಯದಲ್ಲಿಯೂ ಸಿಕ್ಕದ ಮಹಾಗ್ರಂಥ ಅವನ ಕಣ್ಣೆದುರಿನಲ್ಲಿ ತೆರೆದು ಇದ್ದಿತು— ಜೀವನ. ಶ್ರೀರಾಮಕೃಷ್ಣರ ಉಕ್ಕುವ ನಲ್ಮೆಯ ಕಣ್ಣಿಗೂ ಕೇವಲ ಕನಸಿನಲ್ಲಿಯೇ ಕಂಡಂತಾದ ಬಾಳಿನ ಚಿತ್ರ— ನವಯುಗದ ಮರ್ಮಭೇದಕ ಸ್ವರೂಪ, ಜೀವನಲ್ಲಿ ತೊಳಲುವ ಶಿವ, 'ಕಾಯಿ ಕೈ ನೀಡು' ಎನ್ನುವ ಭಾರತದ, ಜಗತ್ತಿನ ಕೂಗು, ಆ ಕೂಗಿಗೆ ಕಿವಿಗೊಟ್ಟು ಕೈಕೊಂಡು ಕೊನೆಗಾಣಿಸಬೇಕಾದ ಉಜ್ವಲ ಕರ್ತವ್ಯ, ಭಗೀರಥ ಪ್ರಯತ್ನ— ಈ ಎಲ್ಲ ಚಿತ್ರ ಅವನಿಗೆ ಕಣ್ಣಾರೆ ಕಂಡಿತು.

ಭಾರತದ ಮಹಾಯಾತ್ರೆ ! ಪೃಥ್ವೀಪ್ರದಕ್ಷಿಣೆ ! ಅದೆಂಥ ಅತುಲ ಅನುಭವ ! ಇಂದು ಹಳ್ಳಿಯ ಒಕ್ಕಲಿಗನ ದಡ್ಡಿಯಲ್ಲಿ ಮಲಗಿದರೆ ನಾಳೆ ಭಿಕಾರಿಯೊಬ್ಬನ ಚಾಪೆಯ ಮೇಲೆ ! ಎಲ್ಲರಲ್ಲಿಯೂ ಸಮನಾಗಿ ಅಲೆದನು. ಈ ದಿನ ಭಿಕಾರಿಯಾಗಿ ಹೊಲೆಯನೊಬ್ಬನ ಗುಡಿಸಲು ಸೇರಿದರೆ ನಾಳೆ ಅರಸು ಮಕ್ಕಳ ಮಂತ್ರಿಶ್ರೇಷ್ಠರ ಮತ್ತು ಮಹಾರಾಜರ ಮಾನ್ಯ ಅತಿಥಿ ! ಕಂಗಾಲಾಗಿ ಹುಡಿಯಲ್ಲಿ ಕುಸಿಬಿದ್ದ ದೀನದುಃಖಿತರ

ಹತ್ತಿರ ಕುಳಿತು ಅಕ್ಕರೆಯ ಅಣ್ಣನಂತೆ ಮೈದಡವಿ ಮಾತನಾಡುವನು. ಮತ್ತೊಮ್ಮೆ ಸಿರಿವಂತರ ಸೊಗಸಿನ ನಡುವೆ ಕುಳಿತು ಅವರ ಕಲ್ಲೆದೆಯಲ್ಲಿ ಕಂಗೆಟ್ಟವರಿಗಾಗಿ ಕರುಣೆಯನ್ನು ಉಕ್ಕಿಸಿ ಅವರಿಗೆ ದೀನಸೇವೆಯ ಮಂತ್ರೋಪದೇಶ ಮಾಡುವನು. ಪಂಡಿತರ ವೇದಾಂತ ಚರ್ಚೆಯಲ್ಲಿ ಅವನದು ಅನ್ಯಾದೃಶ ಪಾಂಡಿತ್ಯ. ಒಕ್ಕಲಿಗರ ಮತ್ತು ಕೂಲಿಕಾರರ ಸಮಸ್ಯೆ, ಜನಜೀವನ ಈ ವಿಷಯಗಳಲ್ಲಿಯೂ ಅವನದು ಆಳವಾದ ಅಭ್ಯಾಸ, ಮನನ; ಮತ್ತು ಆ ಸಮಸ್ಯೆ ಬಿಡಿಸುವುದರಲ್ಲಿಯೂ ಅದೆಂಥ ಜಾಣತನ! ಎಲ್ಲರಿಂದಲೂ ಕಲಿಯಬೇಕಾದುದನ್ನು ಯಾವಾಗಲೂ ಕಲಿಯುತ್ತ ಕಲಿಸಬೇಕಾದುದನ್ನು ಎಲ್ಲರಿಗೂ ಕಲಿಸುತ್ತ, ಅವನು ಭಾರತದ ಆತ್ಮ, ಭಾರತದ ಐಕ್ಯ, ಭಾರತದ ಭಾಗ್ಯ ಇವುಗಳ ಪ್ರತೀಕನಾದನು. ಇವೆಲ್ಲ ಅವನಲ್ಲಿ ಮೂರ್ತಿವೆತ್ತು ಜಗತ್ತಿಗೆ ಮೈದೋರಿದವು.

ರಾಜಪುತಾನಾ, ಆಳ್ವಾರ್ (ಫೆಬ್ರುವರಿ ಮತ್ತು ಮಾರ್ಚ ೧೮೯೧), ಜಯಪೂರ್, ಅಜಮೀರ್, ಅಹಮದಾಬಾದ್, ಕಾಠೇವಾಡ್ (ಸಪ್ಟಂಬರ್ ಕೊನೆ), ಜುನಾಗಡ, ಗುಜರಾಥ, ಪೋರಬಂದರ್ (ಎಂಟೊಂಬತ್ತು ತಿಂಗಳ ವಾಸ), ದ್ವಾರಕಾ, ಪಾಲಿಟಾನಾ— ಜಿನ ಮಂದಿರಗಳ ಪಟ್ಟಣ—ಬಡೋದಾ, ಖಾಂಡವಾ, ಮುಂಬಯಿ, ಪುಣೆ, ಬೆಳಗಾವಿ (ಅಕ್ಟೋಬರ್ ೧೮೯೨), ಬೆಂಗಳೂರು, ಕೋಚೀನ್, ಮಲಬಾರ್, ತ್ರಾವಣಕೋರ್, ತ್ರಿವೇಂದ್ರಮ್, ಮದುರಾ ........ ಹೀಗೆ ಸಂಚರಿಸಿ ರಾಮೇಶ್ವರವನ್ನು ದಾಟಿ ಕನ್ಯಾಕುಮಾರಿಯನ್ನು ಕಂಡನು (೧೮೯೨ರ ಕೊನೆ).

ಉತ್ತರದಿಂದ ದಕ್ಷಿಣ ತುದಿವರೆಗೂ ಅದು ದೇವದೇವತೆಗಳ ಪುರಾತನ ಪುಣ್ಯ ಭೂಮಿ! ಅಸಂಖ್ಯ ದೇವದೇವತೆಗಳಲ್ಲಿಯೂ ಅವನು ಒಬ್ಬನೇ ದೇವನನ್ನು ಕಂಡನು. ಎಲ್ಲ ಜಾತಿಗಳ ಜನರಲ್ಲಿಯೂ ತಿರುಗಿ ಜಾತಿಗೋತ್ರಗಳನ್ನು ಮೀರಿದ ಧಾರ್ಮಿಕ ಐಕ್ಯವನ್ನು ಕಂಡನು. ಎಲ್ಲರಿಗೂ ಅದನ್ನು ಕಾಣ ಹೇಳಿದನು, ಕಾಣಕಲಿಸಿದನು. ಪರಸ್ಪರರಲ್ಲಿ ಸಹಾನು

ಭೂತಿಯ ಅರಿವನ್ನು ಬೀರಿದನು. ನಿರ್ವಿಕಲ್ಪಜ್ಞಾನದ ಬೆನ್ನುಹತ್ತಿ ದಾರಿ ಗಾಣದ ಬುದ್ಧಿಪ್ರಧಾನ ಪಂಡಿತರಿಗೆ 'ಮೂರ್ತಿಗಳನ್ನು ಗೌರವಿಸಿರಿ, ದೇವನನ್ನು ಪೂಜಿಸಿರಿ' ಎಂದು ಹೇಳಿದನು. 'ಪುರಾತನ ಮಹಾಗ್ರಂಥ ಗಳನ್ನು—ವೇದ, ಪುರಾಣ, ಇತಿಹಾಸಗಳನ್ನು— ಓದಿರಿ, ಕಣ್ಣೆದುರಿನಲ್ಲಿ ಕಾಣುವ ಭಾರತವನ್ನು ತಿಳಿಯಿರಿ,' ಎಂದು ಯುವಕರಿಗೆ ಉಪದೇಶಿ ಸಿದನು. 'ಭಾರತಮಾತೆಯನ್ನು ಭಕ್ತಿಯಿಂದ ಭಾವಿಸಿರಿ, ಮಾತೆಯ ಪುನರುದ್ಧಾರಕ್ಕಾಗಿ ಸ್ವಾತ್ಮಾರ್ಪಣ ಮಾಡಿರಿ" ಎಂದು ಎಲ್ಲರಿಗೂ ಸಾರಿ ಹೇಳಿದನು.

ಜನಕ್ಕೆ ಎಷ್ಟು ಬುದ್ಧಿ ಹೇಳಿದನೋ ಅಷ್ಟೇ ಜನರಿಂದ ತಾನು ಬುದ್ಧಿಗಲಿತನು. ಅವನ ವಿಶಾಲ ಆತ್ಮ ಜ್ಞಾನಕ್ಷೇತ್ರವನ್ನು ವಿಸ್ತರಿಸದ ದಿನವಿರಲಿಲ್ಲ. ತನ್ನ ಅನುಭವವನ್ನು ಹೆಚ್ಚಿಸದ ಕ್ಷಣವಿರಲಿಲ್ಲ. ಭಾರತದ ಗಭೀರ ಜಟಿಲ ಭೂಮಿಯಲ್ಲಿ ಹರಿದು ಹರಿದು ಈಗ ಹರಿಗಟ್ಟಿ ಒಳ ಸೇರಿ ಹುಗಿದು ಹೋದ ಜ್ಞಾನದ ಹೊಳೆಗಳನ್ನೆಲ್ಲ ಹುಡುಕಿ ಅಗೆದು ತೆಗೆದನು. ಅವೆಲ್ಲವುಗಳ ಉಗಮ ಒಂದೇ ಎಂದು ಮನಗಂಡನು. ಒಂದು ತುದಿಗೆ ನಿಂತಲ್ಲಿ ನಿಂತು ಮಲಿತ ಕೊಳಚಿನೀರಿನ ಮಡುವಿನಲ್ಲಿ ಮುಳುಗಿದ ಅಂಧ ಭಕ್ತಿಯ ಸನಾತನಿ. ಇನ್ನೊಂದು ತುದಿಗೆ ಸದುದ್ದೇಶದಿಂದೇ ಆದರೂ ಅಗಾಧಶಕ್ತಿಯ ಗೂಢ ಹೊಳೆಯನ್ನು ಬತ್ತಿಸಹತ್ತಿ ಬುದ್ಧಿವಾದ ದಿಂದ ದಾರಿಗಾಣದ ಬ್ರಹ್ಮಸಮಾಜದ ಸುಧಾರಕ. ದಟ್ಟಾಗಿ ಕಾಲ್ತೊಡ ಕಾಗಿ ಬೆಳೆದ ಕಾಡನ್ನೆಲ್ಲ ಕಡಿಸಿ, ಕಸವನ್ನು ಗುಡಿಸಿ, ಮಲಿತು ನಿಂತ ಕೊಳಚೆಯನ್ನೆಲ್ಲ 'ಸಮುದ್ರಾಸ್ತ್ರೃಪ್ಯಂತು' ಎಂದು ಹೊರಗೆ ಹರಿಯಿಸಿ, ಧರ್ಮಾತ್ಮಮಯ ಭರತಖಂಡದ ಪುಣ್ಯಭೂಮಿಯ ಮೇಲೆಲ್ಲ ಸರ್ವ ಧರ್ಮಗಳ ಸಂರಕ್ಷಣ ಮತ್ತು ಸಮರಸ ಸಂಗಮವನ್ನು ಮಾಡಬಯಸಿದನು.

ಇದಕ್ಕೂ ಹಿರಿದಾಗಿದ್ದಿತು ಅವನ ಆಕಾಂಕ್ಷೆ: ಹೋದಹೋದಲ್ಲೆಲ್ಲ ಭಗವದ್ಗೀತೆಯ ಜೊತೆಯಲ್ಲಿ 'ಇಮಿಟೇಶನ್ ಆಫ್ ಕ್ರಾಯಿಸ್ಟ್' ಒಯ್ದು ಯೇಸುವಿನ ವಿಚಾರಸರಣಿಯನ್ನು ಹರಡುತ್ತ, ಯುವಕರಿಗೆಲ್ಲ ಪಶ್ಚಿಮದ

ಜ್ಞಾನವನ್ನು ತಿಳಿದುಕೊಳ್ಳಲು ಹೇಳಿದನು.

ಅವನ ಮನಸ್ಸು ವಿಶಾಲವಾದುದು. ಕೇವಲ ವಿಚಾರಕ್ಷೇತ್ರದಲ್ಲಿ ಮಾತ್ರವಲ್ಲ, ಜನರು ಮತ್ತು ಅವರ ಕೂಡ ತನ್ನ ಸಂಬಂಧ ಈ ವಿಷಯದ ಅವನ ನೈತಿಕ ದೃಷ್ಟಿಯಲ್ಲಿ ಕೂಡ ಒಂದು ಕ್ರಾಂತಿಯೇ ಆಯಿತು.

ಅಹಂಕಾರ, ಬುದ್ಧಿಯ ಅಸಹನಶೀಲತೆ, ಪಾವಿತ್ರ್ಯದ ತನ್ನ ಆದರ್ಶದ ಮಟ್ಟಕ್ಕೆ ಬರದವರ ವಿಷಯದಲ್ಲಿ ಉದ್ಧತ ತಿರಸ್ಕಾರ— ಇವೆಲ್ಲ ಎಲ್ಲಿಯಾದರೂ ಕೂಡಿ ಬಂದುದೇ ಆದರೆ ಅದು ನರೇಂದ್ರನಲ್ಲಿ:

"ಇಪ್ಪತ್ತು ವರ್ಷದವನಿದ್ದಾಗ ( ಅವನ ಬಾಯಿಂದಲೇ ಬಂದ ಮಾತಿದು ) ನಾನೊಬ್ಬ ಸಹನೆಯಿಲ್ಲದ ಸಹಾನುಭೂತಿಯಿಲ್ಲದ ಅಹಂಮನ್ಯ ಚಂಡಿಯಾಗಿದ್ದೆ. ಕಲಕತ್ತೆಯ ಬೀದಿಯ ಮೇಲೆ ನಾಟಕಗೃಹದ ಮಗ್ಗುಲಿನ ಕಾಲುದಾರಿಯ ಮೇಲೆ ನಾನು ಕಾಲಿಕ್ಕುತ್ತಿರಲಿಲ್ಲ."

ತನ್ನ ಮಹಾಯಾತ್ರೆಯ ಮೊದಲಿನ ಕೆಲವು ತಿಂಗಳು ಜಯಪುರದ ಹತ್ತಿರ ಖೇತ್ರಿಯ ಮಹಾರಾಜರ ಅತಿಥಿಯಾಗಿದ್ದನು (ಎಪ್ರಿಲ್ ೧೮೯೧). ಆಗ ಓರ್ವ ನರ್ತಕಿ ತಿಳಿಯದೆಯೇ ಅವನಿಗೆ ಲೀನತೆಯ ಪಾಠ ಕಲಿಸಿದಳು. ಅವಳು ಬರುತ್ತಲೆ ಕಸಕುಮೋರೆ ಮಾಡಿ ಈ ಗೇರುಬಟ್ಟೆಯ ಬೈರಾಗಿ ಹೊರಗೆ ಹೋಗಲು ಎದ್ದು ನಿಂತನು. ದಯವಿಟ್ಟು ಕುಳಿತು ಕೊಳ್ಳಬೇಕಾಗಿ ಅರಸುಮಗ ಬೇಡಿಕೊಂಡನು. ಆ ನರ್ತಕಿ ವೈಷ್ಣವ ಭಕ್ತ ಸೂರದಾಸನ ಭಜನ ಗೀತವನ್ನು ಹಾಡಿದಳು:

" ಪ್ರಭೊ, ನನ್ನ ದುರ್ಗುಣವನೆಣಿಸದಿರು.
ನಾಥ, ಸಮದರ್ಶಿಯೆಂಬುದು ನಿನ್ನ ಬಿರುದು.

ನಮ್ಮಿಬ್ಬರಲಿ ಅದೇ ಬ್ರಹ್ಮ ಸಾಕ್ಷಾತ್ಕಾರವಾಗುವಂತೆಸಗು.
ಲೋಹದ ತುಂಡೊಂದು ಮಂದಿರದಿ ಮೂರ್ತಿಯಾಯಿತು.
ಇನ್ನೊಂದು ತುಂಡು ಕಟುಕನ ಕೈಯಲ್ಲಿಯ ಚೂರಿಯಾಯಿತು.
ಸ್ಪರ್ಶಮಣಿ ಸೋಂಕುತಲೆ ಅವೆರಡೂ ಹೊನ್ನಾದವು.

ಪ್ರಭೊ, ನನ್ನ ದುರ್ಗುಣವನೆಣಿಸದಿರು.
ನಾಥ, ಸಮದರ್ಶಿಯೆಂಬುದು ನಿನ್ನ ಬಿರುದು.

ಪಾವನ ಜಮುನೆಯಲಿ ನಲಿಯಿತು ಒಂದು ಹನಿ.
ಬೀದಿಯಾಚೆಯ ಕೊಳಚೆಯಲಿ ಮಲಿಯಿತು ಮತ್ತೊಂದು ಹನಿ.
ಗಂಗೆಯಲಿ ಸೇರುತಲೆ ಆವೆರಡೂ ಪಾವನವಾದವು.
ಪ್ರಭೊ, ನನ್ನ ದುರ್ಗುಣವನೆಣಿಸದಿರು.
ನಾಥ, ಸಮದರ್ಶಿಯೆಂಬುದು ನಿನ್ನ ಬಿರುದು."

ಭಾವಪೂರ್ಣ ಭಾವನಾವೇಗದಿಂದ ವಿಹ್ವಲನಾದನು ನರೇಂದ್ರ. ಆ ಭಕ್ತಿಗೀತದಲ್ಲಿ ಉಕ್ಕಿದ ಶ್ರದ್ಧೆಯ ಆವೇಶ ಅವನ ಇಡೀ ಬಾಳನ್ನೆಲ್ಲ ಮಾರ್ಪಡಿಸಿತು. ಎಷ್ಟೋ ವರ್ಷಗಳ ಮೇಲೂ ಈ ಸಂಗತಿಯನ್ನು ಬಣ್ಣಿಸುವಾಗ ಅವನು ಭಾವನೆಯಿಂದ ಪರವಶನಾಗಿ ಹೋಗುವನು.

ಅವನಲ್ಲಿ ಆಳವಾಗಿ ಮನೆಮಾಡಿಕೊಂಡ ಪೂರ್ವಗ್ರಹಗಳು ಒಂದೊಂದಾಗಿ ಮಾಯವಾಗಹತ್ತಿದವು. ಹಿಮಾಲಯದ ಗುಡ್ಡಗಾಡಿನಲ್ಲಿ ನೆಲಸಿದ ತಿಬೇಟದ ಜನರಲ್ಲಿ ಅವನು ಒಮ್ಮೆ ತಂಗಿದ್ದನು. ಅಲ್ಲಿ ಬಹುಪತಿತ್ವದ ಸಂಪ್ರದಾಯ. ಅವನು ಅತಿಥಿಯಾಗಿದ್ದ ಕುಟುಂಬದಲ್ಲಿ ಆರು ಜನ ಅಣ್ಣತಮ್ಮಂದಿರಿಗೆ ಒಬ್ಬಳೇ ಹೆಂಡತಿ. ಆ ವಿಷಯದ ಅನೀತಿಯನ್ನು ಒಳ್ಳೇ ಆವೇಶದಿಂದ ಪ್ರತಿಪಾದಿಸಿದನು ನರೇನ್. ಅವನ ಪ್ರತಿಪಾದನೆ ಹೇಯವೆಂದು ಅವರು ಖಂಡಿಸಿದರು. "ಅದೆಂಥ ಸ್ವಾರ್ಥ ಪರತೆ ! ಒಬ್ಬ ಹೆಂಗುಸನ್ನು ಕೇವಲ ತನಗೊಬ್ಬನಿಗಾಗಿಯೇ ಇಟ್ಟು ಗೊಂಡು ಬಿಡುವುದೇ ?" ನರೇಂದ್ರ ವಿಚಾರ ಮಾಡಿದನು: ನೀತಿ— ವಿಶೇಷತಃ ಪರಂಪರಾಗತ ರೂಢಿಗಳಲ್ಲಿ ಅಡಕವಾಗಿರುವ ನೀತಿ— ಸಾಪೇಕ್ಷವಿರುವುದೆಂದು ಮನಗಂಡನು. ಯಾವುದೊಂದು ಜನಾಂಗದ ಅಥವಾ ಕಾಲದ ನೀತಿ-ಅನೀತಿಯನ್ನು ಆ ಜನಾಂಗದ ಅಥವಾ ಕಾಲದ ನೀತಿ-ಅನೀತಿಯ ರೂಢ ಕಲ್ಪನೆಗಳ ತಕ್ಕಡಿಯಲ್ಲಿಯೇ ತೂಗಿ ಬೆಲೆ ಕಟ್ಟುವುದು ಅವನಿಗೆ ಸಮಂಜಸವಾಗಿ ತೋರಿತು.

ನರೇಂದ್ರನಿಗೆ ತೀರ ಕೀಳರೆಂದೆಣಿಸಿದ ಜಾತಿಗಳವರ ಕೂಡ ಕಾಲ ಕಳೆಯುವ ಸಂದರ್ಭ ಒದಗಿತು ಒಮ್ಮೆ. ಅಂಥ ದಾರಿಗಳ್ಳರಲ್ಲಿ ಸಹ ಮೇಲ್ತೋರಿಕೆಯ ಪಾಪವೃತ್ತಿಯ ಆಳದಲ್ಲಿ ಪಾಪಪರಾಙ್ಮುಖವಾಗುವ ಪ್ರಾಯಶ್ಚಿತ್ತಭಾವನೆ, ಒಳ್ಳೇ ಹಾದಿ ಹಿಡಿಯಬೇಕೆನ್ನುವ ಸಾಧುವೃತ್ತಿಯ ಲವಲವಿಕೆ ಕಂಡುಬಂದಿತು. ಕಾಲ ಕೆಳಗೆ ತುಳಿಯಲಾದವರ ಮಾನ ಭಂಗ, ಕೊರಗು ಮರುಗುಗಳಲ್ಲಿ ಹೋದಹೋದಲ್ಲೆಲ್ಲ ಅವನು ಪಾಲು ಗಾರನಾದನು. ಮಧ್ಯಭಾರತದ ಕುಲಗೇಡಿ ಕಸಗುಡಿಸುವವರ ಒಂದು ಕುಟುಂಬದ ಕೂಡ ಒಮ್ಮೆ ಕಾಲ ಕಳೆದನು. ಸಮಾಜದ ಕಾಲ ಕೆಳಗೆ ಹುಡಿಪಾಲಾಗಿ ಹುದುಗಿದ ಇಂಥ ಕೀಳರಲ್ಲಿ ಸಹ ಅಧ್ಯಾತ್ಮಭಾವನೆಯ ಸಿರಿಯನ್ನು ಕಂಡನು. ಅದರೆ ಆವರ ಕೊರಗು ಅವನನ್ನು ಕೊರಗಿಸಿತು. ಅವರ ಮರುಗು ಅವನನ್ನು ಮರುಗಿಸಿತು. ಕಲಕತ್ತೆಯಲ್ಲಿ ಕಂಗಾಲ ನೊಬ್ಬ ಹಸಿವೆಯಿಂದ ಸತ್ತು ಹೋದನೆಂಬ ಸಮಾಚಾರ ವೃತ್ತಪತ್ರ ದಲ್ಲಿ ಬಂದಾಗ ನರೇಂದ್ರ ಎದೆ ಎದೆ ಬಡೆದುಕೊಂಡನು. ದುಃಖ ಒಟ್ಟರಿಸಿತು! ಉಬ್ಬಿ ಬಿಗಿದ ಕೊರಲಿನಿಂದ ಅಂತಃಕರಣದ ತಳಮಳವು ದುಃಖೋದ್ಗಾರಗಳ ರೂಪದಲ್ಲಿ ಹೊರಹೊಮ್ಮಿತು! "ಅಯ್ಯೋ! ಭಾರತಾ! ಅಯ್ಯೊ ನನ್ನ ಭಾರತಾ! ಭಗವಂತನ ಭಕ್ತರೆಂದು, ಸಾಧುಗಳೆಂದು ಹೇಳಿ ಕೊಳ್ಳುವ ನಾವು, ಸನ್ಯಾಸಿಗಳಾದ ನಾವು, ಜನಕ್ಕಾಗಿ ಏನು ಮಾಡಿ ದೆವು?'

ಶ್ರೀ ರಾಮಕೃಷ್ಣರ ಮಾತನ್ನು ನೆನೆದನು "ಧರ್ಮ ಹಸಿದ ಹೊಟ್ಟೆ ಗಾಗಿ ಅಲ್ಲ!" ಅಂಹಕಾರದ ಅಂಧಃಕಾರದಲ್ಲಿ, ಅಹಂಮನ್ಯ ಧರ್ಮಪರಂ ಪರೆಯ ವಾತಾವರಣದಲ್ಲಿ, ಬುದ್ಧಿಯ ಆಡಂಬರ ಬೀರುವ, ಕೆಲಸಕ್ಕೆ ಬಾರದ ವಾದವಿವಾದ-ಪಾಂಡಿತ್ಯ ಕಂಡು ಕಿಡಿಕಿಡಿಯಾಗಿ ಕೂಗಿದನು ನರೇಂದ್ರ:

"ಜನತೆಯ ಸೇವೆಗಾಗಿ ತನ್ನ ಜೀವವನ್ನು ಬಲಿಗೊಡುವ ಒಬ್ಬ ನಾದರೂ ನಿಮ್ಮಲ್ಲಿಲ್ಲವೇ? ವೇದಾಭ್ಯಾಸ ಮತ್ತು ಯೋಗಸಾಧನೆ

ಮುಂದಿನ ಜನ್ಮಕ್ಕೆ ಮೀಸಲಾಗಿರಲಿ! ಸದ್ಯಕ್ಕೆ ದೀನಸೇವೆಗಾಗಿ ಈ ದೇಹ ಮೀಸಲಾಗಲಿ! ಅಂದರೇನೇ ನೀವು ನನ್ನ ಹತ್ತಿರ ಬಂದುದು ನಿರರ್ಥಕವಾಗಲಿಲ್ಲೆಂದು ಭಾವಿಸುವೆ!"

ದೀನಸೇವೆ, ದೀನೋದ್ಧಾರ ಧರ್ಮದ ಕರ್ತವ್ಯವೆಂದು ಸಿರಿವಂತರಿಗೆ ಅಧಿಕಾರಿಗಳಿಗೆ ಅರಸರಿಗೆ ಧರ್ಮಮಾರ್ತಂಡರಿಗೆ ಸಾರಿಹೇಳಿದನು.

ಮುಂದೊಮ್ಮೆ ಅವನ ದುಃಖೋದ್ಗಾರಗಳಲ್ಲಿ ವ್ಯೆದೋರಿದ ಮಹೋಜ್ವಲ ಮಂತ್ರವಿದು:

"ದುಷ್ಟರಲ್ಲಿ ಹುದುಗಿದ ದೇವನೇ ದೇವ! ದೀನರಲ್ಲಿ ಲೀನನಾದ ದೇವನೆ ದೇವ! ಕಂಗಾಲರಲ್ಲಿ ಕೊರಗುವ ದೇವನೇ ದೇವ! ಇಂಥ ದೇವನಲ್ಲಿ ನನ್ನ ಶ್ರದ್ಧೆಯಿದೆ! ಇಂಥ ದೇವನ ಉಪಾಸನೆಗಾಗಿ ಒಂದೇಕೆ, ಹಲವೇಕೆ, ಸಾವಿರಾರು ಜನ್ಮ ಬಂದರೂ ಬರಲಿ! ಜನ್ಮ ಜನ್ಮಾಂತರಗಳಲ್ಲಿ ಕಷ್ಟಬಂದರೂ ಬರಲಿ! ನಾನು ಸದೈವ ಸಿದ್ಧನಿದ್ದೇನೆ!"

ಈ ಸಮಯದಲ್ಲಿ (೧೮೯೨) ಕಣ್ಣೆದುರು ಕಾಣುವ ಕಷ್ಟ, ಭಾರತದ ದುರ್ಭಾಗ್ಯ ಇದರ ಹೊರತು ಬೇರೆ ವಿಚಾರವೇ ಸುಳಿಯಲಿಲ್ಲ ನರೇಂದ್ರನ ಮನಸ್ಸಿನಲ್ಲಿ. ಉತ್ತರ ತುದಿಯಿಂದ ದಕ್ಷಿಣ ತುದಿವರೆಗೆ ಭಾರತದ ತುಂಬೆಲ್ಲ ಅಲೆದಾಗ ಈ ಕಷ್ಟ ಒಂದೇಸವನೆ ಅವನ ಕಣ್ಮುಂದೆ ಕಟ್ಟಿತು. ತನ್ನ ಬೇಟೆಯನ್ನು ಬೆನ್ನಟ್ಟುವ ಹುಲಿಯಂತೆ ಈ ಬಾಧೆ ಅವನನ್ನು ಬೆನ್ನಟ್ಟಿತು. ನಿದ್ದೆ ಸಹ ಹತ್ತದೆ ಹೋಯಿತು. ಕನ್ಯಾಕುಮಾರಿಯನ್ನು ಕಂಡಾಗ ಈ ಕಷ್ಟ ಅವನ ಕೈಯನ್ನು ಅದುಮಿ ತೋಳು ಹಿಡಿದು ಜಿಂಜಾಡಿಸಿ "ಮುಂದೇನು?.... ಮುಂದೇನು?...." ಎಂದು ಕೂಗಿಕೊಂಡಿತು! ಆಕ್ಷಣವೇ ಅವನು ಪ್ರತಿಜ್ಞೆಗೈದನು:

"ಈ ದೇಹ ನನ್ನದಲ್ಲ! ಈ ಆತ್ಮ ನನ್ನದಲ್ಲ! ಈ ದೇಹ ಈ ಆತ್ಮ ದೀನಜನಸೇವೆಗಾಗಿ ಮುಡಿಪು! ದುಃಖಿತರ ದುಃಖನಿವಾರಣೆಗಾಗಿ ಮೀಸಲು!"

ಆದರೆ ದುಃಖನಿವಾರಣೆ ಮಾಡುವುದೆಂತು? ಹತ್ತರ ಹಣವಿಲ್ಲ.

ಹೊತ್ತು ಹೋಗಹತ್ತಿದೆ. ಒಬ್ಬಿಬ್ಬರು ಅರಸರ ಅಥವಾ ಕೆಲ ಹಿತಚಿಂತಕರು ಕೊಟ್ಟ ದಾನ ದರಿದ್ರನಾರಾಯಣನ ಸೇವೆಗೆ ದೀಪಧೂಪಕ್ಕೆ ಸಹ ಸಾಲದು. ಮೋಹ-ನಿದ್ರೆಯಿಂದ ಎಚ್ಚತ್ತು ಮಾನವಕುಲದ ಉದ್ಧಾರಕ್ಕಾಗಿ ಭಾರತ ಬದ್ಧಕಂಕಣವಾಗುವಷ್ಟರಲ್ಲಿ ಭಾರತದ ಸರ್ವನಾಶವಾಗುವುದು ಖಂಡಿತ. ಮಹಾಸಾಗರದಮೇಲೆ, ಸಮುದ್ರದಾಚೆಯ ದೇಶಕೋಶಗಳ ಮೇಲೆ ಕಣ್ಣು ಬೀರಿದನು. ಇಡೀ ಲೋಕಕ್ಕೆಲ್ಲ ಕೂಗಿಕೊಳ್ಳಬೇಕು. ಭಾರತ ಇಡೀ ಪ್ರಪಂಚಕ್ಕೆಲ್ಲ ಬೇಕು. ಭಾರತದ ಬಾಳು, ಭಾರತದ ಸಾವು ಇಡೀ ಪ್ರಪಂಚದ ಸಮಸ್ಯೆ. ಇಜಿಪ್ತ ಮತ್ತು ಖಾಲ್ಡಿಯಾ ಕಣ್ಮರೆಯಾದವು. ಅವನ್ನು ಅಗೆದು ತೆಗೆದರೆ ಕಾಣುವುದೇನು? ಹೆಣ! ಹೆಂಟೆ! ಸಾವಿನ ಸೆರೆಯಲ್ಲಿ ಅನಂತಕಾಲ ಸಿಲ್ಕಿ ಹೋಗಿವೆ. ಹಾಗೆಯೇ ಭಾರತೀಯ ಆಧ್ಯಾತ್ಮದ ಅನಂತ ಭಾಂಡಾರ ಹೇಳ ಹೆಸರಿಲ್ಲದೆ ಜಗತ್ತಿನ ರಂಗದಿಂದ ಮಾಯವಾದರೆ!.... ಅಯ್ಯೋ!.... ಮಾಯವಾಗಗೊಡಬೇಕೇ?"

ಯುರೋಪ ಮತ್ತು ಅಮೇರಿಕೆಗೆ ಕೂಗಿಕೊಳ್ಳಬೇಕೆಂಬ ಕಲ್ಪನೆ ನರೇಂದ್ರನ ಮನಸ್ಸಿನಲ್ಲಿ ಮೈದೋರಹತ್ತಿತು. ೧೮೯೧ ರ ಕೊನೆಗೆ ಜುನಾಗಡದಿಂದ ಪೋರಬಂದರಕ್ಕೆ ನಡೆದಾಗ ಈ ವಿಚಾರ ಮೊದಲು ಸುಳಿಯಹತ್ತಿದಂತೆ ಕಾಣುತ್ತದೆ. "ಸ್ವದೇಶಕ್ಕಿಂತಲೂ ವಿದೇಶದಲ್ಲಿ ನಿನ್ನ ವಿಚಾರ, ನಿನ್ನ ಕಲ್ಪನೆ ತಿಳಿಯುವ ಜನ ಹೆಚ್ಚು. ನೀನು ಪಶ್ಚಿಮದ ದಾರಿ ಹಿಡಿ" ಎಂದು ಪೋರಬಂದರದಲ್ಲಿ ಫ್ರೆಂಚ್ ಕಲಿಯುತ್ತಿರುವಾಗ ಒಬ್ಬ ಪಂಡಿತನು ಹೇಳಿದನು. "ಹೋಗು! ಮಿಂಚಿನಂತೆ ಸುಳಿದು ದಿಗ್ವಿಜಯಗೈದು ಮರಳಿ ಬಾ!"

ಮರುವರ್ಷ ಚಿಕ್ಯಾಗೋದಲ್ಲಿ ಸರ್ವಧರ್ಮಸಮ್ಮೇಲನ ಸೇರುವುದೆಂದು ೧೮೯೨ ರ ಚಳಿಗಾಲದ ಆರಂಭದಲ್ಲಿ ಖಾಂಡ್ವಾದಲ್ಲಿ ಕೇಳಿದನು. ಆ ಕ್ಷಣವೇ ಆ ಸಮ್ಮೇಲನದಲ್ಲಿ ಭಾಗ ವಹಿಸಬೇಕೆಂಬ ವಿಚಾರ ಬಂದಿತು. ಆದರೆ ಭಾರತದ ಮಹಾಯಾತ್ರೆಯ ಪ್ರತಿಜ್ಞೆ ಕೊನೆಗಾಣುವವರೆಗೆ ಈ ವಿಷಯದಲ್ಲಿ ಮುಂದೇನೂ ಮಾಡಬಾರದೆಂದು ಮತ್ತು

ಈ ಕೆಲಸಕ್ಕಾಗಿ ಹಣ ಕೇಳಬಾರದೆಂಬುದಾಗಿ ಯೋಚಿಸಿದನು. ಭಾರತದ ಭೌತಿಕ ಸುಧಾರಣೆಗಾಗಿ ಪಶ್ಚಿಮಕ್ಕೆ ಹೋಗಿ ಸಹಾಯ ಕೇಳಬೇಕೆಂಬ ಮತ್ತು ಅದಕ್ಕೆ ಪ್ರತಿಯಾಗಿ ಪಶ್ಚಿಮಕ್ಕೆ ವೇದಾಂತತತ್ವವನ್ನು ಕೊಡಬೇಕೆಂಬ ತನ್ನ ಉದ್ದೇಶವನ್ನು ಅಕ್ಟೋಬರ್ ಕೊನೆಯಲ್ಲಿ ಬೆಂಗಳೂರಲ್ಲಿ ಮಹಾರಾಜರಿಗೆ ತಿಳಿಸಿದನು. ೧೮೯೨ ರ ಕೊನೆಗೆ ಅವನ ಸಂಕಲ್ಪ ನಿಶ್ಚಿತವಾಯಿತು.

ಆ ಹೊತ್ತಿಗೆ ಅವನು ಕನ್ಯಾಕುಮಾರಿಯನ್ನು ಕಂಡಿದ್ದನು. ವಿಶಾಲ ಭಾರತವನ್ನು ಬರಿಗಾಲಿನಿಂದ ಸುತ್ತಿ ಅಲ್ಲಿಗೆ ಬಂದಿದ್ದನು. ಭಾರತದ ವಿರಾಟ್‌ದೇಹದ ಕೂಡ ಎರಡು ವರ್ಷ ಅವನ ದೇಹ ತಾಕಲಾಡಿತು. ಹಸಿವೆ ನೀರಡಿಕೆಗಳಿಂದ ಬಳಲಿದನು. ನಿಸರ್ಗದ ಆಘಾತಕ್ಕೆ, ಮಾನವನ ಅಪಮಾನಕ್ಕೆ ಗುರಿಯಾದನು. ಕನ್ಯಾಕುಮಾರಿಗೆ ಬಂದಾಗ ದಣಿದು ಸೋತು ಹೋಗಿದ್ದನು. ಅಂಬಿಗನಿಗೆ ಕೊಡಲು ಕೈಯಲ್ಲಿ ಕಾಸು ಕೂಡ ಇಲ್ಲ! ಸಮುದ್ರದಲ್ಲಿ ನೆಗೆದು ಧುಮುಕಿ ಮೊಸಳೆ ಮುಸುಗುಟ್ಟುತ್ತಿರುವ ಸಾಮುದ್ರಧುನಿಯನ್ನು ಈಸಿದನು! ಕೊನೆಗೆ ಪ್ರತಿಜ್ಞೆ ಕೊನೆಗಂಡಿತು!

ಬೆಟ್ಟದ ಮೇಲೆ ನಿಂತು ನಿಂತಂತೆಯೇ ಹಿಂದಿರುಗಿ ನೋಡಿದನು. ಆಗಸದಲ್ಲಿ ಕೈಚಾಚಿ ತನ್ನ ತೋಳತೆಕ್ಕೆಯಲ್ಲಿ ಭಾರತವನ್ನು ಅಪ್ಪಿಕೊಂಡನು. ಆ ವಿಶಾಲ ವಿಶ್ವವನ್ನು ಅಲ್ಲಿಯ ವಿಚಾರವಿಶ್ವವನ್ನು ಎರಡು ವರ್ಷಗಳಲ್ಲಿ ಸಂಧಿಸಿ ದಾಟಿ ಬಂದಿದ್ದನು. ಎರಡು ವರ್ಷ ಆ ಕುದಿಯುವ ಕೊಪ್ಪರಿಗೆಯಲ್ಲಿ ಕಾಯ್ದು ಹೋಗಿದ್ದನು. ಕುದಿಯುವ ಹೃದಯವನ್ನು ಹೊತ್ತು ತಿರುಗಿದ್ದನು. ಬಿರುಗಾಳಿಯಾಗಿದ್ದನು. ಒಳಗೆ ಕುದಿಕುದಿದು ಉಕ್ಕಿ ಹೊರಚೆಲ್ಲುವ ಶಕ್ತಿಯ ಆವೇಗದಿಂದ ಬಿರಿಯುವಂತಾಗಿದ್ದನು. ಪೃಥ್ವಿಯ ಆ ತುಟ್ಟತುದಿಯಲ್ಲಿ ಆ ಬೆಟ್ಟದ ತಲೆಯ ಮೇಲೆ ಕಾಲಿಟ್ಟು ತನ್ನ ಕಣ್ಣೆದುರು ಹರಡಿದ ವಿಶ್ವವಿಸ್ತರವನ್ನು ನಿರೀಕ್ಷಿಸುತ್ತಿರುವಾಗ ಕಾಲ ಕೆಳಗಿನ ಸಮುದ್ರ ಉಕ್ಕೇರಿ ಬಂದಂತೆ ಅವನ ಮೈಯಲ್ಲಿ ಕಾವೇರಿದ

ಬಿಸಿನೆತ್ತರು ಚಿಮ್ಮಿದಂತಾಯಿತು. ಕಾಲು ನಡುಗಿ ಕುಸಿಬೀಳುವಂತಾ ಯಿತು. ಸಾವರಿಸಿಕೊಂಡು ಸಿಡಿದೆದ್ದು ನಿಂತಾಗಲೇ ಮೊದಲನೆಯ ಕಾಳಗವನ್ನು ಗೆದ್ದನು. ತನ್ನ ಹಾದಿಯನ್ನು ಕಂಡುಕೊಂಡನು. ಅವನ ಜೀವನಕಾರ್ಯ ನಿರ್ಧಾರವಾಯಿತು.

ಮರಳಿ ಈಸಿ ಭಾರತದ ತೀರವನ್ನು ಸೇರಿದನು. ಬೇರೆ ಹಾದಿ ಯಿಂದ ಉತ್ತರಕ್ಕೆ ಸಾಗಿದನು. ರಾಮನಾಡ ಪಾಂಡಿಚೆರಿಯ ಮೇಲಿಂದ ಮದ್ರಾಸಿಗೆ ನಡೆದು ಹೋದನು. ಅಲ್ಲಿ ೧೮೯೩ ರ ಮೊದಲ ವಾರ ಗಳಲ್ಲಿ ಸಾರ್ವಜನಿಕವಾಗಿ ತಾನು ಪಶ್ಚಿಮದಲ್ಲಿ ಕೈಕೊಳ್ಳಬಯಸಿದ ಕಾರ್ಯವನ್ನು ಸಾರಿದನು. ಅವನ ಇಚ್ಛೆಗೆ ಪ್ರತಿಯಾಗಿ ಅವನ ಕೀರ್ತಿ ಮುಂಚೆಯೇ ಹಬ್ಬಿದ್ದಿತು. ವಿದ್ಯಾವಂತರಿಂದ ತುಂಬಿ ಚೈತನ್ಯಮಯ ವಾದ ಆ ಪಟ್ಟಣದಲ್ಲಿ ಎರಡು ಸಲ ವಾಸವಾಗಿದ್ದನು. ಎರಡೂ ಸಲ ದರ್ಶನಾರ್ಥಿಗಳು ಅವನ ಸುತ್ತೆಲ್ಲ ಮುತ್ತಿದರು. ಮದ್ರಾಸದಲ್ಲಿಯೇ ಭಕ್ತಿ- ಪರವಶವಾದ ಮೊದಲನೆಯ ಶಿಷ್ಯಮಂಡಲವನ್ನು ಸ್ಥಾಪಿಸಿದನು. ಅವರು ಅವನಿಗೆ ಆತ್ಮಾರ್ಪಣೆ ಮಾಡಿದರು. ಎಂದೆಂದಿಗೂ ಅವನನ್ನು ಬಿಡಲಿಲ್ಲ. ತಮ್ಮ ಪತ್ರಗಳಿಂದ ಶ್ರದ್ಧೆಯಿಂದ ಭಕ್ತಿಯಿಂದ ಯಾವಾಗಲೂ ಅವ ನನ್ನು ಹುರುಪುಗೊಳಿಸಿದರು. ಅವನಾದರೂ ದಿಗ್ದೇಶಗಳಿಂದ ಅವರ ಯೋಗಕ್ಷೇಮ ಕೇಳುತ್ತಿದ್ದನು. ಭಾರತದ ವಿಷಯದಲ್ಲಿ ಅವನಲ್ಲಿ ಉಕ್ಕುವ ಭಕ್ತಿ ಅವರ ಹೃದಯದ ಆಳದಲ್ಲಿ ದಟ್ಟಾಗಿ ಮಾರ್ದನಿಗೊಂ ಡಿತು. ಅವರ ಆವೇಶದಿಂದ ಅವನ ಆತ್ಮವಿಶ್ವಾಸ ದಶಗುಣವಾಯಿತು. 'ನಿಮಗಾಗಿ ಮುಕ್ತಿಯ ಹಾದಿಯನ್ನು ಹುಡುಕಬೇಡಿರಿ. ಜನತೆಯ ಉದ್ಧಾರ, ಮಾತೃಭೂಮಿಯ ಉದ್ಧಾರ, ವಿಶ್ವದಲ್ಲೆಲ್ಲ ಭಾರತದ ಅಧ್ಯಾತ್ಮ ಶಕ್ತಿಯ ವಿಸ್ತಾರ— ಇದೇ ಇದೇ ನಿಮ್ಮ ಗುರಿ ! 'ಎಂದು ಅವರಿಗೆ ಉಪದೇಶ ಮಾಡಿದನು.

"ಕಾಲ ಮಾಗಿದೆ ! ಋಷಿಗಳ ಧರ್ಮ ಕಾರ್ಯಪ್ರವೃತ್ತವಾಗಬೇ ಕಾಗಿದೆ ! ಒಳಗೆ ಹುದುಗಿಕೊಂಡಿರದೆ ಅದು ಹೊರಹೊರಟು ಲೋಕೋ

ದ್ಧಾರಕ್ಕಾಗಿ ಕಂಕಣವನ್ನು ಕಟ್ಟಬೇಕಾಗಿದೆ!”

ಸಮುದ್ರದಾಚೆಯ ಅವನ ಪರ್ಯಟನಕ್ಕೆ ನವಾಬರು ಶ್ರೀಮಂತರು ಹಣ ಕೊಡಲು ಮುಂದೆ ಬಂದರು. ಅದನ್ನು ಅವನು ಸ್ವೀಕರಿಸಲಿಲ್ಲ. ಮಧ್ಯಮವರ್ಗದವರ ನಲ್ಮೆಯ ಕಾಣಿಕೆಯನ್ನು ಸ್ವೀಕರಿಸಿದನು. “ನಾನು ದೀನ ಜನತೆಯ ಪರವಾಗಿ ಹೋಗುತ್ತಿದ್ದೇನೆ” ಎಂದು ಶಿಷ್ಯರಿಗೆ ಹೇಳಿದನು.

ತನ್ನ ಮಹಾಯಾತ್ರೆಯ ಆರಂಭದಲ್ಲಿ ಕೇಳಿದಂತೆ ಈಗಲೂ ದೂರದ ಸಾಗರಪರ್ಯಟನಕ್ಕಾಗಿ ತೀರ್ಥರೂಪರಾದ ಮಾತಾಜಿ ಶಾರದಾಮಣಿದೇವಿಯರ ಆಶೀರ್ವಾದ ಕೇಳಿದನು. ಅವರು ಶ್ರೀರಾಮಕೃಷ್ಣರ ಆಶೀರ್ವಾದವನ್ನು ಕೂಡ ಕಳಿಸಿದರು. ಪ್ರಿಯಶಿಷ್ಯನಿಗಾಗಿ ಕಳಿಸಲು ತಮ್ಮ ಆಶೀರ್ವಾದವನ್ನು ಅವರು ಕನಸಿನಲ್ಲಿ ದೇವಿಯವರಿಗೆ ಅರ್ಪಿಸಿದ್ದರು.

ಬರಾನಗರದ ತನ್ನ ಅಧ್ಯಾತ್ಮಬಂಧುಗಳಿಗೆ ಅವನು ಕಾಗದ ಬರೆದಂತೆ ಕಾಣುವುದಿಲ್ಲ. ಬೆಚ್ಚಗೆ ಗೂಡು ಸೇರಿ ಧ್ಯಾನಮಾಡುವ ಆ ಜೀವಗಳು ಸಮಾಜಸೇವೆಯ ಮತ್ತು ಸಮುದ್ರಪರ್ಯಟನದ ಬರೀ ಕಲ್ಪನೆಗೆ ಸಹ ಬೆಚ್ಚಿಬೀಳಬಹುದು. ಮಿಕ್ಕವರ ಮೋಕ್ಷದ ಹಾದಿಗೆ ಹೋಗದೆ ತಮ್ಮ ಮೋಕ್ಷದ ಹಾದಿಯನ್ನೇ ಹುಡುಕುವ ಪ್ರಶಾಂತ ಜೀವಗಳ ಶಾಂತಿಗೆ ಇಂಥ ಕಲ್ಪನೆ ಭಂಗ ತರಬಹುದೆಂದು ಅವನಿಗೆ ನಿಸ್ಸಂದೇಹವಾಗಿ ತೋರಿತು. ಆದರೆ ಹೊರಡುವ ಮುಂಚೆ ಅಬೂರೋಡ್ ನಿಲ್ದಾಣದ ಹತ್ತರ ಅವನು ಅಕಸ್ಮಾತ್ತಾಗಿ ಬ್ರಹ್ಮಾನಂದ ತುರೀಯಾನಂದರನ್ನು ಕಂಡನು. ಅಭಾಗಿ ಭಾರತದ ಕರುಣ ಕೂಗು ತನ್ನನ್ನು ಸೆಳೆದು ಒಯ್ಯುತ್ತಿದೆಯೆಂದು ಆವರಿಗೆ ಕಳವಳದಿಂದ ಹೇಳಿದನು:

“ಭಾರತದ ತುಂಬೆಲ್ಲ ಸಂಚರಿಸಿದೆ. ಅಯ್ಯೋ! ಬಂಧುಗಳಿರಾ! ಜನತೆಯ ದುಃಖದಾರಿದ್ರ್ಯಗಳನ್ನು ಭಯಾನಕ ಹೀನದೀನತೆಯನ್ನು ಕಂಡು ತಳಮಳಿಸಿದೆ! ಉಕ್ಕಿ ಸುರಿದ ಕಂಬನಿಯನ್ನು ತಡೆಯಲಾರದೆ

ಹೋದೆ! ಅವರ ದುಃಖದಾರಿದ್ರ್ಯ ಹಿಂಗಿಸದೆ ಅವರಿಗೆ ಧರ್ಮ ಬೋಧಿಸುವುದು ನಿರರ್ಥಕವೆಂದು ನಾನು ಮನಗಂಡೆ ಅದಕ್ಕಾಗಿಯೇ ಭಾರತದ ದೀನ ಜನೋದ್ಧಾರಕ್ಕಾಗಿಯೇ ನಾನು ಅಮೇರಿಕೆಗೆ ಹೊರಟು ನಿಂತಿದ್ದೇನೆ." *

---

* ಬ್ರಹ್ಮಾನಂದ ತುರೀಯಾನಂದರು ಅಬೂಪರ್ವತದ ಗವಿಗಳಲ್ಲಿ ತಪಸ್ಸನ್ನು ಆಚರಿಸುತ್ತಿದ್ದರು. ನರೇಂದ್ರನನ್ನು ಕಾಣಬಹುದೆಂದು ಅವರು ಎಣಿಸಿದ್ದಿಲ್ಲ. ಅವನು ಹೊರಡುವ ಕೆಲವು ವಾರ ಮುಂಚೆ ಆಕಸ್ಮಿಕವಾಗಿ ಅವರು ಅವನನ್ನು ಅಬೂರೋಡ್ ನಿಲ್ದಾಣದಲ್ಲಿ ಕಂಡರು. ತನ್ನ ಯೋಜನೆ, ಶಂಕೆ, ನಿರ್ಧಾರ-ಎಲ್ಲವನ್ನೂ ನರೇಂದ್ರ ಅವರಿಗೆ ಹೇಳಿದನು. ತನ್ನ ಜೀವನಕಾರ್ಯದ ಯಶಸ್ಸಿಗಾಗಿ ಸರ್ವಧರ್ಮಸಮ್ಮೇಲನ ಈಶಸಂಕೇತವಾಗಿದೆಯೆಂದು ತಿಳಿಸಿದನು. ತಮ್ಮ ಜೀವನಸ್ಮೃತಿಯಲ್ಲಿ ತುರೀಯಾನಂದರು ನರೇಂದ್ರನ ಒಂದೊಂದು ಮಾತನ್ನೂ ಅದನ್ನಾಡಿದ ರೀತಿ ಆವೇಶ ಎಲ್ಲವನ್ನೂ ಇದ್ದಕ್ಕಿದ್ದಂತೆ ಬಣ್ಣಿಸಿರುತ್ತಾರೆ:

"ಹರಿಭಾಯಿ" ಚಿಮ್ಮುತ್ತಿರುವ ನೆತ್ತರದಿಂದ ಕೆಂಪೇರಿದ ಮೋರೆ ಮೇಲಕ್ಕೆತ್ತಿ ನರೆಂದ್ರ ನುಡಿದನು, " ಧರ್ಮ ಧರ್ಮವೆಂದು ನೀವೆನ್ನುವುದು ನನಗೆ ಅರ್ಥವಾಗದು!........"

' ದೇಹಾದ್ಯಂತ ಹೊರಚೆಲ್ಲುವ ಆಳವಾದ ಯಾತನೆ! ಗಂಭೀರ ಭಾವನೆ! ಕಂಪಿಸುವ ಕೈಯನ್ನು ಎದೆಗೆ ಅಪ್ಪಳಿಸುತ್ತ ಮತ್ತೆ ಅಂದನುಃ

" ಆದರೆ ಈ ಎದೆ ಹರವಾಗಿದೆ. ಅನ್ಯರ ಕೊರಗಿಗೆ ಕೊರಗುವುದನ್ನು ಅದು ಕಲಿತಿದೆ. ನನ್ನ ತಳಮಳ ಕಾಣದೆ ? "

' ಭಾವನೆಯ ಆವೇಶದಿಂದ ಕೊರಳು ಬಿಗಿಯಿತು! ನಿಶ್ಶಬ್ದನಾದನು! ಕೆನ್ನೆ ಕಂಬನಿಯಿಂದ ನೆನೆದವು ! '

ತುರೀಯಾನಂದರೂ ಪರವಶವಾದರು. ಕಂಬನಿ ಹರಿಯಿತು. ಜೀವನಸ್ಮೃತಿಯಲ್ಲಿ ಮತ್ತೆ ಬರೆಯುತ್ತಾರೆ.:

' ಆ ನೊಂದ ಎದೆಯ ನುಡಿ ಕೇಳಿ ಸ್ವಾಮಿಯವರ ಆಳವಾದ ಯಾತನೆಯ ಆವೇಗ ನೋಡಿ ನನ್ನೆದೆಯಲ್ಲಿ ಏನೋ ತ್ರಿಶೂಲ ಹಾಕಿ ತಿರುವಿದಂತಾಯಿತು. ನಾನಂದುಕೊಂಡೆ "ಇವು ಬುದ್ಧದೇವನ ನೊಂದ ಎದೆಯ ನುಡಿ ಅಲ್ಲವೇ ? ಅವನ ಭಾವನೆಗಳೇ ಅಲ್ಲವೇ ? ನನಗೆ ನೆನಪಾಯಿತು. ಹಿಂದೊಮ್ಮೆ

ಅವನು ಖೇತ್ರಿಗೆ ಹೋದನು. ಅಲ್ಲಿಯ ಮಹಾರಾಜರು ತಮ್ಮ ಮುಖ್ಯಮಂತ್ರಿಯನ್ನು ಮುಂಬಯಿವರೆಗೆ ಜೊತೆಯಲ್ಲಿ ಕಳಿಸಿದರು. ಅಲ್ಲಿಂದ ಹಡಗವನ್ನು ಹತ್ತಿದನು. ಹೊರಡುವಾಗ ಕೆಂಪು ರೇಶಿಮೆಯ

---

ಬುದ್ಧಗಯೆಗೆ ಹೋಗಿ ಬೋದಿವೃಕ್ಷದ ಅಡಿಯಲ್ಲಿ ಧ್ಯಾನಕ್ಕೆ ಕುಳಿತಾಗ ಸ್ವಾಮಿಯವರಿಗೆ ಬುದ್ಧದರ್ಶನವಾಯಿತು. ಬುದ್ದ ಆವರಲ್ಲಿ ಸೇರಿ ಮಾಯವಾದಂತಾಯಿತು................ಮಾನವಕುಲದ ಮರುಗೆಲ್ಲ ಅವರ ಆದುರುತಿರುವ ಎದೆಯಲ್ಲಿ ತಿವಿದು ಒಳಸೇರಿದಂತಾಯಿತು. ಅವರಲ್ಲಿ ಭುಗ್‌ಭಗಿಸುವ ಭಾವನೆಗಳ ಜ್ವಾಲಾಮುಖಿಯ ಒಂದಂಶವನ್ನೂ ಕಾಣದವನು ವಿವೇಕಾನಂದರನ್ನು ಅರಿಯನು!'

ಅಮೇರಿಕೆಯಿಂದ ವಿವೇಕಾನಂದರು ಮರಳಿ ಬಂದನಂತರ ಬಾಗಬಜಾರ (ಕಲಕತ್ತಾ) ದಲ್ಲಿ ಜರುಗಿದ ಇಂಥ ಇನ್ನೊಂದು ಘಟನೆಯನ್ನು ತುರಿಯಾನಂದರು ಬಣ್ಣಿಸಿರುದರು.

'ಅವರನ್ನು ಕಾಣಲು ಹೋಗಿದ್ದೆ. ಪಂಜರದಲ್ಲಿಯ ಸಿಂಹನಂತೆ ಅತ್ತಿಂದಿತ್ತ ಇತ್ತಿಂದತ್ತ ಹೆಜ್ಜೆ ಹಾಕುತ್ತಿದ್ದರು. ವಿಚಾರ ಸಮಾಧಿಯಲ್ಲಿ ಮೈಮರೆತು ನಾನು ಬಂದುದನ್ನು ಅರಿಯದೆ ಹೋದರು....... ಮೀರಾಬಾಯಿಯ ಹೆಸರಾದ ಭಕ್ತಿಗೀತವನ್ನು ಕಳ್ಳದನಿಯಲ್ಲಿ ಗುಣ್‌ಗುಣಿಸಹತ್ತಿದರು ಹನಿ ತುಂಬಿದ ಕಣ್ಣು ಒರೆಯಿಸಿಕೊಂಡರು ನಿಂತರು. ನಿಂತು ಕಟಾಂಜನಕ್ಕೆ ಆತುಕೊಂಡು ಎರಡೂ ಅಂಗೈಗಳಿಂದ ಮೋರೆ ಮುಚ್ಚಿಕೊಂಡು ಕಳ್ಳದನಿ ಬರಬರುತ್ತ ನಿಚ್ಚಳವಾಯಿತು. ಹಾಡಿದರು ಮತ್ತೆ ಮತ್ತೆ ಹಾಡಿದರು...........

"ಮೇರಾ ದರ್ದ ನ ಜಾನೆ, ದರ್ದ ನ ಜಾನೆ ಕೋಯಿ........
ಜೋಹರಿಕೀ ಗತಿ ಜೋಹರೆ ಜಾನೆ.... ಮೇರಾದರ್ದನ ಜಾನೆ ಕೋಯಿ....!"

'ಅವರ ದನಿ ದೇಹಾದ್ಯಂತ ಅಲಗಿನಂತೆ ಚುಚ್ಚಿತು ಮೊದಲು ಅವರ ಯಾತನೆಯ ಕಾರಣ ಅರಿಯದಾದೆ. ಆ ಮೇಲೆ ಹೊಳೆಯಿತು. ಮಾನವಕುಲದ ಕಷ್ಟ ಕಂಡು ಕರುಣೆಯಿಂದ ಕೊರೆದು ಹೊಗುವ ಅವರ ಹೃದಯ ಆಗಾಗ ನೆತ್ತರದ ಕಂಬನಿ ಸುರಿಸುತ್ತಿತ್ತು. ಪ್ರಪಂಚ ಮಾತ್ರ ಅದನ್ನು ಕಾಣದೆ ಹೋಗುತ್ತಿತ್ತು. ಆದರೆ ಆ ನೆತ್ತರದ ಕಂಬನಿ ನಿರರ್ಥಕವಾಗಿ ಸುರಿದವೆನ್ನುವಿರಾ ? ಅಲ್ಲ! ಆ ಒಂದೊಂದು ಕಂಬನಿಯಿಂದ, ಆ ವಿರಾಟ್ ಹೃದಯದಿಂದ ಹೊರಹೊರಟ ಒಂದೊಂದು ಬಿಸಿಯುಸಿರಿನಿಂದ ತಂಡತಂಡವಾಗಿ ಹುಟ್ಟಿದ ವೀರರು ತಮ್ಮ ವಿಚಾರಗಳಿಂದ ತಮ್ಮ ಆಚಾರಗಳಿಂದ ಲೋಕವನ್ನೆ ನಡುಗಿಸಿ ಬಿಡುವರು!'

ನಿಲುವಂಗಿ, ಗೇರುಬಣ್ಣದ ಫೇಟಾ, ಮತ್ತು 'ವಿವೇಕಾನಂದ' ಎಂಬ ಹೆಸರ–ಎಲ್ಲವನ್ನೂ ಧರಿಸಿದನು. ಮುಂದೆ ಮೂರುವರ್ಷಗಳಲ್ಲಿ 'ಸ್ವಾಮಿ ವಿವೇಕಾನಂದ' * ದೇಸೆದೆಸೆಯಲ್ಲಿ ದುಮ್ದುಮಿಸಿತು !

# ೫ ಪಶ್ಚಿಮದ ಪರ್ಯಟನ: —ಸರ್ವಧರ್ಮ ಸಮ್ಮೇಲನ

ಈ ಪರ್ಯಟನ ಮಾತ್ರ ನಿಜವಾಗಿಯೂ ಸೋಜಿಗದ ಸಾಹಸ. ಕಣ್ಣು ಮುಚ್ಚಿ ಹಾದಿ ಸಿಕ್ಕಂತೆ ಹೊರಟರು ತರುಣ ಸ್ವಾಮಿ. ಅಮೇರಿಕೆಯಲ್ಲಿ ಎಲ್ಲಿಯೋ ಎಂದೋ ಸರ್ವಧರ್ಮಸಮ್ಮೇಲನ ಸೇರುವುದೆಂದು ಏನೋ ಸಮಾಚಾರ ಕೇಳಿದ್ದರು. ಅವರು, ಅವರ ಶಿಷ್ಯ, ಗೆಳೆಯ, ವಿದ್ಯಾರ್ಥಿ, ಪಂಡಿತ, ಮಂತ್ರಿ, ಮಹಾರಾಜ— ಯಾರೂ ಆ ವಿಷಯದಲ್ಲಿ ಹೆಚ್ಚಿನ ವಿವರವನ್ನು ತಿಳಿದುಕೊಳ್ಳುವ ಗೋಜಿಗೇ ಹೋಗಿರಲಿಲ್ಲ.

---

*ಭಾರತದ ಸಂಚಾರದಲ್ಲಿ ಹಲವು ಹೆಸರು ಹೇಳುತ್ತಾ ಹೋಗುತ್ತಿದ್ದರು. ಜನರ ಕಣ್ಣಲ್ಲಿ ಕಂಡು ಕಾಣದಂತೆ ನುಸುಳಿ ಹೋಗಬೇಕೆನ್ನುವ ಅವರ ಉದ್ದೇಶ ಸಫಲವಾಯಿತು. ಅವರನ್ನು ಕಂಡು ಅನೇಕರಿಗೆ ಅವರ ವಿಷಯ ತಿಳಿಯುತ್ತಲೇ ಇರಲಿಲ್ಲ. ೧೮೯೨ರ ಅಕ್ಟೋಬರದಲ್ಲಿ ಪುಣೆಯಲ್ಲಿ ಹೀಗೇ ಆಯಿತು. ವಿಖ್ಯಾತ ವಿದ್ವಾಂಸರೂ ಭಾರತದ ರಾಜಕೀಯ ಮುಂದಾಳುಗಳೂ ಆದ ತಿಲಕರು ಇವರನ್ನು ಏನೋ ಒಬ್ಬ ಸಂಚಾರಿಯಾದ ಸನ್ಯಾಸಿಯೆಂದು ತಿಳಿದು ವ್ಯಂಗ್ಯೋಕ್ತಿಯನ್ನಾರಂಭಿಸಿದರು. ಇವರ ಮಾತಿನಲ್ಲಿ ಎದ್ದು ಕಾಣುವ ವಿದ್ವತ್ತೆಯನ್ನೂ ವಿಶಾಲಹೃದಯವನ್ನೂ ಕಂಡಾಗ ಮಾತ್ರ ಇವರನ್ನು ಕರೆದೊಯ್ದು ತಮ್ಮ ಮನೆಯಲ್ಲಿ ಹತ್ತು ದಿನ ಇರಿಸಿಕೊಂಡರು. ಇವರ ನಿಜವಾದ ಹೆಸರನ್ನು ಮಾತ್ರ ಅರಿಯರು. ಮುಂದೆ ಅಮೇರಿಕೆಯಲ್ಲಿ ವಿವೇಕಾನಂದರ ವಿಜಯದುಂದುಭಿ ದೆಸೆದೆಸೆಯಲ್ಲಿ ಮೊಳಗಲು ಆ ವಿಜಯಿಯಾದ ವೀರನ ವರ್ಣನೆಯನ್ನು ಅಮೇರಿಕೆಯ ವೃತ್ತಪತ್ರಗಳಲ್ಲಿ ಓದಿದರು. ಆಗಮಾತ್ರ ಅರಿತರು ತಮ್ಮ ಮನೆಯಲ್ಲಿ ಇದ್ದು ಹೋದ ಅನಾಮಧೇಯ ಸನ್ಯಾಸಿ "ಸ್ವಾಮಿ ವಿವೇಕಾನಂದರೇ" ಎಂದು!

ಸಮ್ಮೇಲನದ ದಿನ, ಪ್ರವೇಶದ ನಿಯಮ ಏನೇನೂ ಗೊತ್ತಿರಲಿಲ್ಲ ಆ ಮಹಾರಾಯರಿಗೆ. ಒಂದೂ ಪ್ರಮಾಣಪತ್ರ ಒಯ್ದಿರಲಿಲ್ಲ. ಆತ್ಮ ವಿಶ್ವಾಸ ಮಾತ್ರ ಬಲವಾಗಿತ್ತು. ಹೊರಡಲು, ಮತ್ತು ಸರಿಯಾದ ಸಮಯಕ್ಕೆ— ಈಶ್ವರಸಂಕೇತದ ಸಮಯಕ್ಕೆ— ಇಚ್ಛಿತ ಸ್ಥಳ ಸೇರಲು ಅಷ್ಟೇ ಸಾಕೆಂದರು. ಖೇತ್ರಿಯ ಮಹಾರಾಜರು ಹಡಗದ ಟಿಕೆಟ್ ಕೊಡಿಸಿದರು. ಸ್ವಾಮಿಯವರು ಬೇಡ ಬೇಡವೆಂದರೂ ಕೇಳದೆ ಸುಂದರ ವಸ್ತ್ರಾಲಂಕಾರ ಮಾಡಿಕಳಿಸಿದರು. ವಸ್ತ್ರಾಲಂಕಾರವನ್ನೂ ಅವರ ವಕ್ತೃತ್ವಶಕ್ತಿಯನ್ನೂ ಕಂಡು ಅಮೇರಿಕೆಯ ಜನ ಬೆರಗಾಗಿ ಮನಸೋತರು. ಆದರೆ ಹವಾಮಾನ ಅಥವಾ ರೀತಿ ನೀತಿ ನಡಾವಳಿಗಳನ್ನು ಅವರಾಗಲಿ ಅನ್ಯರಾಗಲಿ ಲಕ್ಷಿಸಿರಲಿಲ್ಲ. ಭಾರತದ ವಸ್ತ್ರಾಲಂಕಾರದ ಆ ಸೊಂಪು ಪೆಂಪನ್ನು ಹೊತ್ತು ಕಾನಡಾದ ದಂಡೆಯ ಮೇಲೆ ಕಾಲಿಟ್ಟಾಗ ಸ್ವಾಮಿಯವರು ಚಳಿಯಿಂದ ಸೆಟೆದು ಹೋಗಿದ್ದರು.

೧೮೯೩ ರ ಮೇ ೩೧ ನೇ ದಿನ ಮುಂಬಯಿ ಬಿಟ್ಟು ಅವರು ಸಿಂಹಲ ದ್ವೀಪ, ಪಿನಾಂಗ್, ಸಿಂಗಾಪುರ್, ಹಾಂಗ್‌ಕಾಂಗ್ ಮಾರ್ಗವಾಗಿ ಸಾಗಿ ಕಂತಾನ್ ಮತ್ತು ನಾಗಸಾಕಿ ಕಂಡರು. ಅಲ್ಲಿಂದ ಒಸಾಕಾ, ಕಿಯೋಟೋ ಮತ್ತು ಟೋಕಿಯೋ ನೋಡಿಕೊಂಡು ಭೂಮಾರ್ಗದಿಂದ ಯಾಕೋಹಾಮಾಕ್ಕೆ ಹೋದರು. ಚೀನ ಜಪಾನಗಳಲ್ಲಿ ಹೋದ ಹೋದಲ್ಲೆಲ್ಲ ಅವರ ಕಣ್ಣನ್ನು ಸೆಳೆದ ಸಂಗತಿ ಅವರು ನಿರ್ಧಾರಕ್ಕೆ ಬಂದ ಸಿದ್ಧಾಂತವನ್ನೇ ಸಮರ್ಥಿಸಿದವು—ಏಶಿಯದ ಆಧ್ಯಾತ್ಮಿಕ ಐಕ್ಯ ಮತ್ತು ಅತಿಪೂರ್ವದ ಸಾಮ್ರಾಜ್ಯಗಳ ಮೇಲೆ ಹಬ್ಬಿದ ಪ್ರಾಚೀನ ಭಾರತದ ಧರ್ಮಸಾಮ್ರಾಜ್ಯ. ಇಂದಿನ ಭಾರತ ಎಂಥ ಹೀನ ದೆಸೆಯಲ್ಲಿ ಬಳಲುತ್ತಿದೆಯೆಂಬ ಮಾತು ಕ್ಷಣಕ್ಷಣಕ್ಕೆ ಅವರಿಗೆ ಶೂಲಪ್ರಾಯವಾಯಿತು. ಜಪಾನದಲ್ಲಿ ಆದ ಪ್ರಗತಿಯನ್ನು ಕಣ್ಣಾರೆ ಕಂಡಾಗ ಆ ಶೂಲಕ್ಕೆ ಹೊಸ ಗಾಯವಾದಂತಾಯಿತು.

ಯಾಕೋಹಾಮಾದಿಂದ ವ್ಹ್ಯಾನ್‌ಕೂವ್ಹರಕ್ಕೆ ಹೋದರು. ಅಲ್ಲಿಂದ

ರೈಲುಮಾರ್ಗವಾಗಿ ಜುಲೈಮಧ್ಯದಲ್ಲಿ ಚಿಕ್ಯಾಗೋ ಮುಟ್ಟಿದರು. ಬೆಪ್ಪಾಗಿ ನಿಂತರು. ಎಲ್ಲರೂ ಅವರನ್ನು ಸುಲಿಯುವವರೇ. ಹಾದಿಹಾದಿಗೆ ಹೆಜ್ಜೆ ಹೆಜ್ಜೆಗೆ ಅವರು ಸುಲಿಗೆಗಾರರ ಗುರಿಯಾದರು. ಬಲು ದೂರಿನಿಂದಲೇ ಸುಲಿಗೆಗಾರರು ತಮ್ಮ ಬೇಟೆಯನ್ನು ಗುರುತಿಸುತ್ತಿದ್ದರು.

ಆ ಚಿಕ್ಯಾಗೋದ ಜಾಗತಿಕ ಜನಜಾತ್ರೆಯಲ್ಲಿ ದಿಟ್ಟಿಸಿ ಕಣ್ಣು ಬಿಡುತ್ತ ಸೋಜಿಗದಿಂದ ಬಾಯಿ ತೆರೆಯುತ್ತ ದೊಡ್ಡ ಪೋರನಂತೆ ತಿರುಗಿದರು. ಕಂಡದ್ದೆಲ್ಲ ಹೊಸದು. ಕೇಳಿದ್ದೆಲ್ಲ ಹೊಸದು. ಸೋಜಿಗ ದಿಂದ ಬೆಪ್ಪಾದರು. ಪಾಶ್ಚಾತ್ಯ ಜಗತ್ತಿನ ಸಾಮರ್ಥ್ಯ, ಸಂಪತ್ತು, ಸಂಶೋಧಕ ಪ್ರತಿಭೆ—ಯಾವುದನ್ನೂ ಅವರು ಅರಿತಿರಲಿಲ್ಲ. ಗಡಿಬಿಡಿ ಗೊಂದಲಕ್ಕೆ ಬೇಸತ್ತು ಹಿಂಜರಿಯುವ ಟಾಗೋರ ಅಥವಾ ಗಾಂಧಿ ಯವರಿಗಿಂತ ಅವರು ಹೆಚ್ಚಾಗಿ ಶಕ್ತಿಪೂಜಕರು, ಶಕ್ತಿಸಂಪನ್ನರು. ಅಮೇ ರಿಕೆಯ ಆ ಯಂತ್ರತಂತ್ರಗಳ ವಿರಾಟ್ ಸ್ವರೂಪವನ್ನು ಕಂಡು ಅವ ರಿಗೆ ಮೋಜೆನಿಸಿತು. ಅಲ್ಲಿಯ ಬಾಳಿನ ರಭಸದ ಆವೇಶ ಕಂಡು ಮೊದ ಮೊದಲು ಮೈಮರೆತರು. 'ಆಹಾ! ಇದೇನದ್ಭುತ!' ಎಂದು ಅವರ ಹರ್ಷ ಮೇರೆಮೀರಿತು. ಸತತ ಹನ್ನೆರಡು ದಿನ ಆ ಹೊಸ ಜಗತ್ತನ್ನು ಕುತೂಹಲ ತುಂಬಿದ ಕಣ್ಣುಗಳಿಂದ ನಿರೀಕ್ಷಿಸಿದರು.

ಚಿಕ್ಯಾಗೋದಲ್ಲಿ ಕಾಲಿಟ್ಟ ಕೆಲ ದಿನಗಳಲ್ಲಿ ಸಮ್ಮೇಲನದ ಸಮಾಚಾರ ಶಾಖೆಗೆ ಹೋದರು........ಎದೆ ಝುಲ್ಲೆಂದಿತು! ಸಪ್ಟೆಂಬರ್ ಮೊದಲನೆಯ ವಾರದ ನಂತರ ಸಮ್ಮೇಲನ ಸೇರುವುದಂತೆ! ಪ್ರತಿನಿಧಿ ಗಳ ಹೆಸರು ಕೊಡುವ ಅವಧಿ ಮೀರಿ ಹೋಗಿದೆಯಂತೆ! ಯಾವುದಾದರೂ ಸಂಸ್ಥೆಯ ಪ್ರಮಾಣಪತ್ರವಿಲ್ಲದೆ ಪ್ರತಿನಿಧಿಯಾಗಲು ಶಕ್ಯವಿಲ್ಲಂತೆ! ಹೆಸರುದೆಸೆಯನ್ನೂ ಯಾರೂ ಅರಿಯದ ಹುಡುಗಬೈರಾಗಿ! ಯಾವುದೂ ಸಂಸ್ಥೆಯ ಪ್ರಮಾಣಪತ್ರವಿಲ್ಲ. ಹತ್ತರದ ಹಣದ ಚೀಲ ಬರಿದಾಗುತ್ತ ಬಂದಿದೆ! ಸಮ್ಮೇಲನ ಸೇರುವ ತನಕ ಸಾಗುವುದೆಂತು ?........ದಿಙ್ಮೂಢ ರಾದರು! ತಂತಿಯಿಂದ ಮದ್ರಾಸಿಗೆ ಕೂಗಿಕೊಂಡರು. ಯಾವುದೋ

ಧರ್ಮಸಂಸ್ಥೆಗೆ ಪ್ರಮಾಣಪತ್ರ ಕೇಳಿದರು. ಹಣ ಕೇಳಿದರು. ಧರ್ಮ ಸಂಸ್ಥೆಗಳಿಗೆ ಇವರಂಥ ಸ್ವಾತಂತ್ರ್ಯವೃತ್ತಿ ರುಚಿಸದು. ಆ ಸಂಸ್ಥೆಯ ಕಾರ್ಯದರ್ಶಿಯ ಉತ್ತರ: "ಪಿಶಾಚ ಚಳಿಯಲ್ಲಿ ಸೆಟೆದು ಹೋಗಲಿ!"

ಆ ಪಿಶಾಚ ಸೆಟೆದು ಹೋಗಲಿಲ್ಲ. ಸಾಕಾಯಿತೆಂದು ಕೈಸಾಗದೆ ಕುಪ್ಪಳಿಸಲೂ ಇಲ್ಲ. ದೈವದ ಮೇಲೆ ಭಾರ ಹಾಕಿದರು. ಕೈಯಲ್ಲಿ ಕೆಲ ಡಾಲರ್ ಹಿಡಿದುಕೊಂಡು ಬಿದ್ದಲ್ಲಿ ಬಿದ್ದಿರದೆ ಅವನ್ನು ವೆಚ್ಚಮಾಡಿ ಬಾಸ್ಟನ್‌ಕೆ ಹೋದರು. ದೈವ ಅವರ ಬೆನ್ನು ಕಟ್ಟಿತು. ತಮ್ಮ ಕಾಲ ಮೇಲೆ ನಿಂತು ಹೋರಾಡುವವರ ಬೆನ್ನು ದೈವ ಕಟ್ಟಯೇ ಕಟ್ಟುವುದು. ಎಲ್ಲಿ ಹೋದರೂ ಎಲ್ಲರ ಕಣ್ಣಲ್ಲಿಯೂ ವಿವೇಕಾನಂದರು ನೆಡಲಾರದೆ ಹೋಗರು. ಅವರ ಹೆಸರುದೆಸೆಯನ್ನು ಅರಿಯದವರು ಸಹ ಅವರ ವರ್ಚಸ್ಸಿಗೆ ಮಣಿದು ಮನಸೋತರು. ಬಾಸ್ಟನ್ನದ ಉಗೆಬಂಡಿಯಲ್ಲಿ ಅವರ ವೇಷಭಾಷೆ ಕಂಡು ಬೆರಗಾದ ದಾರಿಕಾರ್ತಿ—ಮ್ಯಾಸ್ಯಾಚ್ಯುಸೆಟ್ಸ್ ದಲ್ಲಿಯ ಓರ್ವ ಸಿರಿವಂತ ಸಭ್ಯ ಸ್ತ್ರೀ—ಅವರನ್ನು ಮಾತನಾಡಿಸಿದಳು. ತನ್ನ ಮನೆಗೆ ಬರಲು ಆಮಂತ್ರಿಸಿದಳು. ಹಾರವರ್ಡದ ಪ್ರೊಫೆಸರ ಜೆ. ಎಚ್. ರಾಯಿಟ್ ಅವರಿಗೆ ಅವರ ಪರಿಚಯ ಮಾಡಿಕೊಟ್ಟಳು. ತರುಣ ಭಾರತೀಯರ ಪ್ರತಿಭೆಗೆ ಬೆರಗಾದ ಆ ಪ್ರೊಫೆಸರರು ಅವರಿಗೆ "ಸರ್ವಥಾ ನಿಮ್ಮವನಾಗಿ" ಬಿಟ್ಟರು. ಸರ್ವಧರ್ಮಸಮ್ಮೇಲನದಲ್ಲಿ ವಿವೇಕಾನಂದರು ಹಿಂದೂಧರ್ಮದ ಪ್ರತಿನಿಧಿಗಳಾಗಬೇಕೆಂದು ಅವರ ಆಗ್ರಹ. ಅದರಂತೆ ಸಮಿತಿಯ ಅಧ್ಯಕ್ಷರಿಗೆ ಕಾಗದ ಬರೆದರು. ಈ ಕಾಸಿಲ್ಲದ ಬೈರಾಗಿಗೆ ಚಿಕ್ಯಾಗೋದ ರೈಲುಟಿಕೆಟ್ ಕೊಡಿಸಿದರು. ಅಲ್ಲಿ ಇರಲು ಸ್ಥಳದ ಏರ್ಪಾಟು ಮಾಡಲು ಸ್ನೇಹಿತರಿಗೆ ಪತ್ರಬರೆದು ಕೊಟ್ಟರು. ಅಂತೂ ವಿವೇಕಾನಂದರ ಎಲ್ಲ ತೊಂದರೆ ದೂರಾದವು.

ವಿವೇಕಾನಂದರು ಚಿಕ್ಯಾಗೋಕ್ಕೆ ಮರಳಿದರು. ರೈಲು ತಡವಾಗಿ ಬಂದಿತು. ಬೆರಗಾದ ಬೈರಾಗಿ ಸಮಿತಿಯ ವಿಳಾಸವನ್ನು ಕಳೆದುಕೊಂಡು ಬಿಟ್ಟಿದ್ದರು. ಎಲ್ಲಿಗೆ ಹೋಗಬೇಕೆಂಬುದು ತಿಳಿಯದೆ ನಿಂತರು. ಬೇರೆ

ಬಣ್ಣದ ಈ ಬೈರಾಗಿಯನ್ನು ಯಾರೂ ಮಾತನಾಡಿಸಲಿಲ್ಲ. ನಿಲ್ದಾಣ ದಲ್ಲಿ ಬಿದ್ದಿರುವ ದೊಡ್ಡದೊಂದು ತೆರವಾದ ಕಟ್ಟಿಗೆಯ ಪೆಟ್ಟಿಗೆಯಲ್ಲಿ ಮಲಗಿ ಇರುಳು ಕಳೆದರು. ಬೆಳಗಾಗಲು ಎದ್ದು ತಮ್ಮ ದಾರಿಯನ್ನು ಕೇಳಬೇಕೆಂದು ಬೈರಾಗಿ ಕದದಿಂದ ಕದಕ್ಕೆ ಅಲೆದರು. ಸಾವಿರಾರು ಹಾದಿಗಳಿಂದ ಹಣ ಗಳಿಸುವ ಆ ಮಹಾಪಟ್ಟಣದಲ್ಲಿ ಸಾಧುಸಂತರ ಹಾದಿಗೆ ಮಾತ್ರ ಹೋಗುವವರಾರೂ ಇಲ್ಲ: ಯಾರೂ ಅವರನ್ನು ಹಚ್ಚಿಕೊಳ್ಳಲಿಲ್ಲ. ಕೆಲ ಮನೆಗಳಿಂದ ಉದ್ಧಟರು ಅವರನ್ನು ಹೊರ ದೂಡಿದರು. ಕೆಲ ಮನೆಗಳಲ್ಲಿ ಆಳುಮಕ್ಕಳು ಅವರಿಗೆ ಅಪ್ರತಿಷ್ಠೆ ಮಾಡಿದರು. ಕೆಲವೆಡೆಗಳಲ್ಲಿ ಅವರು ಹೆಬ್ಬಾಗಿಲಲ್ಲಿ ಕಾಲಿಡುತ್ತಿರುವಾಗಲೆ ನೂಕಿ ಕದ ಹಾಕಿದರು. ಘಂಟೆಘಂಟೆ ತಿರುತಿರುಗಿ ಬೇಸತ್ತು ಬೀದಿಯಲ್ಲಿ ಕುಕ್ಕರಿಸಿದರು. ಎದುರಿನ ಕಿಟಕೆಯೊಳಗಿನಿಂದ ಯಾರೋ ಮಾತನಾಡಿ ಸಿದರು. " ನೀವು ಧರ್ಮಸಮ್ಮೇಲನದ ಪ್ರತಿನಿಧಿಯೇನು ? " ಎಂದು ಕೇಳಿದರು. ಒಳಗೆ ಕರೆದರು. ಅಮೇರಿಕೆಯಲ್ಲಿ ಅತ್ಯಂತ ಶ್ರದ್ಧಾಳುವಾದ ಓರ್ವ ಶಿಷ್ಯಳನ್ನು ದೈವ ದೊರಕಿಸಿಕೊಟ್ಟಿತು.

ಕೊಂಚ ದಣುವಾರಿಸಿಕೊಂಡ ಮೇಲೆ ಅವರನ್ನು ಸಮ್ಮೇಲನದ ಕಾರ್ಯಾಲಯಕ್ಕೆ ಕರೆದೊಯ್ದರು. ಪ್ರತಿನಿಧಿಯೆಂದು ಸಂತೋಷದಿಂದ ಸ್ವೀಕರಿಸಲಾಯಿತು. ಸಮ್ಮೇಲನದ ಉಳಿದ ಪೌರ್ವಾತ್ಯ ಪ್ರತಿನಿಧಿಗಳ ಜೊತೆಯಲ್ಲಿ ಇಳಿದುಕೊಂಡರು.

ಅವರ ಸಾಹಸದ ಪ್ರವಾಸ ಗೋಳಾಟದಲ್ಲಿ ಕೊನೆಗೊಂಡಿತೋ ಏನೋ ಎನ್ನುವಷ್ಟರಲ್ಲಿ ಹರಿಗೋಲು ದಂಡೆಯನ್ನು ಕಂಡಿತು. ಆದರೆ ವಿಶ್ರಾಂತಿಗಾಗಿ ಮಾತ್ರವಲ್ಲ. ಕಾರ್ಯದ ಕೂಗು ಕಿವಿಯ ಮೊಲೆ ಅಪ್ಪಳಿಸಿತು. ಕಂಕಣ ಕಟ್ಟಿ ಕರ್ಮರಂಗಕ್ಕೆ ಇಳಿಯಬೇಕಲ್ಲ! ದಿಕ್ಕುದೇಶ ಗಳ ಹಲವು ಜನಾಂಗಗಳ ಜಂಗುಳಿಯಲ್ಲಿ ತಮ್ಮ ಬಣ್ಣಕ್ಕಾಗಿ ನಿನ್ನೆಯ ದಿನ ಹೀಯಾಳಿಸಲಾದ ಹೆಸರು ದೆಸೆಯಿಲ್ಲದ ಬೈರಾಗಿ ಇಂದು ಮೊದಲ ನೋಟದಿಂದ ತಮ್ಮ ವಿರಾಟ್-ಸಮ್ರಾಟ್-ಪ್ರತಿಭೆಯಿಂದ ಅಮೇರಿಕೆಯ

ಮೇಲೆ ವರ್ಚಸ್ಸನ್ನು ಬೀರುವವರಿದ್ದರು.

೧೮೯೩ರ ಸಪ್ಟಂಬರ್ ಹನ್ನೊಂದನೆಯ ದಿನ ಸಮ್ಮೇಲನದ ಮೊದಲನೆಯ ಅಧಿವೇಶನದ ಆರಂಭ. ಮಧ್ಯದಲ್ಲಿ ಕಾರ್ಡಿನಲ್ ಗಿಬನ್ಸ ವಿರಾಜಮಾನರಾಗಿದ್ದರು. ಅವರ ಸುತ್ತೆಲ್ಲ ಎಡಬಲದಲ್ಲಿ ಪೂರ್ವಪಶ್ಚಿಮದಿಂದ ಬಂದ ಪ್ರತಿನಿಧಿಗಳು ಕುಳಿತಿದ್ದರು. ಬ್ರಹ್ಮಸಮಾಜದ ಧುರೀಣ ಪ್ರತಾಪಚಂದ್ರ ಮುಝುಮ್‌ದಾರ್- ವಿವೇಕಾನಂದರ ಹಳೆಯ ಗೆಳೆಯರು, ಮುಂಬಯಿಯ ನಗರಕರರ ಜೊತೆಯಲ್ಲಿ ಭಾರತೀಯ ಆಸ್ತಿಕ್ಯವಾದಿಗಳ ಪರವಾಗಿ ಬಂದಿದ್ದರು-ಸಿಹಂಲದ್ವೀಪದ ಬೌದ್ಧರ ಪರವಾಗಿ ಧರ್ಮಪಾಲಕರು, ಜೈನರ ಪರವಾಗಿ ವೀರಚಂದ್ ಗಾಂಧಿ, ಥಿಯಾಸಾಫಿಕಲ್ ಸೊಸಾಯಿಟಿಯ ಪರವಾಗಿ ಆನೀ ಬೇಝುಂಟರ ಕೂಡ ಚಕ್ರವರ್ತಿ, ಅವರೆಲ್ಲರ ಮಧ್ಯದಲ್ಲಿ ಕುಳಿತ ಆ ತರುಣ ಬೈರಾಗಿ ಯಾರ ಪರವಾಗಿಯೂ ಇರದಿದ್ದರೂ, ಎಲ್ಲರ, ಅಖಂಡ ಭಾರತದ ಪರವಾಗಿ, ಯಾವ ಮತಪಂಥಕ್ಕೂ ಹೊಂದದೆ ಬಂದು, ನೆರೆದ ಸಾವಿರಾರು ಜನರ ಕಣ್ಮನಗಳಿಗೆ ಕೌಸ್ತುಭಮಣಿಯಾಗಿದ್ದರು. ಅವರ ಮೋಹಕ ಮುಖಮುದ್ರೆ, ಭವ್ಯ ನಿಲುವು, ಮೆರುಗುವ ವೇಷಭೂಷಣ-ಇವೆಲ್ಲವುಗಳಿಂದ ಎಲ್ಲಿಂದಲೋ ಊರ್ಧ್ವಲೋಕದಿಂದ ಬಂದಿಳಿದ ಅಮಾನುಷ ವ್ಯಕ್ತಿಯಂತೆ ಕಂಗೊಳಿಸಿದರು ವಿವೇಕಾನಂದರು!

ಅವರ ಮೈ ಜುಮ್ಮೆಂದಿತು! ಅದನ್ನೇನು ಅವರು ಬಚ್ಚಿಡಲಿಲ್ಲ. ಇಂಥ ಜನಸಮುದಾಯದ ಎದುರಿನಲ್ಲಿ ಎದ್ದು ನಿಂತು ಮಾತನಾಡುವ ಮೊದಲನೆಯ ಸಂದರ್ಭವದು. ಒಬ್ಬೊಬ್ಬರ ಹೆಸರು ಹೇಳುತ್ತಲೆ ಪ್ರತಿನಿಧಿಗಳು ಪದ್ಧತಿಯಂತೆ ಬಂದು ತಮ್ಮ ಪರಿಚಯವನ್ನು ಸಭೆಗೆ ತಾವೇ ಮಾಡಿಕೊಡುತ್ತಿದ್ದರು. ಘಂಟೆಯ ಮೇಲೆ ಘಂಟೆ ಸಂದರೂ, ಸಾಯಂಕಾಲದ ವರೆಗೂ, ವಿವೇಕಾನಂದರು ತಮ್ಮ ಸರತಿಯಮಾತನ್ನೆತ್ತಲಿಲ್ಲ.

ಆದರೆ ಕೊನೆಗೊಮ್ಮೆ ಎದ್ದು ನಿಂತಾಗ ಮಾತ್ರ ಅವರ ಮಾತು

ಉರಿನಾಲಗೆಯಂತೆ ಸಿಡಿದೆದ್ದಿತು. ನಿಸ್ತೇಜ ಪ್ರವಚನಗಳ ವಾತಾವರಣದ ಮರುಭೂಮಿಯಲ್ಲಿ ಅವರ ಮಿಂಚಿನ ಬಳ್ಳಿಯಂಥ ಮಾತು ನೆರೆದವರೆಲ್ಲರ ಎದೆಗಳಲ್ಲಿ ಉರಿಬೆಳಕು ಬೀರಿತು !

"ಅಮೇರಿಕೆಯ ಅಕ್ಕತಂಗಿಯರಾ ! ಅಣ್ಣ ತಮ್ಮಂದಿರಾ !........" ಎಂಬ ಆರಂಭದ ಸರಲ ನುಡಿ ಅವರ ಬಾಯಿಂದ ಹೊರಹೊಮ್ಮುತ್ತಲೆ ನೂರಾರು ಜನ ಕುಳಿತಲ್ಲಿಂದ ಕುಣಿದೆದ್ದು ಹರ್ಷೋದ್ರೇಕದಿಂದ ಚಪ್ಪಾಳೆ ತಟ್ಟಿದರು ! "ಅದೆಲ್ಲ ತಮಗಾಗಿಯೇ ಇರುವುದೇ ?"–ಎಂದು ಅಚ್ಚರಿಯಾಯಿತು ವಿವೇಕಾನಂದರಿಗೆ. ಸಮ್ಮೇಲನದ ಶುಷ್ಕ ಉಪಚಾರದ ಪರದೆಯನ್ನು ಹರಿದೊಗೆದು ನಿಂತವರೆಂದರೆ ಅವರೇ ಎಲ್ಲರಿಗೂ ಮೊದಲು. ತೆರೆದ ಹೃದಯದಿಂದ ಹೊರಹೊಮ್ಮುವ ಇಂಥ ಮಾತಿಗಾಗಿ ಕಾದಿದ್ದಿತು ಆ ಜನಜಂಗುಳಿ. ಮತ್ತೆ ನಿಃಶಬ್ದ ! ಅತ್ಯಂತ ಪ್ರಾಚೀನ ವೇದ ಸಂಪ್ರದಾಯದ ಸನ್ಯಾಸಿಸಂಘದ ಪರವಾಗಿ ಆ ಅತ್ಯಂತ ಅರ್ವಾಚೀನ ರಾಷ್ಟ್ರವನ್ನು ಅವರು ಸ್ವಾಗತಿಸಿದರು. ಹಿಂದೂ ಧರ್ಮ ಸಕಲ ಧರ್ಮಗಳ ಮಹಾತಾಯಿ ಎಂದು ತಿಳಿಸಿ ಹೇಳಿದರು.

"ಪರಸ್ಪರರನ್ನು ಅರಿಯಿರಿ. ಅರಿತು ಅಪ್ಪಿಕೊಳ್ಳಿರಿ ! " ಎಂಬ ಅದರ ದ್ವಿವಿಧ ಸಂದೇಶವನ್ನು ಸಾರಿದರು. ಧರ್ಮಗ್ರಂಥಗಳಿಂದ ಎರಡು ಶ್ಲೋಕಗಳನ್ನು ಘೋಷಿಸಿದರು !

"ಯಾವನೇ ಆಗಲಿ, ಯಾವುದೇ ದಾರಿಯಿಂದ ಬರಲಿ, ನಾನು ಅವನನ್ನು ಸೇರುವೆನು."

"ಎಲ್ಲರೂ ಸಾಗಿದ ಬೇರೆ ಬೇರೆ ದಾರಿ ಕೊನೆಗೆ ನನ್ನಲ್ಲಿ ಸೇರುತ್ತವೆ."

ಉಳಿದ ಎಲ್ಲ ಉಪನ್ಯಾಸಕರಲ್ಲಿ ಪ್ರತಿಯೊಬ್ಬನು ತನ್ನ ದೇವನನ್ನು ತನ್ನ ಪಂಥದ ದೇವನನ್ನು ಕುರಿತೇ ಮಾತನಾಡಿದನು. ಆದರೆ ಅವರು–ಕೇವಲ ವಿವೇಕಾನಂದರು ಮಾತ್ರ—ಅವರೆಲ್ಲರ ದೇವರನ್ನು ಕುರಿತು ಮಾತನಾಡಿದರು. ವಿಶ್ವರೂಪ ಪರಮಾತ್ಮನಲ್ಲಿ ಎಲ್ಲರ ಎಲ್ಲ ದೇವರನ್ನು ಕಂಡರು, ತೋರಿಸಿದರು. ಬಂಧನಗಳನ್ನೆಲ್ಲ ಮುರಿದಿಕ್ಕಿ ಮೀರಿ ತಮ್ಮ

ಶಿಷ್ಯಶ್ರೇಷ್ಠರ ಬಾಯಿಂದ ಶ್ರೀ ರಾಮಕೃಷ್ಣರು ಸಾರಿದ ಸಂದೇಶವದು. ಸರ್ವಧರ್ಮಸಮ್ಮೇಲನ ಆ ತರುಣ ಉಪನ್ಯಾಸಕರನ್ನು ಮನವಾರೆ ಅಭಿನಂದಿಸಿತು.

ಮುಂದೆ ದಿನದಿನವೂ ಅವರ ಉಪನ್ಯಾಸಗಳಾದವು, ಹತ್ತು ಹನ್ನೆರಡು ಸಲ. ಪ್ರತಿಯೊಂದು ಸಲ ಹೊಸ ತರ್ಕ, ಹೊಸ ಉದಾಹರಣೆ. ಆದರೆ ಅದೇ ದೃಢವಾದ ಶ್ರದ್ಧೆಯ ಶಕ್ತಿ. ಕಾಡು ಜನರ ಪರಂಪರಾಗತ ಧರ್ಮಾಂಧತೆಯಿಂದ ಆಧುನಿಕ ವಿಜ್ಞಾನಶಾಸ್ತ್ರದ ತತ್ವಪ್ರತಿಪಾದನೆಯ ವರೆಗೂ ನಡೆದು ಬಂದ ಎಲ್ಲ ವಾದಗಳನ್ನು ಒಂದಾಗಿಸುವ ದಿಕ್ಕಾಲಾತೀತ ವಿಶ್ವದರ್ಮದ ತತ್ವವನ್ನು ಮತ್ತೆ ಮತ್ತೆ ಪ್ರತಿಪಾದಿಸಿದರು. ಆ ಎಲ್ಲ ಪಂಥಗಳ ಏಕತ್ವವನ್ನು ಪ್ರತಿಪಾದಿಸಿದರು. ಯಾವ ಮತವೂ ಆ ಏಕತ್ವದಲ್ಲಿ ನಂದಿ ಹೋಗಬೇಕಾಗಿಲ್ಲ. ಪ್ರತಿಯೊಂದು ಪಂಥವೂ ತನ್ನ ದಾರಿಯಿಂದ ತನ್ನ ಪ್ರಗತಿಯನ್ನು ಮಾಡಿಕೊಂಡು ಏಕತ್ವದಲ್ಲಿ ಸಮ್ಮಿಲನ ಹೊಂದಬೇಕಾಗುವದು. ಮಾನವನಲ್ಲಿ ಹುದುಗಿದ ದೇವ, ಮತ್ತು ಅನಂತ ಉತ್ಕ್ರಾಂತಿಯನ್ನು ಸಾಧಿಸುವ ಮಾನವನ ಸಾಮರ್ಥ್ಯ- ಇವನ್ನು ಬಿಟ್ಟು ಬೇರೊಂದು ಸಿದ್ಧಾಂತವೇ ಇಲ್ಲ.

"ಇಂಥದೊಂದು ಧರ್ಮವನ್ನು ಸಾರಿರಿ. ಎಲ್ಲ ರಾಷ್ಟ್ರಗಳು ಹಿಂಬಾಲಿಸುತ್ತವೆ. ಅಶೋಕನ ಧರ್ಮಸಮ್ಮೇಲನ ಬುದ್ಧಧರ್ಮದ ಸಮ್ಮೇಲನವಾಗಿತ್ತು. ಅದಕ್ಕೂ ಹೆಚ್ಚು ಸರಿಯಾದ ಗುರಿಯನ್ನು ಇಟ್ಟುಕೊಂಡರೂ ಅಕಬರನ ಧರ್ಮಸಮ್ಮೇಲನ ಕೇವಲ ನಡುಮನೆಯಲ್ಲಿ ನಡೆದ ಸಮ್ಮೇಲನವಾಯಿತು. ಆದರೆ ಪರಮಾತ್ಮ ಪ್ರತಿಯೊಂದು ಧರ್ಮದಲ್ಲಿ ಇರುವನೆಂದು ದಿಗ್ದೇಶಗಳಿಗೆಲ್ಲ ಸಾರುವ ಸರತಿ ಅಮೇರಿಕೆಗೆ ಬಂದಿತು.

"ಯಾವನು ಹಿಂದುಗಳ ಬ್ರಹ್ಮನೋ, ಝರತುಸ್ತ್ರರ ಅಹುರಾಮಝ್ದಾನೋ, ಬೌದ್ಧರ ಬುದ್ಧನೋ, ಯಹೂದಿಯರ ಜೆಹೋವಾನೋ, ಕ್ರಿಶ್ಚನ್ನರ ಆಕಾಶದಲ್ಲಿಯ ತಂದೆಯೋ, ಅವನು ನಿಮಗೆ ಸಾಮರ್ಥ್ಯವನ್ನು ದಯಪಾಲಿಸಲಿ...........ಕ್ರಿಶ್ಚನ್ನನು ಹಿಂದೂ ಅಥವಾ ಬೌದ್ಧ

ನಾಗಬೇಕಾಗಿಲ್ಲ. ಹಿಂದುವು ಬೌದ್ಧ ಅಥವಾ ಕ್ರಿಶ್ಚನ್ನನಾಗಬೇಕಾಗಿಲ್ಲ. ಉಳಿದವರ ತತ್ವಸಾರವನ್ನು ಅಂಗೀಕರಿಸಿ, ತನ್ನ ವ್ಯಕ್ತಿತ್ವವನ್ನು ಕಾಯ್ದು ಕೊಂಡು, ಪ್ರತಿಯೊಬ್ಬನು ತನ್ನ ಹಾದಿಯಿಂದಲೇ ತನ್ನ ಗುರಿಯನ್ನು ಸಾಧಿಸಬೇಕಾಗಿದೆ...........ಪಾವನತೆ, ನಿರ್ಮಲತೆ, ಇವು ಯಾವುದೊಂದು ಧರ್ಮದ ಗುತ್ತಿಗೆಯ ಸೊತ್ತಲ್ಲೆಂದು, ಪ್ರತಿಯೊಂದು ಧರ್ಮ ಮಹಾತ್ಮ-ರಾದ ಸ್ತ್ರೀಪುರುಷರಿಗೆ ಜನ್ಮ ಕೊಟ್ಟಿದೆಯೆಂದು ಸರ್ವಧರ್ಮಸಮ್ಮೇಲನ ಧಾರಾಳವಾಗಿ ಸಾರಿದೆ. ಅಡ್ಡಬರುವ ಎಡರುತೊಡರನ್ನೆಲ್ಲ ತುಂಡರಿಸಿ, ಪ್ರತಿಯೊಂದು ಧರ್ಮಧ್ವಜೆಯ ಮೇಲೆ ಬರೆಯಲಾಗುವುದು!-"ಹೋರಾಡದಿರು, ನೆರವಾಗು! ನಶಿಸಿ ನಂದದಿರು! ಸೇರಿ ಒಂದಾಗು! ಸಿಡಿದು ಸರಿಯದಿರು! ಶಾಂತಿಯಿಂದ ಸಮರಸನಾಗು!"

ಆ ಮಹಾಪ್ರಭಾವಶಾಲಿಯಾದ ಸಂದೇಶ ಅತ್ಯಂತ ಪರಿಣಾಮವನ್ನು ಮಾಡಿತು. ಸಮ್ಮೇಲನದ ಅಧಿಕೃತ ಪ್ರತಿನಿಧಿಗಳ ತಲೆಯ ಮೇಲೆ ಹಾಯ್ದು ಎಲ್ಲರನ್ನೂ ಸೋಂಕಿ ಹೊರಗಿನ ವಿಚಾರವಿಶ್ವವನ್ನು ಭೇದಿಸಿತು. ವಿವೇಕಾನಂದರ ಕೀರ್ತಿ ದಿಗಂತದಲ್ಲಿ ಹಬ್ಬಿತು. ಭಾರತದ ಬೆಳಕು ಹರಡಿತು. ಅಮೇರಿಕೆಯ ವೃತ್ತಪತ್ರಗಳು ಉದ್ಘೋಷಿಸಿದವು:

"ಸರ್ವಧರ್ಮಸಮ್ಮೇಲನದಲ್ಲಿ ವಿವೇಕಾನಂದರು ನಿಸ್ಸಂದೇಹವಾಗಿಯೂ ಸರ್ವ-ಶ್ರೇಷ್ಠರು! ಇಂಥವರ ವಿದ್ಯಾಸಂಪನ್ನ ರಾಷ್ಟ್ರಕ್ಕೆ ಧರ್ಮಪ್ರಸಾರಕರನ್ನು ಕಳಿಸುವುದು ಅದೆಂಥ ಮೂರ್ಖತನ ಎಂಬುದನ್ನು ಅವರ ಮಾತು ಕೇಳಿ ನಾವು ಮನಗಂಡೆವು".

— ದಿ ನ್ಯೂಯಾರ್ಕ ಹೆರಾಲ್ಡ್

"ಸಮ್ಮೇಲನದಲ್ಲಿ ಅವರು ಎಲ್ಲರ ಕಣ್ಮಣಿಯಾಗಿದ್ದರು. ವೇದಿಕೆಯ ಮೇಲೆ ಎದ್ದು ಅತ್ತಿತ್ತ ಹೆಜ್ಜೆಯಿಟ್ಟರೆ ಸಾಕು. ಎಲ್ಲೆಲ್ಲೂ ಹರ್ಷೋದ್ರೇಕ. ಅಧಿವೇಶನಗಳಲ್ಲಿ ಜನ ಬೆಸರಿಯದಂತೆ ಹುರುಪುಗೊಳಿಸಲು ಒಂದೇ ಹಾದಿ! 'ಕೊನೆಗೆ ವಿವೇಕಾನಂದರ ಉಪನ್ಯಾಸ'- ಎಂದು ಹೇಳಿದರೆ

ಸಾಕು!"

—ದಿ ಬಾಸ್ಟನ್ ಈವ್ನಿಂಗ್ ಪೋಸ್ಟ್

ವಿಜಯದುಂದುಭಿ ಮೊಳಗಿತು! ಆದರೆ ಅದರ ನಾದ ಕ್ರಿಸ್ತೀ ಧರ್ಮಪ್ರಸಾರಕರ ಕಿವಿಯಲ್ಲಿ ಕರ್ಕಶವಾಯಿತು. ಅವರಲ್ಲಿ ದುರ್ಧರ ಮತ್ಸರ ಉರಿದೆದ್ದಿತು. ಅತ್ಯಂತ ಹೀನ ಅಸ್ತ್ರಗಳನ್ನು ಸಹ ಉಪಯೋಗಿಸಲು ಅವರು ಹಿಂದುಮುಂದು ನೋಡಲಿಲ್ಲ. ಉಳಿದ ಹಿಂದೂ ಪ್ರತಿನಿಧಿಗಳ ಮಾತ್ಸರ್ಯವೇನು ಕಡಿಮೆಯಿರಲಿಲ್ಲ. ಹೆಸರು ದೆಸೆಯಿಲ್ಲದ ಈ "ಸಂಚಾರೀ ಸನ್ಯಾಸಿ" ತಮ್ಮನ್ನು ಮರೆಯಲ್ಲಿ ನೂಕಿದನಲ್ಲ! ಎಂದರವರು. ವಿವೇಕಾನಂದರ ತೀಕ್ಷ್ಣ ಟೀಕೆಗೆ ಗುರಿಯಾದ ಥಿಯಾಸಫಿಯವರಂತೂ ಅವರನ್ನು ಎಂದಿಗೂ ಕ್ಷಮಿಸಲಿಲ್ಲ.

ಆದರೆ ಮೂಡುವ ನೇಸರನ ಹೊಂಬೆಳಗು ಕತ್ತಲೆಯ ಪಾಳಯವನ್ನೆಲ್ಲ ಚೆದರಿಸಿತು! 'ವಿವೇಕಾನಂದ'! 'ವಿವೇಕಾನಂದ'! ಎಲ್ಲೆಲ್ಲೂ 'ವಿವೇಕಾನಂದೇ ವಿವೇಕಾನಂದ'!

ಈ ಗೆಲುವಿನಿಂದ ಅವರಿಗೆ ಏನೆನಿಸಿತು? 'ಅಯ್ಯೋ!' ಎಂದು ಕಂಬನಿಗರೆದರು! ಭಗವಂತನಲ್ಲಿ ಲೀನವಾದ ಬಂಧನವಿಲ್ಲದ ಏಕಾಂತ ಜೀವನ ಇಂದಿಗೆ ಕೊನೆಗಂಡಿತೆಂದು ಸಂಚಾರಿ ಸನ್ಯಾಸಿ ಕಂಡರು. ಅವರ ತಳಮಳ ಕಂಡು ಅರಿಯದ, ಕನಿಕರ ಪಡದ ನಿಜವಾದ ಆತ್ಮಾರ್ಥಿಗಳೆಲ್ಲಿ?............ಆದರೆ ಅವರೇ ಬಯಸಿದರಲ್ಲವೇ ಇದನ್ನು?........ ಅಥವಾ ಈ ಕಾರ್ಯಕ್ಕೆ ಕಂಕಣ ಕಟ್ಟಬೇಕೆಂದು ಅಜ್ಞೇಯ ಶಕ್ತಿಯ ಇಚ್ಛೆಯಲ್ಲವೇ? ಆದರೆ ಅವರ ಅಂತರ್ವಾಣಿ ಎಂದಿಗೂ ಕೂಗುತ್ತಿದ್ದಿತು: "ಇದೆಲ್ಲ ಸಾಕು, ಭಗವಂತನಲ್ಲಿ ಮಗ್ನನಾಗು!" ಒಂದು ಕೂಗಿಗೆ ಕಿವಿ ಮುಚ್ಚದ ಹೊರತು ಇನ್ನೊಂದು ಕೂಗಿಗೆ ಕಿವಿ ತೆರೆಯುವುದು ಶಕ್ಯವಿಲ್ಲ. ತೋರಿಕೆಯಲ್ಲಿ ವಿರೋಧಿಯಾಗಿ ಕಂಡರೂ ನಿಜವಾಗಿ ಸ್ವಾಭಾವಿಕವಾದ ಈ ದ್ವಿವಿಧ ತಳಮಳವನ್ನು ಅಲ್ಲೋಲಕಲ್ಲೋಲದಲ್ಲಿ ಹೊಯ್ದಾಡಿ ಹೋರಾಟವಾಡಿದ ಇವರ ಆತ್ಮ ಅನುಭವಿಸಬೇಕಾಯಿತು. ಒಂದೇ

ಒಂದು ವಿಚಾರವನ್ನು ತಲೆಯಲ್ಲಿ ತುಂಬಿಕೊಂಡು, ಅಕಿಂಚನತೆಯೇ ಅತ್ಯವಶ್ಯ ಸರ್ವಶ್ರೇಷ್ಠ ತ್ಯಾಗವೆಂದು ಜಂಭ ಕೊಚ್ಚುತ್ತ, ಸಮನ್ವಯ ಸಮರಸತೆಗಳನ್ನು ಸಾಧಿಸಬೇಕೆನ್ನುವ ವಿಭೂತಿಗಳ ಮಹಾ ಹೋರಾಟದ ತಳಮಳಕ್ಕೆ ಹುಚ್ಚಾಟವೆಂದು ದ್ವಿಧಾಭಾವವೆಂದು ಹೆಸರಿಡುವ ಸಂಕುಚಿತ ಜೀವಿಗಳಿಗೆ ಈ ಹೊಯ್ದಾಟ, ಈ ಹೋರಾಟ ಅರ್ಥವಾಗದು. ತಳಮಳ ತಿಳಿಯದು. ಇಂಥ ಮತ್ಸರಗ್ರಸ್ತ ಟೀಕೆ ವಿವೇಕಾನಂದರ ಬೆನ್ನು ಎಂದೂ ಬಿಡಲಿಲ್ಲ. ಆದರೆ ಉದಾತ್ತ ಅಹಂಕಾರದ ಆವೇಶದಿಂದ ಅವರು ಮಾತ್ರ ಇಂಥ ಟೀಕೆಯನ್ನು ಎಂದಿಗೂ ಕ್ಷಮಿಸಲಿಲ್ಲ, ಸಿಕ್ಕಲ್ಲಿ ಸಿಗಿದರು.

ಆದರೆ ಈ ಸಲದ ಹೊಯ್ದಾಟ ಕೇವಲ ಆತ್ಮಿಕವೇ ಆಗಿರಲಿಲ್ಲ. ಆ ಪರಿಸ್ಥಿತಿಯಲ್ಲಿಯೇ ಇಂಥ ಹೊಯ್ದಾಟ–ಹೋರಾಟ–ಹುದುಗಿದ್ದಿತು. ಆ ಗೆಲುವಿಗಿಂತ ಮುಂಚಿನಂತೆ ಅಥವಾ ಅದಕ್ಕೂ ಹೆಚ್ಚು. ಆ ಗೆಲುವಿನ ನಂತರ ಅವರ ಕರ್ತವ್ಯ ಕಠಿಣವಾಯಿತು. ಮೊದಲು ದಾರಿದ್ರ್ಯಕ್ಕೆ ದಿಗ್ಬಲಿಯಾದ ಅವರು ಈಗ ಸಿರಿಯ ಪೆಂಪಿನ ಸೆರೆಯಲ್ಲಿ ಸಿಲ್ಕುವ ಸಂಕಟ ಬಂದಿತು. ಅಮೇರಿಕೆಯ ಜಂಭಗಾರರೆಲ್ಲ ಸುತ್ತು ಸುಳಿದು ಅವರನ್ನು ವಿಲಾಸಲಾಲಸೆಯ ಪ್ರಮಾದಗಳಲ್ಲಿ ಮುಳುಗಿಸುವ ಸಾಹಸ ಮಾಡಲೆಳಸಿದರು. ಆ ಸಿರಿಯ ಹಿರಿತನ ವಿವೇಕಾನಂದರಿಗೆ ಹೇಸಿಕೆಯಾಯಿತು. ಹಸಿವೆಯಿಂದ ಸಾಯುವ ತಮ್ಮ ಜನದ ನೆನಪಾಗುತ್ತಲೆ ಇರುಳಿನಲ್ಲಿ ಮಲಗುವ ಕೋಣೆಯಲ್ಲಿ 'ಅಯ್ಯೋ !' ಎಂದು ನಿರಾಸೆಯಿಂದ ತಳಮಳಿಸಿ ನೆಲದಮೇಲೆ ಹೊರಳಾಡಿ ಕೂಗಿಕೊಂಡರು :

"ತಾಯೀ ! ಈ ಕೀರ್ತಿ ನನಗೇಕಮ್ಮ?– ನನ್ನ ಜನ ಕಷ್ಟದಲ್ಲಿ ನರಳುತ್ತಿರುವಾಗ !........"

ತಮ್ಮ ಅಭಾಗಿ ಭಾರತದ ಸೇವೆಗಾಗಿ ಮತ್ತು ಅಮೇರಿಕೆಯ ಸಿರಿವಂತರ ಕೃಪಾಛತ್ರದಿಂದ ದೂರಾಗಬೇಕೆಂದು ಒಂದು ಉಪನ್ಯಾಸ ಸಂಸ್ಥೆಯ ಕಾರ್ಯಕ್ರಮವನ್ನು ಕೈಕೊಂಡರು. ಚಿಕ್ಯಾಗೊ, ಇಲೋವ್ಹಾ,

ದೆಸ್ ಮೊಯಿನೇಸ್, ಸೇಂಟ್ ಲೂಯಿ, ಮಿನ್ನಿಪೊಲಿಸ್, ಡೆಟ್ರಾಯಿಟ್, ಬಾಸ್ಟನ್, ಕೆಂಬ್ರಿಜ್, ಬಾಲ್ಟಿಮೋರ್, ವಾಶಿಂಗ್ಟನ್, ನ್ಯೂಯಾರ್ಕ ಮುಂತಾದಲ್ಲೆಲ್ಲ ಸಂಚರಿಸಿ ಉಪನ್ಯಾಸ ಕೊಡಲೊಪ್ಪಿದರು. ಆದರೆ, ಇದೊಂದು ವಿಪರೀತ ಸಾಹಸವಾಯಿತು. ಉಳಿದ ಹಲವು ಉಪನ್ಯಾಸಕ ರಂತೆ, ಅಮೇರಿಕೆಯ ಜನಜಂಗುಳಿಯ ಎದುರಿನಲ್ಲಿ ಮುಖಸ್ತುತಿಯ ಧೂಪವನ್ನು ಹೊತ್ತಿಸಿ ಹೊಗಳಿಕೆ ಮತ್ತು ಡಾಲರಗಳನ್ನು ಗಳಿಸುವ ಹವ್ಯಾಸ ವಿವೇಕಾನಂದರನ್ನು ಸೋಂಕುವುದೆಂದು ತಿಳಿಯುವುದು ತೀರ ತಪ್ಪು !

ಆ ತರುಣ ಪ್ರಜಾಸತ್ತೆಯ ಪ್ರಭಾವವನ್ನು ಕಂಡು ಮೊದಮೊದಲು ಅವರ ಮನಸ್ಸಿನಲ್ಲಿ ಮೈದೊರಿದ ಗೌರವಭಾವನೆ ಅಷ್ಟರಲ್ಲಿ ಬಾಡಿದ್ದಿತು. ಅಲ್ಲಿಯ ಪಶುತ್ವ, ನರಾಧಮತ್ವ, ಪರ್ವತಪ್ರಾಯ ಅಜ್ಞಾನ, ಸಂಕುಚಿತ ಚಿತ್ತವೃತ್ತಿ, ಆಕುಂಚಿತ ಧರ್ಮಾಂಧತೆ, ಭಿನ್ನ ವಿಚಾರ ಭಿನ್ನ ಆಚಾರ ಭಿನ್ನ ಆದರ್ಶಗಳ ಬೆನ್ನು ಹತ್ತಿದ ಬೇರೆ ಜನಾಂಗಗಳ ವಿಷಯದಲ್ಲಿ ಅಸಹನೆ, ತಾವೇ ಶ್ರೇಷ್ಠರೆಂಬ ಕೀಳು ಆಹಂಕಾರದ ಭಾವನೆ–ಇವ ನ್ನೆಲ್ಲ ಕಂಡು ವಿವೇಕಾನಂದರು ಕನಲಿ ಕಿಡಿಕಿಡಿಯಾದರು!....ತಾಳ್ಮೆ ತಪ್ಪಿ ಹೋಯಿತು. ಮುಚ್ಚುಮರೆ ಮರೆತು ಬಿಟ್ಟರು. ಪಾಶ್ಚಾತ್ಯ ಸಂಸ್ಕೃ ತಿಯ ದುರ್ಗುಣಗಳನ್ನು, ಪಾಪಗಳನ್ನು, ಅತ್ಯಾಚಾರಗಳನ್ನು, ದಾಳಿ ಗಾರಿಕೆಯನ್ನು, ವಿನಾಶಕತೆಯನ್ನು ಖಂಡಿಸಿದರು. ತಮಗೆ ವಿಶೇಷವಾಗಿ ಸುಂದರವೆನಿಸಿದ ತಮ್ಮ ಮೆಚ್ಚಿನ ಧಾರ್ಮಿಕ ವಿಷಯವನ್ನೆತ್ತಿ ಮಾತ ನಾಡಬೇಕೆಂದು ಬಾಸ್ಟನ್‌ದಲ್ಲಿ ಎದ್ದು ನಿಂತರು. ಆದರೆ ಸುತ್ತೆಲ್ಲ ಕಣ್ಣು ಅರಳಿಸಲು ಕಂಡದ್ದೇನು ? ಸ್ವಾರ್ಥಸಾಧಕ, ಕಪಟನಾಟಕಕುಶಲ, ಕೃತ್ರಿಮ ಕ್ರೂರ ಸಂಸಾರಿಗರ ಶ್ರೋತೃವೃಂದ ! ಇಂಥವರ ಎದುರಿನಲ್ಲಿ ತಮ್ಮ ಮನೋಮಂದಿರದ ಪಾವನ ಗರ್ಭಗುಡಿಯನ್ನು ತೆರೆಯಲು ಒಪ್ಪದೆ, ಇಂಥ ನಾಯಿನರಿಗಳಿಂದ ಪ್ರದರ್ಶಿತವಾದ ಸಂಸ್ಕೃತಿಯನ್ನು ದಯೆಮಾಯೆಯಿಲ್ಲದೆ ಸಿಗಿದರು ! ಅದೆಂಥ ಘೋರ ಖಂಡನೆ ! ಕೂಗೆ

ಬ್ಬಿಸಿ ನೂರಾರು ಜನ ಎದ್ದು ಹೋದರು! ವೃತ್ತಪತ್ರಗಳು ಬೆಂಕಿ ಬೆಂಕಿಯಾದವು!

ಸುಳ್ಳು ಕ್ರಿಸ್ತೀಧರ್ಮ ಮತ್ತು ಧರ್ಮದ ಹೆಸರಿನಲ್ಲಿ ಹಬ್ಬಿದ ಜಂಭಗಾರಿಕೆ ಅವರ ಪ್ರಖರ ಟೀಕೆಗೆ ಗುರಿಯಾದವು:

"ಇರಲಿ ನಿಮ್ಮ ಹೊಗಳಿಕೆ! ಇರಲಿ ನಿಮ್ಮ ಜಂಭಗಾರಿಕೆ! ಕತ್ತಿಯ ನೆರವಿಲ್ಲದೆ ನಿಮ್ಮ ಕ್ರಿಸ್ತೀ ಧರ್ಮ ಎಲ್ಲಿಯಾದರೂ ಹಬ್ಬಿದೆಯೆ? ಸುಖವಿಲಾಸದ ಹೆಸರಿನಲ್ಲಿ ನೀವು ನಿಮ್ಮ ಧರ್ಮವನ್ನು ಹಬ್ಬಿಸುತ್ತಿರುವಿರಿ. ಈ ದೇಶದಲ್ಲಿ ನಾನು ಕೇಳಿದುದೆಲ್ಲ ಕಪಟ. ಈ ಎಲ್ಲ ಸಂಪತ್ತು, ಈ ಎಲ್ಲ ಆಸುರೀ ಸಂಪತ್ತು ಕ್ರಿಸ್ತನಿಂದಲೇ ಬಂದುದೇ? 'ಕ್ರಿಸ್ತ! ಕ್ರಿಸ್ತ!' ಎಂದು ಕೂಗುವವರು ಸಂಪತ್ತಿನ ಹೊರತಾಗಿ ಬೇರೇನೂ ಸಂಚಯ ಮಾಡುತ್ತಿಲ್ಲ. ನಿಮ್ಮ ನಡುವೆ ತಲೆ ಆನಿಸಲು ಕ್ರಿಸ್ತನಿಗೆ ಒಂದು ಕಲ್ಲು ಸಹ ಸಿಗದು!....ನೀವು ಕ್ರಿಸ್ತೀಯರಲ್ಲ!....ಕ್ರಿಸ್ತನತ್ತ ಮರಳಿರಿ!"

ಇಂಥ ಹೀಯಾಳಿಸುವ ಬೋಧೆಗೆ ಒಂದೇ ಒಂದು ಉತ್ತರ ದೊರೆಯಿತು. ಸಿಟ್ಟು ಸಿಡಿದು ಉರಿದೆದ್ದಿತು. ಹೆಜ್ಜೆ ಹೆಜ್ಜೆಗೆ ಪ್ರಖರ ಟೀಕೆ ಹೊಲಸು ಆರೋಪಗಳಿಂದ ಪಾದ್ರಿಗಳ ತಂಡವೊಂದು ಅವರ ಬೆನ್ನು ಹತ್ತಿತು. ಅಮೇರಿಕೆಯಲ್ಲಿಯ ಅವರ ಬಾಳಿನ ಮತ್ತು ನಡತೆಯ ವಿಷಯದಲ್ಲಿ ಕೀಳಾದ ದುಷ್ಕೀರ್ತಿಕರವಾದ ಸುದ್ದಿಗಳನ್ನು ಬೀರಿದರು. ದುರುದ್ದೇಶಪ್ರೇರಿತರಾದ ಪಾದ್ರಿಗಳಿಂದ ಹುಟ್ಟಿಸಲಾದ ನೀಚ ಆರೋಪಗಳನ್ನು ಹಬ್ಬಿಸುವುದರಲ್ಲಿ ವಿವೇಕಾನಂದರ ಕೀರ್ತಿಯನ್ನು ಕಂಡು ಮತ್ಸರಗ್ರಸ್ತರಾದ ಪ್ರತಿಸ್ಪರ್ಧಿ ಸಂಸ್ಥೆಗಳ ಪ್ರತಿನಿಧಿಗಳೂ ಅಷ್ಟೇ ನಾಚಿಕೆಗೇಡಿತನದ ಕೆಲಸವನ್ನು ಮಾಡಿದರು. ಸನಾತನ ಹಿಂದೂ ಧರ್ಮಪರಂಪರೆಯಂತೆ ವಿವೇಕಾನಂದರು ಅಮೇರಿಕೆಯಲ್ಲಿ ತಮ್ಮ ನಿತ್ಯ ನಿಯಮಗಳನ್ನು ಚಾಚೂ ತಪ್ಪದೆ ಪಾಲಿಸುತ್ತಿರಲಿಲ್ಲ. ಈ ಕಾರಣದಿಂದ ಹೊಟ್ಟೆಕಿಚ್ಚಿನ ಹಿಂದುಗಳು ಕೊಟ್ಟ ಶಸ್ತ್ರಗಳನ್ನು ಹಿಡಿದು ಕ್ರಿಸ್ತೀ ಪಾದ್ರಿಗಳು ಈ ಸ್ವತಂತ್ರವೃತ್ತಿಯ ಸನ್ಯಾಸಿಯನ್ನು ಹಿಂದು

ಸ್ತಾನದಲ್ಲಿ ಹೀಯಾಳಿಸಿದರು. ಕುಚೇಷ್ಟೆಯಿಂದ ಹಳಿದರು. ತಮ್ಮ ವಿಷಯದಲ್ಲಿ ಕಲಕುನೀರಿನ ಕಲಂಕದ ತೆರೆಗಳನ್ನೆಬ್ಬಿಸಿ ತಮ್ಮ ಭಕ್ತರು (?) ಹಿಂದುಸ್ತಾನದಿಂದ ಮರಳಿ ಬರುತ್ತಿರುವರೆಂಬ ಸಮಾಚಾರವು ಅಂಜಂಜುತ್ತ ಅವರ ಶಿಷ್ಯರು ಬರೆದ ಪತ್ರಗಳಲ್ಲಿ ವಿವೇಕಾನಂದರಿಗೆ ಗೊತ್ತಾಯಿತು. ಹೇಸಿಕೆಯಾಯಿತು. ತಮ್ಮ ಮೋರೆ ಕಪ್ಪು ಮಾಡಬೇಕೆಂದು ಹೊರಟವರ ಮೋರೆಗೆ ಅವರು ಅದೆಂಥ ರೊಚ್ಚಿನಿಂದ ತಿರಸ್ಕಾರದಿಂದ ಕೆಸರನ್ನು ಎಸೆದರು !

ಅಮೇರಿಕೆಯಲ್ಲಿಯ ಅವರ ಸತ್ವಪರೀಕ್ಷೆಯನ್ನು ಅವರ ಒಬ್ಬ ಅಮೇರಿಕೆಯ ಶಿಷ್ಯರ–ಸ್ವಾಮೀ ಕೃಪಾಣಾನಂದರ– ಪತ್ರದಲ್ಲಿ ನೋಡಬಹುದು: "ಭೂತಪಿಶಾಚ, ಮಹಾತ್ಮಾ, ಪ್ರವಾದಿ ಮುಂತಾದವುಗಳಲ್ಲಿಯ ಮೂಢ ಶ್ರದ್ಧೆಯಿಂದ, ಮತ್ತು ಅಸಾಮಾನ್ಯ ಅದ್ವಿತೀಯ ಆತ್ಮಿಕ ಪವಾಡಗಳ ಅವಿಚಾರಿಯಾದ ಹಂಬಲದಿಂದ, ಧರ್ಮದ ಹೆಸರಿನಲ್ಲಿ ಮೂರ್ಖ ಅತ್ಯಾಚಾರ ಮಾಡುವ ಅರ್ಧಮರ್ಧ ಧಾರ್ಮಿಕ ಸಂಸ್ಥೆಗಳು ಇಲ್ಲಿ ಮನೆಮಾಡಿಕೊಂಡಿದ್ದವು. ಎಲ್ಲೆಲ್ಲಿಂದಲೋ ಏತೇತಕ್ಕೋ ಬಂದು ಸೇರಿಕೊಂಡವರ ಅಸಹ್ಯ ಆಶ್ರಯಸ್ಥಾನವಾಗಿತ್ತು ಈ ದೇಶ. ಮೊಟ್ಟಮೊದಲು ಈ ತಿಪ್ಪೆಯನ್ನು ಸಮೂಲ ಕಿತ್ತೊಗೆದು ಹಸನ ಮಾಡಬೇಕೆಂದೆನಿಸಿತು ವಿವೇಕಾನಂದರಿಗೆ."

ತಮ್ಮ ಮೊದಲಿನ ಉಪನ್ಯಾಸಗಳಿಗೆ ಕಿಕ್ಕಿರಿದು ಬರುವ ಕೆಲಸಗೇಡಿಗಳನ್ನು, ಕುಚೇಷ್ಟೆಗಾರರನ್ನು ಗೊಂದಲ ಎಬ್ಬಿಸುವವರನ್ನು, ಕಾಗೆಗೂಗೆಗಳನ್ನು ದಿಕ್ಕು ದಿಕ್ಕುಗಳಿಗೆ ಹೊಡೆದೋಡಿಸಿದರು. ಕೂಡಲೆ ಗೆಳೆತನದ, ವಿಶ್ವಾಸದ, ಹೆದರಿಸುವ ಮತ್ತು ಸುಲಿಯುವ ಹಲವು ಪತ್ರಗಳು ಸಂಚುಗಾರರಿಂದ ಕಿಡಿಗೇಡಿಗಳಿಂದ ಮತ್ತು ಧಾರ್ಮಿಕ ಜಂಭಗಾರರಿಂದ ಬಂದವು. ವಿವೇಕಾನಂದರ ಮನೋವೃತ್ತಿಯ ಮೇಲೆ ಏನು ಪರಿಣಾಮವಾಗಿರಬಹುದೆಂದು ಊಹಿಸುವುದು ಅನವಶ್ಯಕ. ಎಳ್ಳಷ್ಟೂ ಊರುಬನ್ನು ಅವರು ಸೈರಿಸರು. ಒಂದು ಪಂಥದ ವಿರುದ್ಧ ಇನ್ನೊಂದು

ಪಂಥ ಹೂಡುವ ಸಾಂಘಿಕ ಕಲಹವನ್ನು ಅವರು ತಿರಸ್ಕರಿಸಿದರು. ಅವರನ್ನು ತಮ್ಮ ಕಾರ್ಯಕ್ಕಾಗಿ ಉಪಯೋಗಿಸಬೇಕೆಂದು ಹವಣಿಸಿದ ಇಂಥ ಸಂಘಗಳನ್ನು ಸಾರ್ವಜನಿಕ ರೀತಿಯಿಂದ ಕೆಣಕಿ ಕೊಕ್ಕರಿಸುವ ಸಂಧಿಯನ್ನು ವಿವೇಕಾನಂದರು ಹಲವು ಸಲ ಸಾಧಿಸಿದರು.

ಆದರೆ ಈಗಲೇ ಇಲ್ಲಿಯೇ ಅಮೇರಿಕೆಯ ಗೌರವಕ್ಕಾಗಿ ಒಂದು ಮಾತನ್ನು ಒಪ್ಪಲೇ ಬೇಕು. ವಿವೇಕಾನಂದರ ನೈತಿಕ ಉಜ್ವಲತೆ, ತೇಜಸ್ವಿಯಾದ ಧ್ಯೇಯವಾದ, ನಿರ್ಭಯ ನಿಷ್ಠೆ- ಇವುಗಳಿಗೆ ಮನ ಸೋತು ದಿಕ್ಕುದಿಕ್ಕುಗಳಿಂದ ಬಂದ ಸಂರಕ್ಷಕರ ಮತ್ತು ಸಂಪೂಜಕರ ಶ್ರೇಷ್ಠ ತಂಡವೊಂದು ಬಂದು ಸೇರಿತು. ಮಾನವಕುಲದ ಪುನರುದ್ಧಾರಕ್ಕೆ ಸ್ವಾಮಿಯವರ ಅತ್ಯಂತ ಉತ್ಸಾಹಿ ಸಹಕಾರಿಗಳಾದ ಪಾಶ್ಚಾತ್ಯ ಶಿಷ್ಯರ ಮೊದಲನೆಯ ಗುಂಪು ಈ ತಂಡದಲ್ಲಿಯೇ ರೂಪಗೊಂಡಿತು.

# (೬) ಅಮೇರಿಕೆಯಲ್ಲಿ ಪ್ರವಚನ.

(ಮೂಲಪುಸ್ತಕದ ೪ ನೆಯ ಪ್ರಕರಣ "ವಿವೇಕಾನಂದರ ಪ್ರಥಮ ಸಂದರ್ಶನದ ಕಾಲದಲ್ಲಿಯ ಅಮೇರಿಕೆ" ಎಂದಿದೆ. ವಿವೇಕಾನಂದರು ಅಮೇರಿಕೆಗೆ ಹೋಗುವ ಕೆಲ ವರ್ಷಗಳ ಮುಂಚೆ ವಾಲ್ಟ್ ವ್ಹಿಟಮನ್, ಥೋರೋ, ಇಮರ್ಸನ್ ಇವರ ಅಭ್ಯಾಸ ಮತ್ತು ಪ್ರಯತ್ನದ ಫಲವಾಗಿ ಉಪನಿಷತ್, ಗೀತಾ ಮುಂತಾದ ಭಾರತೀಯ ದರ್ಶನಗ್ರಂಥಗಳ ಪರಿಚಯವು ಅಮೇರಿಕೆಗೆ ಆಗಿತ್ತೆಂಬುದನ್ನು ಆ ೪ನೆಯ ಪ್ರಕರಣದಲ್ಲಿ ವಿಸ್ತಾರವಾಗಿ ಕಾಣಿಸಿದೆ. ಆದರೆ ಆಗಿನ ಅಮೇರಿಕೆಯ ವಿಸ್ತೃತ ಪರಿಶೀಲನೆ ಕನ್ನಡ ವಾಚಕರಿಗೆ ಅಷ್ಟು ಅವಶ್ಯವೆನಿಸಲಾರದೆಂದು ಭಾವಿಸಿ ಆ ಪ್ರಕರಣವನ್ನು ಅನುವಾದಿಸಿಯೇ ಇಲ್ಲ.)

ಅಮೇರಿಕೆಯಲ್ಲಿ ಅರ್ಧಶತಮಾನ ನಡೆದ ಆಧ್ಯಾತ್ಮಿಕ ಉತ್ಕ್ರಾಂ

ತಿಯಿಂದ ಒಂದು ಮಾತು ನಿಚ್ಚಳವಾಗಿ ಕಂಡಿತು: ವಿವೇಕಾನಂದರನ್ನು ಸ್ವಾಗತಿಸಲು ಎಲ್ಲ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಅಮೇರಿಕೆಯೇ ಹೆಚ್ಚಾಗಿ ಸಜ್ಜಾಗಿ ನಿಂತಿದ್ದಿತು.

ವಿವೇಕಾನಂದರ ಪ್ರವಚನಯಾತ್ರೆ ಪ್ರಾರಂಭವಾಗುವುದೇ ತಡ. ಅವರ ಸಂದೇಶಕ್ಕೆ ಹಸಿದ ಸ್ತ್ರೀಪುರುಷರು ಕಿಕ್ಕಿರಿದು ಸುತ್ತುವರಿದರು. ಎಲ್ಲ ಭಾಗದಿಂದಲೂ ಬಂದರು–ವಾಣಿಜ್ಯ ಮಂಡಳಗಳಿಂದ, ವಿದ್ಯಾಲಯಗಳಿಂದ. ಎಲ್ಲ ವಿಚಾರದವರೂ ಬಂದರು–ನಿರ್ಮಲ ಭಕ್ತಿಯ ಆಸ್ತಿಕ್ಯಭಾವದ ಕ್ರಿಸ್ತೀಯರು, ಪರಮ ಪ್ರಾಮಾಣಿಕ ನಾಸ್ತಿಕರು ಮತ್ತು ಅಜ್ಞೇಯವಾದಿಗಳು. ವಿವೇಕಾನಂದರಿಗೆ ಅದೊಂದು ಸೋಜಿಗದಸಂಗತಿ–ಈಗಲೂ ನಮಗಾದರೂ ಸೋಜಿಗದ ಸಂಗತಿ. ಆ ತರುಣ ಭೂಖಂಡ (ಅಮೇರಿಕಾ)ದಲ್ಲಿ ಭವಿಷ್ಯಕಾಲದ ಆಶೆ-ಆಕಾಂಕ್ಷೆ ಮೂಡಿ ಬೆಳಗುತಿವೆ· ಅತ್ಯುಚ್ಚ ಸಾತ್ವಿಕತೆ ಮತ್ತು ಅತಿನೀಚ ತಾಮಸಶಕ್ತಿ, ಸತ್ಯದ ಹಿರಿಹಂಬಲ ಮತ್ತು ಅಸತ್ಯದ ಅಧಮತಮ ಲಾಲಸೆ, ಪರಮೋಚ್ಚ ತ್ಯಾಗ ಮತ್ತು ಕಲಂಕಿತ ಧನೋಪಾಸನೆ, ಮಗುವಿನಂಥ ಸರಲ ನಿರ್ಮಲತೆ ಮತ್ತು ಜಾತ್ರೆಯ ಜನಜಂಗುಳಿಯಲ್ಲಿ ಸುಳಿಯುವ ಮೋಸಗಾರಿಕೆ–- ಇವೆಲ್ಲ ಒಂದರ ಮಗ್ಗುಲಲ್ಲೊಂದು ವೈದೋರಿ ಮರೆಯುತ್ತಿವೆ. ಅಮೇರಿಕೆಯೆಂದರೆ ಒಂದು ಗಹನ ಗೂಢ ಸಮಸ್ಯೆಯೇ ಆಗಿದೆ.

ವಿವೇಕಾನಂದರದು ಉತಾವಳಿಯಾದ ಪ್ರಕೃತಿ. ಒಮ್ಮೊಮ್ಮೆ ಕಿಡಿಕಿಡಿಯಾಗಿ ಉರಿದೇಳುವರು. ಆದರೆ ಸಹನೆ-ಅಸಹನೆಗಳ ತೂಕ ತಪ್ಪದಂತೆ ತಾಳುವ ಸಹೃದಯತೆ ಅವರಲ್ಲಿತ್ತು. ಆಂಗ್ಲೋಸ್ಯಾಕ್ಸನ್ ಅಮೇರಿಕೆಯ ಸದ್ಗುಣ ಮತ್ತು ಸಾತ್ವಿಕ ಶಕ್ತಿಗಳನ್ನು ಅವರು ಕಂಡು ಹಿಡಿದಿದ್ದರು.

ಅಮೇರಿಕೆಯಲ್ಲಿ ರೂಪುಗೊಂಡ ವಿವೇಕಾನಂದರ ಕಾರ್ಯ ಇನ್ನೆಲ್ಲಿಗಿಂತಲೂ ಅಲ್ಲಿಯೇ ಹೆಚ್ಚಿಗೆ ಬಾಳಿತೇನೋ ನಿಜ. ಆದರೆ ಮುಂದೆ ಇಂಗ್ಲಂಡದಲ್ಲಿ ತಮ್ಮ ಕಾರ್ಯದ ನೆಲಗಟ್ಟು ಗಟ್ಟಿಯಾಗಿ ಅನಿಸಿದಷ್ಟು

ಇಲ್ಲಿ ಮಾತ್ರ ಅವರಿಗೆ ಎಂದಿಗೂ ಅನಿಸಲಿಲ್ಲ. ಅಮೇರಿಕೆಯಲ್ಲಿ ಹಿರಿದಾಗಿ ಕಂಡುದನ್ನೆಲ್ಲ ಅವರು ಅರಿತರು, ಗೌರವಿಸಿದರು. ಅಲ್ಲಿಯ ಆರ್ಥಿಕ ನೀತಿ, ಔದ್ಯೋಗಿಕ ಪ್ರಗತಿ, ಪ್ರದರ್ಶನಾಲಯ, ಕಲಾನಿಕೇತನ, ವಿಜ್ಞಾನದ ಉನ್ನತಿ, ಆರೋಗ್ಯಮಂಡಲ ಮತ್ತು ಸಮಾಜಸೇವಾಕಾರ್ಯ-ಇವನ್ನೆಲ್ಲ ಬಾಯಿತುಂಬ ಹೊಗಳಿದರು; ತಮ್ಮ ದೇಶಬಾಂಧವರಿಗೆಲ್ಲ ಪ್ರಶಂಸನೀಯ ಮತ್ತು ಅನುಕರಣನೀಯ ಉದಾಹರಣೆಗಳೆಂದು ಕೈಯತ್ತಿ ತೋರಿಸಿದರು. ಸಾರ್ವಜನಿಕ ಹಿತಕ್ಕಾಗಿ ಅಮೇರಿಕೆಯಲ್ಲಿ ವೆಚ್ಚವಾಗುವ ಸಾರ್ವಜನಿಕ ಹಣ ಮತ್ತು ಉದಾತ್ತ ಪ್ರಯತ್ನ ಇವನ್ನು ತಮ್ಮ ದೇಶದಲ್ಲಿಯ ಸಾಮಾಜಿಕ ಅನಾಸ್ಥೆಯ ಕೂಡ ತುಲನೆ ಮಾಡುತ್ತಿರುವಾಗ ಚಿಮ್ಮುವ ನೆತ್ತರಿನಿಂದ ಅವರ ಮುಖ ಕೆಂಪಾಗುತ್ತಿತ್ತು. ಪಶ್ಚಿಮದ ಮದಾಂಧತೆಯನ್ನು ಸಿಗಿಯುವುದಕ್ಕೆ ಅವರು ಸದೈವ ಸಿದ್ಧರೇನೋ ಸರಿ. ಆದರೆ ಪಶ್ಚಿಮದಲ್ಲಿಯ ಸಮಾಜಸೇವೆಯ ಉದಾಹರಣೆಗಳನ್ನು ತೋರಿಸಿ ತಮ್ಮ ದೇಶಬಾಂಧವರ ಮೋರೆಯ ಮೇಲಿನ ನೀರು ಇಳಿಸುವುದರಲ್ಲಿ ಇದಕ್ಕೂ ಹೆಚ್ಚಾದ ಆವೇಶ ಅವರದು.

ಶಿಕ್ಷೆ ಹೊಂದಿದ ಸ್ತ್ರೀಯರಿಗಾಗಿ ಏರ್ಪಡಿಸಿದ ಸೆರೆಮನೆಯೊಂದನ್ನು ಒಮ್ಮೆ ಅವರು ನೋಡಹೋದರು. ಅಲ್ಲಿ ಸೆರೆಯಾಳನ್ನು ಸಹಾನುಭೂತಿಯಿಂದ ನಡೆಯಿಸಿಕೊಳ್ಳುವುದನ್ನು ನೋಡಿ ಹೊರಗೆ ಬರುವಾಗ, ತಮ್ಮ ದೇಶದಲ್ಲಿ ಹಿಂದೂ ಜನರು ಅಸಹಾಯ ದೀನದರಿದ್ರ ನಿರ್ಬಲರನ್ನು ಕ್ರೂರ ಅನಾದರದಿಂದ ನಡೆಯಿಸಿಕೊಳ್ಳುವುದನ್ನು ಬಣ್ಣಿಸುತ್ತ ಅವರು ಕಿಡಿಕಿಡಿಯಾಗಿ ಕೂಗಿಕೊಂಡರು:

" ಅಯ್ಯೋ ! ಚಾಂಡಾಲರೆ ! ದಯಾಧರ್ಮದ ಪರಮೋಚ್ಚ ಪಾವನತೆಯನ್ನು ಉದಾತ್ತವಾಗಿ ಧಾರಾಳವಾಗಿ ಹಿಂದೂಧರ್ಮ ಹೊಗಳಿದಷ್ಟು ಇನ್ನಾವ ಧರ್ಮವೂ ಹೊಗಳಿಲ್ಲ. ಮತ್ತು ದೀನದುರ್ಬಲರ ಕುತ್ತಿಗೆಯ ಮೇಲೆ ಕಾಲಿಟ್ಟು ಕೆಳಕ್ಕೊತ್ತುವ ಹೀನ ವೃತ್ತಿ

ಯನ್ನು ಹಿಂದೂಧರ್ಮದವರು ತೋರಿದಷ್ಟು ಇನ್ನಾವ ಧರ್ಮದವರೂ ತೋರಿಲ್ಲ! ಧರ್ಮದ ತಪ್ಪಲ್ಲ ಸರಿ! ಆದರೆ ಧರ್ಮಮಾರ್ತಂಡರೆಂದು ಧರ್ಮಪಾರಂಗತರೆಂದು ಜಂಭ ಕೊಚ್ಚುವ ನಿರ್ದಯಹೃದಯ ಮದಾಂಧರ ತಪ್ಪು!"

ಭಾರತದ ಯುವಕರನ್ನು ಅವ್ಯಾಹತವಾಗಿ ಸಿಗಿದು, ಸಂಪ್ರಾರ್ಥಿಸಿ ಹುರಿದುಂಬಿಸಿ ಇಂತು ಬೋಧಿಸಿದರು:

"ನನ್ನ ಬಾಲಕರೇ, ಟೊಂಕ ಕಟ್ಟಿರಿ! ಇದಕ್ಕಾಗಿಯೇ ಭಗವಂತನ ಕರೆ ಬಂದಿದೆ ನನಗೆ!........ನಿಮ್ಮದೇ—ಲೀನ ದೀನ ಆದರೆ ಶ್ರದ್ಧಾಮಯರಾದ — ನಿಮ್ಮದೇ ಆಶೆ ನನಗೆ!— ಭರವಸೆ ನನಗೆ! ದುಃಖಿತರ ದುಃಖಕ್ಕಾಗಿ ಕೊರಗಿರಿ! ಮರುಗಿರಿ! ಮೊರೆಯಿಡಿರಿ! ನೆರವು ಬಂದೇ ತೀರುವುದು! ಈ ಭಾರ ನನ್ನೆದೆಯ ಮೇಲೆ ಹೊತ್ತು, ಈ ವಿಚಾರ ನನ್ನ ತಲೆಯ ಮೇಲೆ ಹೊತ್ತು ಹನ್ನೆರಡು ವರ್ಷ ತಿರುಗಿದೆ! ಸಿರಿಯ ಹಿರಿತನ ತಮ್ಮದೆನ್ನುವವರ ಕದದಿಂದ ಕದಕ್ಕೆ ತಿರುಗಿದೆ! ಕಳವಳಿಸುವ ಎದೆಯಿಂದ ಅರ್ಧ ಲೋಕ ದಾಟಿ ಈ ವಿದೇಶಕ್ಕೆ ನೆರವಿಗಾಗಿ ಬಂದಿರುವೆನು........ಭಗವಂತ....ನೆರವಾಗುವನು! ಈ ದೇಶದಲ್ಲಿ ಹಸಿವೆಯಿಂದ ಕಂಗಾಲಾಗಿ ಚಳಿಯಲ್ಲಿ ಸೆಟೆದು ನಾನು ಸಾಯಬಹುದು! ಆದರೆ ಸಾಯುವ ಮುಂಚೆ, ಇದೋ ಇದನ್ನು, ತರುಣರೇ, ನಿಮಗೆ ಒಪ್ಪಿಸುವೆನು! ಈ ಸಹಾನುಭೂತಿ! ಅಜ್ಞ, ದೀನ, ದರಿದ್ರ ದಲಿತರಿಗಾಗಿ ಈ ಹೋರಾಟ!........ಭಗವಂತನ ಅಡಿಗೆರಗಿ ಮಹಾಯಜ್ಞ ಮಾಡಿರಿ! ಇವರಿಗಾಗಿ, ದಿನದಿನಕ್ಕೆ ಅಧೋಗತಿಗೆ ಜಾರುತ್ತಿರುವ ಈ ಮೂವತ್ತು ಕೋಟಿ ಜನಕ್ಕಾಗಿ, ನಿಮ್ಮ ಇಡಿಯೊಂದು ಬಾಳಿನ ಹೋಮ ಮಾಡಿರಿ!— ಜಯ ಭಗವಾನ್! ನಾವು ಗೆದ್ದೇ ಗೆದೆಯುವೆವು! ಈ ಹೋರಾಟದಲ್ಲಿ ನೂರಾರು ಜನ ಬಿದ್ದು ಹೋಗಬಹುದು ಮತ್ತೆ ನೂರಾರು ಜನ ಹೋರಾಟ ಮುಂದರಿಸುವರು!....ಶ್ರದ್ಧೆ!.... ಸಹಾನುಭೂತಿ!........ಬಾಳು ಎಷ್ಟರದು? ಸಾವು ಎಷ್ಟರದು? ಜಯ

ಭಗವಾನ್!--ಸಾಗಿರಿ....ಸಾಗಿರಿ ಮುಂದೆ! ಭಗವಂತನೇ ನಮ್ಮ ಸೇನಾ ಪತಿ! ಹಿಂದೆ ಯಾರು ಬಿದ್ದರೆಂದು ಹೊರಳಿ ನೋಡಬೇಡಿರಿ! ಸಾಗಿರಿ! ಸಾಗಿರಿ! ಮುಂದಕೆ!.... ಮುಂದಕೆ....!"

ಅಮೇರಿಕೆಯ ಸಮಾಜಸೇವಾತತ್ಪರತೆಯನ್ನು ಕಣ್ಣಾರೆ ಕಂಡು ಸ್ಫೂರ್ತಿಯಿಂದ ಬರೆದ ಈ ಪತ್ರ ಆಶೀರ್ವಾದದಲ್ಲಿ ಕೊನೆಗಂಡಿದೆ. ಧರ್ಮದ ಹೆಸರಿನಿಂದ ಜಂಭ ಕೊಚ್ಚುವ ಮೋಸಗಾರ ಕ್ರಿಸ್ತಿಯರನ್ನು ಸಿಗಿದ ವಿವೇಕಾನಂದರು ಕ್ರಿಸ್ತನ ಧರ್ಮದಲ್ಲಿ ಧಾರಾವಾಹಿಯಾಗಿ ಸುರಿದ ದಯೆಯನ್ನು ಹೊಳೆಯಾಗಿ ಹರಿದ ನಲ್ಮೆಯನ್ನು ಅಂತಃಕರಣ ಪೂರ್ವಕವಾಗಿ ಮೆಚ್ಚಿದರು.

" ಇಲ್ಲಿ ಮೇರಿಯ ಮಗುವಿನ ಮಕ್ಕಳ ಮಧ್ಯದಲ್ಲಿ ನಾನಿರುವೆ. ಭಗವಾನ್ ಯೇಸೂ ನನಗೆ ಕೈನೀಡುವನು."

ಧರ್ಮಬಂಧನಗಳನ್ನು ಅವರು ಲೆಕ್ಕಿಸುವವರಲ್ಲ. ಈ ಮಹಾಸತ್ಯ ವನ್ನು ಅವರು ನುಡಿದರು:

" ಯಾವುದೊಂದು ಪಂಥದಲ್ಲಿ ಹುಟ್ಟುವದು ಲೇಸು. ಆದರೆ ಅಲ್ಲಿಯೇ ಸಾಯುವುದು ಮಾತ್ರ ದಾರುಣವಾದುದು."

ಇನ್ನೊಬ್ಬ ವಿಧರ್ಮಿಯ ನಾಸ್ತಿಕನು ಒಳಸೇರಬಾರದೆಂದು ತಮ್ಮ ಧರ್ಮದ ಕದ ಭದ್ರವಾಗಿ ಮುಚ್ಚಿಕೊಂಡು ಕಾವಲು ಮಾಡು ವದು ತಮ್ಮ ವಿಧಿವಿಹಿತ ಕರ್ತವ್ಯವೆಂದು ತಿಳಿದ ಧರ್ಮಾಂಧರಿಗೆ— ಅವನು ಕ್ರಿಸ್ತೀಯನಿರಲಿ ಅಥವಾ ಹಿಂದುವಿರಲಿ—ವಿವೇಕಾನಂದರು ಸಾರಿ ಹೇಳಿದರು:

" ಅವರು ಹಿಂದುಗಳೋ, ಮಹಮ್ಮದೀಯರೋ, ಕ್ರಿಸ್ತೀಯರೋ ಯಾರೆಂಬದನ್ನು ನಾನು ಲೆಕ್ಕಿಸೆನು. ಅವರು ಯಾರೇ ಇರಲಿ. ಪ್ರಭುವನ್ನು ಮೆಚ್ಚಿದವರೆಲ್ಲರ ಅಡಿಯಾಳು ನಾನು. ಮಕ್ಕಳಿರಾ, ಹೋಮದಲ್ಲಿ ಹಾರಿರಿ!........ ಶ್ರದ್ಧೆ ಇದ್ದರೆ ಸಾಕು! ಎಲ್ಲವೂ ನಿಮ್ಮ ನ್ನು ಹುಡುಕಿಕೊಂಡು ಬರುವುದು! ನಾವೆಲ್ಲರೂ ಹಗಲಿರುಳು ಪ್ರಾರ್ಥಿ

ಸುವಾ ! ದಾರಿದ್ರ್ಯ, ಧರ್ಮಮಾರ್ತಂಡರ ಮೋಸಗಾರಿಕೆ, ಸತ್ತೆಯ ಅತ್ಯಾಚಾರ—ಇವುಗಳ ಪಾಶದಲ್ಲಿ ಸಿಲ್ಕಿ ಕಾಲ ಕೆಳಗೆ ತುಳಿಯಲಾದ ಭಾರತದ ಕೋಟ್ಯಂತರ ದೀನದುಃಖಿತರಿಗಾಗಿ ನಾವೆಲ್ಲರೂ ಹಗಲಿರುಳೂ ಪ್ರಾರ್ಥಿಸುವಾ ! ನಾನು ದಾರ್ಶನಿಕನಲ್ಲ ! ನಾನು ತತ್ವಜ್ಞಾನಿಯಲ್ಲ. ನಾನು ಸಂತನಲ್ಲ. ನಾನೊಬ್ಬ ದರಿದ್ರ. ದರಿದ್ರರನ್ನು ಮೆಚ್ಚಿದ ದರಿದ್ರ!....ದಾರಿದ್ರ್ಯ ಮತ್ತು ಅಜ್ಞಾನದಲ್ಲಿ ತೊಳಲಾಡುವ ಮೂವತ್ತು ಕೋಟಿ ಜನಕ್ಕಾಗಿ ತಳಮಳಿಸುವವರು ಹಿಂದುಸ್ತಾನದಲ್ಲಿ ಯಾರೂ ಇಲ್ಲವೇ ? ಮುಂದೆ ಗತಿಯೇನು ? ಅವರಿಗೆ ದಾರಿ ತೋರುವವರೆಲ್ಲಿ ? ಬೆಳಕು ತೋರುವವರೆಲ್ಲಿ ? ಈ ಜನವೇ ನಿಮ್ಮ ದೇವನಾಗಲಿ !........ ದೀನ ಜನಕ್ಕಾಗಿ ಮರುಗುವವನೇ ಮಹಾತ್ಮನೆಂಬೆ !........ಲಕ್ಷಾಂತರ ಜನ ಅಜ್ಞಾನದಲ್ಲಿ ಮುಳುಗಿ ಹಸಿವೆಯಿಂದ ಬಳಲುತ್ತಿರುವ ವರೆಗೆ ಅವರ ಕಾಸಿನ ನೆರವಿನಿಂದ ಕಲಿತು ದೊಡ್ಡವನಾಗಿ ಅವರಿಗಾಗಿ ಕನಿಕರ ಪಡದ ಪ್ರತಿಯೊಬ್ಬನಿಗೆ ದ್ರೋಹಿ ! ದ್ರೋಹಿಯೆಂಬೆ !........"

ಒಂದು ದಿನ ಸಹ ತಮ್ಮ ಆದ್ಯ ಕರ್ತವ್ಯದ ಅನಿಸಿಕೆ ಅವರ ಬೆನ್ನು ಬಿಡಲಿಲ್ಲ. ಉತ್ತರ ತುದಿಯಿಂದ ದಕ್ಷಿಣ ತುದಿವರೆಗೆ, ದಕ್ಷಿಣ ತುದಿಯಿಂದ ಉತ್ತರ ತುದಿವರೆಗೆ, ಹಿಮಾಲಯದಿಂದ ಕನ್ಯಾಕುಮಾರಿಯವರೆಗೆ ಅಲೆದಾಗ ಅವರನ್ನು ಅಂಟಿಕೊಂಡ ಅನಿಸಿಕೆಯೆಂದರೆ, ತಮ್ಮ ಜನರನ್ನು—ಅವರ ದೇಹ, ಆತ್ಮಸಹಿತವಾಗಿ-( ದೇಹ ಮೊದಲು ! ) -ಉಳಿಸುವುದು ! ತಮ್ಮ ಕಾರ್ಯದಲ್ಲಿ ನೆರವಾಗಿರೆಂದು ವಿಶಾಲ ವಿಶ್ವಕ್ಕೆಲ್ಲ ಕೂಗಿಕೊಳ್ಳಬೇಕು. ಆ ಕಾರ್ಯ, ಜನಸೇವೆ, ಪ್ರಪಂಚದ ದೀನರ ಸೇವೆ, ದಲಿತರ ಸೇವೆ ಎಂದು ಸಾರಿ ಹೇಳಬೇಕು ! ನೀಡು ಮತ್ತು ಪಡೆ ! ತಿರುಪೆಗಾಗಿ ಚಾಚಿದ ಕೈಯಲ್ಲಿ ಕರುಣೆಯ ತುಣುಕೊಂದು ಬೀಳುವುದು ಬೇಕಿಲ್ಲ ! ಸಮತೆ ! ಪಡೆದವನು ನೀಡುವನು. ಪಡೆದಷ್ಟು ನೀಡುವನು. ಹೊಟ್ಟೆಗಿಲ್ಲದ ಬಟ್ಟೆಗಿಲ್ಲದ ಸಾವಿನ ಬಾಯಲ್ಲಿ ಸಿಲ್ಕಿದ ದೀನರು, ಭಾರತದ ದೀನರು ಪ್ರಪಂಚದ ದೀನರು—ಅವರೇ ದೇವರು!

ಯುಗಯುಗಾಂತರದ ದೀನದಲಿತರ ಕಣ್ಣಿನಿಂದ ಕೋಡಿವರಿದ ಕಂಬನಿ ಕಾಲಿಂದಿಯಾಗಿ ಹರಿಯುತ್ತಿರುವಳು !

ವಿವೇಕಾನಂದರ ದೃಷ್ಟಿಯಲ್ಲಿ ಅದೊಂದು ದ್ವಿವಿಧ ಕಾರ್ಯವಾಗಿತ್ತು. ಪಾಶ್ಚಾತ್ಯ ಸಂಸ್ಕೃತಿಯ ಭೌತಿಕ ಸುಖದ ಸಲಕರಣೆಗಳನ್ನು ಭಾರತಕ್ಕೆ ಒದಗಿಸುವುದು ಮತ್ತು ಭಾರತದ ಆಧ್ಯಾತ್ಮಿಕ ಭಾಗ್ಯದ ಸಿರಿಯನ್ನು ಪಶ್ಚಿಮಕ್ಕೆ ಒದಗಿಸುವುದು. ಒಂದಕ್ಕೊಂದು ಸಾಟಿ. ಪರಸ್ಪರ ಬಾಂಧವ್ಯ, ಸಹಕಾರಿತೆ.

ಪಶ್ಚಿಮದ ಭೌತಿಕ ಸುಖಸಾಧನೆಗೆ ಮಾತ್ರವಲ್ಲ, ಆದರೆ ನೈತಿಕ ಮತ್ತು ಸಾಮಾಜಿಕ ಪ್ರಗತಿಗೆ ಸಹ ವಿವೇಕಾನಂದರು ಹೆಚ್ಚಾಗಿ ಮಹತ್ವವನ್ನು ಕೊಟ್ಟಿದ್ದರು. ಟ್ರಾಂಗಾಡಿಯಲ್ಲಿ ಒಬ್ಬ ಲಕ್ಷಾಧೀಶನ ಭುಜಕ್ಕೆ ಭುಜ ತಗುಲಿಸಿ ಕುಳಿತು ಹೋಗುವ ಕೂಲಿಯ ಹೆಂಗುಸನ್ನು ಕಂಡು ಪ್ರಜಾಸತ್ತೆಯ ಛತ್ರದಲ್ಲಿ ಮೆರೆಯುವ ತೋರಿಕೆಯ ಸಮತೆಯನ್ನು ಕಂಡು ವಿವೇಕಾನಂದರು ಭಾವನಾವಶರಾಗಿ ಅವಾಸ್ತವ ಪ್ರಶಂಸೆ ಮಾಡುತ್ತಿದ್ದರು. ಕೆಳಗೆ ಬಿದ್ದವರನ್ನೆಲ್ಲ ಕುಟ್ಟಿ ಚಟ್ನಿಯನ್ನಾಗಿ ಮಾಡುವ ಯಂತ್ರದ ನಿರ್ದಯತೆಯ ಅರಿವು ಅವರಿಗಿನ್ನೂ ಆಗಿರಲಿಲ್ಲ. ಆದ್ದರಿಂದ ಹಿಂದುಸ್ತಾನದಲ್ಲಿಯ ಜಾತಿಗಳ ವಿಷಮತೆ ಅವರ ಎದೆಯನ್ನು ಹೆಚ್ಚಾಗಿ ಕೊರೆಯುತ್ತಿತ್ತು !

" ' ಮ್ಲೇಂಛ ' ಎಂಬ ಶಬ್ದ ಹುಟ್ಟಿಸಿ ಹೊರಗಿನವರ ಪರ್ಲು ಹರಿದುಕೊಂಡ ದಿನವೇ ಭಾರತದ ಭಾಗ್ಯ ದಿಗ್ಬಲಿಯಾಯಿತು ! "

ಪಶ್ಚಿಮದ ಪ್ರಜಾಸತ್ತೆಯ ಉದಾಹರಣೆಯ ಮೇಲಿಂದ ಪರಸ್ಪರ ಸಹಾಯ ಸಹಾನುಭೂತಿಗಳನ್ನು ಭಾರತೀಯರಿಗೆ ಕಲಿಸಲು ಒಂದು ಸುಸಂಘಟಿತ ಸಂಸ್ಥೆ ಅವಶ್ಯವಾಗಿ ಬೇಕೆಂದು ಅವರು ಸಾರಿ ಹೇಳಿದರು.

ಅಮೇರಿಕೆಯ ಸ್ತ್ರೀಯರ ಬೌದ್ಧಿಕ ಉನ್ನತಿಯನ್ನು ಹೊಗಳಿದರು. ಆ ಸ್ತ್ರೀಯರು ಮಾಡಿದ ತಮ್ಮ ಸ್ವಾತಂತ್ರ್ಯದ ಉದಾತ್ತ

ಉಪಯೋಗವನ್ನು ಹೊಗಳಿದರು. ಅಲ್ಲಿಯ ಸ್ತ್ರೀಸ್ವಾತಂತ್ರ್ಯವನ್ನು ಭಾರತೀಯ ಸ್ತ್ರೀಪಾರತಂತ್ರ್ಯಕ್ಕೆ ಹೋಲಿಸಿದರು. ಸಮಾಜದ ಅತ್ಯಾಚಾರಕ್ಕೆ ಮೂಕಬಲಿಯಾಗಿ ಸತ್ತುಹೋದ ತಮ್ಮ ತಂಗಿಯನ್ನು ನೆನೆದು, ಸ್ತ್ರೀಸ್ವಾತಂತ್ರ್ಯಕ್ಕಾಗಿ ಹೆಣಗುವುದು ತಮ್ಮ ಪ್ರೀತಿಯ ಪವಿತ್ರ ಕರ್ತವ್ಯವೆಂದು ಅವರು ತಿಳಿದರು.

ಪಾಶ್ಚಿಮಾತ್ಯರ ಸಾಮಾಜಿಕ ಶ್ರೇಷ್ಠತೆಯನ್ನು ಪ್ರತಿಪಾದಿಸುವಾಗ ಸ್ವಜಾತೀಯ ಅಹಂಕಾರ ಅವರಿಗೆ ಆತಂಕವಾಗಲಿಲ್ಲ. ತಮ್ಮ ಜನ ಅವರಿಂದ ಪಾಠ ಕಲಿಯಬೇಕೆಂದು ಅವರ ಆಕಾಂಕ್ಷೆ.

ಆದರೆ ಪ್ರತಿಯಾಗಿ ಸರಿಸಾಟಿಯಾಗಿ ಏನೂ ಕೊಡದೆ ಕೇವಲ ತಿರುಪೆ ಬೇಡುವುದು ಸ್ವಾಭಿಮಾನಕ್ಕೆ ಸರಿಬೀಳಲಿಲ್ಲ. ಭಾರತದ ದೀನ ದರಿದ್ರನೂ ಸಹ ಮಾನವನಲ್ಲಿ ಮರೆಯಾದ ದೇವನ ರಹಸ್ಯವನ್ನು ಬಲ್ಲನು. ಆತ್ಮಿಕ ಸ್ವಾತಂತ್ರ್ಯವನ್ನು ಪಶ್ಚಿಮಕ್ಕೆ—ಬೌದ್ಧಿಕ ಕರ್ಮ ಪಿಶಾಚಿಯ ಮಾಯಾಜಾಲದಲ್ಲಿ ದಾರಿಗಾಣದ ಪಶ್ಚಿಮಕ್ಕೆ—ತಾವು ಮುಟ್ಟಿಸುತ್ತಿರುವೆವೆಂದು ಅವರಿಗೆ ಮನದಟ್ಟಾಗಿತ್ತು. ಆ ತರುಣ ಅಮೇರಿಕೆಯಲ್ಲಿ ಬೆಳೆದು ಬಂದ ಮಾನವನ ಆತ್ಮಶ್ರದ್ಧೆಯನ್ನು ಅವರು ಮೊದಲನೆಯ ಅಡಿಯೆಂದರು ; ಹೋರಾಟದ ಮೊದಲನೆಯ ಹೆಜ್ಜೆ ಎಂದು ಹೇಳಿದರು. ಕೆಲ ಯುರೋಪೀಯ ಸ್ತ್ರೀಯರು ಹಳಿಯುವಂತೆ ಅವರು ಈ ಮೊದಲನೆಯ ಹೆಜ್ಜೆಯನ್ನು ಕೀಳೆಣಿಸಲಿಲ್ಲ. ಅಮೇರಿಕೆಯೆಂದರೆ ಕುಲೀನ ಚಿಕ್ಕ ತಂಗಿಯೆಂದು ಕರ್ಮಕುಶಲ ವಿವೇಕಾನಂದರ ಭಾವನೆ. ಆದರೆ ಹೊಸದಾಗಿ ಮೂಡಿ ಬೆಳಗುತಲಿದ್ದ ಸೂರ್ಯನ ಹೊಳಪಿಗೆ ಕಣ್ಣು ಕುಕ್ಕಿ ಕುರುಡಾಗಿ ಅವಳು ಅವಸರವಸರದಿಂದ ಆಳವಾದ ದರಿಯ ಮೇಲೆ ಇಣುಕುವ ಕಡಿದಾದ ತುದಿಯಮೇಲೆ ಸಾಹಸದಿಂದ ಹೆಜ್ಜೆ ಹಾಕುತ್ತಿರುವಳು. ಅವಳ ಕಣ್ಣು ಕಾಣುವಂತೆ ಮಾಡಿ, ಕರೆದೊಯ್ದು, ಬಾಳಿನ ಮೇಲ್ಮಾಳಿಗೆಯಿಂದ ಅವಳಿಗೆ ಜೀವದಾಚೆಯ ಶಿವನನ್ನು ತೋರುವುದು ತಮ್ಮ ಈಶಸಂಕಲ್ಪಿತ ಕಾರ್ಯವೆಂದು ಅವರು

ಭಾವಿಸಿದರು.

ಅಮೆರಿಕೆಯ ಹರವಾದ ಆಧ್ಯಾತ್ಮಿಕ ಮರುಭೂಮಿಯಲ್ಲಿ ವೇದಾಂತದ ಬೀಜ ಬಿತ್ತಿ ಅದಕ್ಕೆ ಶ್ರೀರಾಮಕೃಷ್ಣರ ನಲ್ಮೆಯ ಮಳೆ ಕರೆಯುವುದಕ್ಕಾಗಿ ವಿವೇಕಾನಂದರು ಹಲವು ಪ್ರವಚನಯಾತ್ರೆಗಳನ್ನು ಕೈಕೊಂಡರು. ಅಲ್ಲಿಯ ಜನತೆಯ ತರ್ಕಪ್ರಚುರ ಬುದ್ಧಿಗೆ ಒಗ್ಗುವಂಥ ವೇದಾಂತದ ಭಾಗಗಳನ್ನು ಆರಿಸಿದರು. ಗುರುವಿನ ಸಂದೇಶ ಸಾರಿದ್ದರೂ ಇಲ್ಲಿಯ ವರೆಗೆ ಗುರುವಿನ ವ್ಯಕ್ತಿತ್ವದ ವಿಷಯವನ್ನು ಮರೆಮಾಜಿದ್ದರು. ಉತ್ಕಟಭಕ್ತಿಮೂಲಕವಾದ ನಮ್ರತೆಯೇ ಇದಕ್ಕೆ ಕಾರಣ. ಸಲಿಗೆಯ ಕೆಲ ಶಿಷ್ಯರಿಗೆ ಸಂದರ್ಭ ಬಂದಾಗ ಗುರುವಿನ ವಿಷಯದಲ್ಲಿ ಕೆಲ ಮಾತು ಹೇಳಿದ್ದರು. ಮಾತ್ರ ಅದನ್ನು ಮಿಕ್ಕ ಜನಕ್ಕೆಲ್ಲ ಹೇಳಕೂಡದೆಂದು ಶಿಷ್ಯರಿಗೆ ವಿಧಿಸಿದರು.

ವಿದ್ವಾಂಸರ ವ್ಯಾಖ್ಯಾನಮಾಲೆಗಳನ್ನೂ ಕಾರ್ಯಕ್ರಮಗಳನ್ನೂ ಏರ್ಪಡಿಸುವ ಅನೇಕ ಸಂಸ್ಥೆಗಳು ಅಮೇರಿಕೆಯಲ್ಲಿ ಉಂಟು. ಸರ್ಕಸ್ಸಿನ ಸಿಂಹದ ಬಗ್ಗೆ ಡಂಗುರ ಸಾರಿದಂತೆ ಮಾಡಿ ವಿವೇಕಾನಂದರ ಹೆಸರನ್ನು ಇಂಥ ಸಂಸ್ಥೆಗಳ ವ್ಯವಸ್ಥಾಪಕರು ವಿಪರೀತ ರೀತಿಯಿಂದ ಉಪಯೋಗಿಸಿದರು. ಆದುದರಿಂದ ಅವರಿಗೆ ಬಹಳ ತೊಂದರೆಯಾಯಿತು. ೧೮೯೪ರಲ್ಲಿ ಆರು ವಾರ ಡೆಟ್ರಾಯಿಟ್‌ದಲ್ಲಿ ತಂಗಿದಾಗ, ಇಂಥ ಸಂಸ್ಥೆಗಳ ಅಸಹ್ಯ ಜಂಜಾಲವನ್ನು ಹರಿದೊಗೆದರು. ಆದ ಕರಾರನ್ನು ರದ್ದುಪಡಿಸಿ ಹೇರಳ ಹಣದ ಹಾನಿ ಸಹಿಸಿದರು. ಇದೇ ಡೆಟ್ರಾಯಿಟ್‌ದಲ್ಲಿಯೇ ಕುಮಾರಿ ಗ್ರೀನ್ಸ್‌ಡೆಲ್ ಎಂಬವಳು ಅವರ ಶಿಷ್ಯಳಾಗಿ ಅಕ್ಕ ಕ್ರಿಸ್ಟಿನ್ ಎಂಬ ಹೆಸರು ಧರಿಸಿದಳು. ಅಕ್ಕ ಕ್ರಿಸ್ಟಿನ್ ಮತ್ತು ನಿವೇದಿತಾದೇವಿ ( ಮಿಸ್ ಮಾರ್ಗರೆಟ್ ನೊಬಲ್ ) ಸ್ವಾಮಿಯವರ ಅತ್ಯಂತ ಸಮೀಪದ ವಿಶ್ವಾಸದ ಶಿಷ್ಯೆಯರು.

೧೮೯೫ರ ಚಳಿಗಾಲದ ಆರಂಭದಲ್ಲಿ ಡೆಟ್ರಾಯಿಟ್‌ದಿಂದ ನ್ಯೂಯಾರ್ಕಕ್ಕೆ ಸ್ವಾಮಿ ವಿವೇಕಾನಂದರು ಮರಳಿದರು. ಅವರ ಸಂದೇಶದ

ವಿಷಯದಲ್ಲಿ ಆಸ್ಥೆ-ಭಕ್ತಿಗಿಂತಲೂ ಅವರ ಲೋಕಪ್ರಿಯ ವ್ಯಕ್ತಿತ್ವದ ವಿಷಯದಲ್ಲಿ ಕುತೂಹಲಿಗಳಾಗಿ ಕೆಲ ಲಕ್ಷ್ಮೀಪುತ್ರ ಮಿತ್ರರು ಅವರ ಸುತ್ತು ಮುಗಿಬಿದ್ದು ಸ್ವಾಮಿಯವರ ಗುತ್ತಿಗೆ ಹೊತ್ತಂತೆ ಮಾಡಿದರು. ಸ್ವಾಮಿ ಈ ಬಂಧನವನ್ನು ತಾಳದಾದರು. ಏಕಾಕಿ ಹಾಗು ಸರ್ವ ತಂತ್ರಸ್ವತಂತ್ರರಾಗಿರುವುದು ಅವರ ಅಪೇಕ್ಷೆ. ಹೋದಹೋದಲ್ಲೆಲ್ಲ ಗುಡಾರ ಹೊಡೆದು ಬಿಡಾರ ಮಾಡುವುದು, ಮತ್ತು ಬೆಳಗಾಗುತ್ತಲೆ ಬಿಡಾರ ಕಿತ್ತಿಕೊಂಡು ಮುಂದೆ ಹೊರಡುವುದು, ಈ ರೀತಿಯ ಕಾರ್ಯ ಕ್ರಮದಲ್ಲಿ ಬಹುಕಾಲ ಬಾಳುವ ಕಾರ್ಯದ ತಳಹದಿ ಹಾಕುವದು ಅಸಾಧ್ಯ. ಇಂಥ ವ್ಯಾಖ್ಯಾನಮಾಲೆಗಳಿಂದ ಅವರಿಗೆ ಬೇಸರಾಯಿತು. ಶಿಷ್ಯರ ಗುಂಪನ್ನು ಕೂಡಿಸಿ ಹಣ ಕೇಳದೆ ಉಪನ್ಯಾಸ ಕೊಡಬೇಕೆಂದು ಗೊತ್ತು ಮಾಡಿಕೊಂಡರು. ಅವಶ್ಯವಿದ್ದ ಹಣದ ಅನುಕೂಲತೆ ಮಾಡಿ ಕೊಡಲು ಮುಂದೆ ಬಂದ ಸಿರಿವಂತರು ಅಸಹ್ಯವಾದ ಶರ್ತು ಹಾಕಿ ದರು. " ಯೋಗ್ಯ ಜನ " ಸಮಾಜಕ್ಕೆ ಮಾತ್ರ ಉಪನ್ಯಾಸದ ಉಪ ಕ್ರಮದ ಲಾಭ ದೊರೆಯಬೇಕೆಂದು ಆ ಮಿತ್ರರ ಹಟ. ಸಂತಾಪ ತಾಳದೆ ಸ್ವಾಮಿ ಗರ್ಜಿಸಿದರು.

"ಶಿವ ! ಶಿವ ! ಸಿರಿವಂತರಿಂದ ಮಹಾಕಾರ್ಯ ಹುಟ್ಟೀತೇ ಎಂದಾದರೂ ? ಬೆಳೆದೀತೇ ? ಇಂಥ ಕಾರ್ಯ ಹುಟ್ಟುವುದು ಬುದ್ಧಿ ಯಿಂದ, ಹೃದಯದಿಂದ ! ಹಣದ ಹಮ್ಮಿಣಿಯಿಂದಲ್ಲ ! "

ಈ ಕಾರ್ಯದ ಆರ್ಥಿಕ ಹೊಣೆ ಹೊರಲು ಹಲವು ವಿದ್ಯಾರ್ಥಿ ಗಳು ಮುಂದೆ ಬಂದರು. ಕೈತುಂಬ ಹಣವಿಲ್ಲದಿದ್ದರೂ ಎದೆತುಂಬ ಭಕ್ತಿ-ಶ್ರದ್ಧೆ. ಎಲ್ಲಿಯೋ ಸಂದಿಗೊಂದಿಯಲ್ಲಿ 'ಅಸಭ್ಯ' ಓಣಿಯಲ್ಲಿ ಎಂಥವೋ ಕೆಲವು ಕೋಣೆ. ಖುರ್ಚಿಯಿಲ್ಲ. ಮೇಜಿಲ್ಲ. ಅನುವಿದ್ದಲ್ಲಿ ಕುಳಿತುಕೊಳ್ಳುವುದು. ಸ್ವಾಮಿ ನೆಲದಮೇಲೆ ಕುಳಿತರು. ಹತ್ತೆಂಟು ಜನ ನಿಂತರು. ಮೇಲಟ್ಟಕ್ಕೆ ಹೋಗುವ ಮೆಟ್ಟಲ ಕೆಳಗಿನ ಕೋಣೆಯನ್ನು ತೆರೆದರು. ಮೆಟ್ಟಲುಗಳ ಮೇಲೆ ಕೆಲವರು ಕುಳಿತರು. ತೀವ್ರವೇ ಬೇರೆ

ಇಂಬಾದ ಸ್ಥಳಕ್ಕೆ ಹೋಗಬೇಕಾಯಿತು. ೧೮೯೫ರ ಫೇಬ್ರುವರಿಯಿಂದ ಜೂನ್ ವರೆಗೆ ಮೊದಲನೆಯ ವ್ಯಾಖ್ಯಾನಮಾಲೆ ಸಾಗಿತು. ಉಪನಿಷತ್ತುಗಳನ್ನು ತಿಳಿಸಿ ಹೇಳಿದರು. ನಿತ್ಯ ಕೆಲ ವಿಶಿಷ್ಟ ವಿದ್ಯಾರ್ಥಿಗಳಿಗೆ ರಾಜಯೋಗ ಜ್ಞಾನಯೋಗಗಳ ಅಭ್ಯಾಸ ಮಾಡಿಸಿದರು. ಪ್ರಾಣಾಯಾಮದಿಂದ ಪಂಚೇಂದ್ರಿಯಗಳನ್ನೆಲ್ಲ ಚಿತ್ತದಲ್ಲಿ ಸ್ಥಿರೀಕರಿಸಿ, ಆಂತರ ಕೋಲಾಹಲವನ್ನೆಲ್ಲ ಅಡಗಿಸಿ ಯೋಗಸಮಾಧಿಯಲ್ಲಿ ಒಳದನಿಯು ತಿಳಿಮಾತು ಕೇಳುವುದೇ ಮೊದಲನೆಯದರ ಉದ್ದೇಶ. ಎರಡನೆಯದು ಜೀವಾತ್ಮ-ಪರಮಾತ್ಮರ ಏಕತ್ವವನ್ನು ಕಾಣಲೆಳಸುವ ಬೌದ್ಧಿಕ ಧರ್ಮಶಾಸ್ತ್ರ—ವಿಜ್ಞಾನಧರ್ಮ.

೧೮೯೫ ಜೂನ್ ಸುಮಾರಕ್ಕೆ ಅವರು 'ರಾಜಯೋಗ'ದ ವಿಷಯದ ತಮ್ಮ ವಿಖ್ಯಾತ ಲೇಖನವನ್ನು ಮುಗಿಸಿದರು. ಅವರು ಹೇಳುತ್ತ ಹೋದಂತೆ ಅದನ್ನು ಕುಮಾರಿ ಎಸ್. ಈ. ವಾಲ್ಡೊ (ಮುಂದೆ 'ಅಕ್ಕ ಹರಿದಾಸಿ') ಇವಳು ಬರೆದಳು. ಅದು ಅಮೇರಿಕೆಯ ಪ್ರಖ್ಯಾತ ಮನಃಶಾಸ್ತ್ರಜ್ಞರಾದ ವಿಲ್ಯಮ್ ಜೇಮ್ಸರ ಲಕ್ಷ್ಯವನ್ನು ಸೆಳೆಯಿತು. ಮುಂದೆ ಟಾಲ್ಸ್ಟಾಯರೂ ಅದರ ಬಗ್ಗೆ ಬಲು ಆಸ್ಥೆಯನ್ನು ತೋರಿದರು. ರಾಜಯೋಗದ ಶಾರೀರಿಕ ದೃಷ್ಟಿಯ ಕಡೆಗೆ ಅಮೇರಿಕೆ ಹೆಚ್ಚಾಗಿ ಲಕ್ಷ್ಯ ಕೊಟ್ಟಿತು. ರಾಜಯೋಗದಿಂದ ಭೌತಿಕ ಶಕ್ತಿ ಕೈವಶವಾಗುವುದೆಂಬ ಭರವಸೆಯಿಂದ ವ್ಯಾವಹಾರಿಕ ದೃಷ್ಟಿಯ ಅಮೇರಿಕೆ ಯೋಚಿಸಿತು. ಅಮೇರಿಕೆಯ ಜನಾಂಗವು ಮಹಾವೈಭವಶಾಲಿಯಾದರೂ ಹುಡುಗಬುದ್ಧಿಯದು. ಯಾವುದೇ ಹೊಸ ವಿಚಾರದಿಂದ ತನಗೆ ಭೌತಿಕ ಲಾಭವೇನಾದರೂ ಆಗಬಹುದೇನೆಂಬ ದೃಷ್ಟಿಯಿಂದಲೇ ಯೋಚನೆ. ಧರ್ಮ—ಅಧ್ಯಾತ್ಮಗಳನ್ನು ವ್ಯವಹಾರಶಾಸ್ತ್ರಗಳನ್ನಾಗಿ ಮಾರ್ಪಡಿಸಿ ಲೌಕಿಕಶಕ್ತಿ, ಸಂಪತ್ತು, ಶಾರೀರಿಕ ಸಾಮರ್ಥ್ಯ—ಇವನ್ನು ಸಾಧಿಸುವ ಉದ್ದೇಶದಿಂದಲೇ ಆ ಧರ್ಮಶಾಸ್ತ್ರಗಳನ್ನು ಉಪಯೋಗಿಸುವುದು. ಇಂಥ ವಿಚಾರಸರಣಿಯಿಂದ ವಿವೇಕಾನಂದರ ಮರ್ಮಕ್ಕೆ ಆದ ಆಘಾತ ಬೇರೆ

ಯಾವುದರಿಂದಲೂ ಆಗಿರಲಾರದು. ಅಧ್ಯಾತ್ಮದ ಉದ್ದೇಶವೆಂದರೆ ಅದರ ಸಾಧನೆ ಮಾತ್ರ, ಎಂದು ಭಾರತೀಯ ಯೋಗಿಗಳ ಮತ. ಅಧ್ಯಾತ್ಮ ಸಾಧನೆಯನ್ನು ಲೌಕಿಕ ಸಾಮರ್ಥ್ಯದ ಸಾಧನೆಗಾಗಿ ವಿನಿಯೋಗಿಸುವ ಅಕ್ಷಮ್ಯ ಅಪರಾಧವನ್ನು, ಪಾಪವನ್ನು ಅವರು ಎಂದಿಗೂ ಸಹಿಸರು. ಅದನ್ನು ವಿವೇಕಾನಂದರು ತೀವ್ರವಾಗಿ ಖಂಡಿಸಿದರು. ಅಮೇರಿಕೆಯ ಬುದ್ಧಿಯನ್ನು ಬೇರೆಡೆಗೆ ಎಳೆಯುವುದು ಉಚಿತವೆಂದು ಬರಬರುತ್ತ ವಿವೇಕಾನಂದರು ಮನಗಂಡರು. ಮುಂದೆ ಜ್ಞಾನಯೋಗದ ಪಾಠ ಹೇಳಹತ್ತಿದರು. ಅವರು ಇನ್ನೂ ಪ್ರಯೋಗವನ್ನು ನಡೆಯಿಸಿದ್ದರು. ಭಿನ್ನ ಜನಾಂಗದ ಮೇಲೆ ತಮ್ಮ ಪ್ರಭಾವವನ್ನು ಹೇಗೆ ಬೀರಬೇಕೆಂಬ ನಿರ್ಣಯಕ್ಕೆ ಅವರು ಇನ್ನೂ ಬಂದಿರಲಿಲ್ಲ.

೧೮೯೫ರ ಜುಲೈ ನಂತರ ತೀವ್ರವೇ (ವಿಶಿಷ್ಟ ಭಕ್ತಮಂಡಲದ ಮಧ್ಯದಲ್ಲಿ ಬೇಸಗೆಯನ್ನು ಕಳೆಯುತ್ತಿರುವಾಗ) ವಿವೇಕಾನಂದರು ತಮ್ಮ ಕಾರ್ಯದ ರೂಪರೇಷೆಯನ್ನು ಗೊತ್ತುಪಡಿಸಿದರು. ಸೇಂಟ್ ಲಾರೆನ್ಸ ನದಿಯ ಮೇಲ್ಗಡೆಯ ಅಡವಿಯ ಹತ್ತರ ಒಂದು ದಿನ್ನೆಯ ಮೇಲೆ, ವೇದಾಂತಪ್ರತಿಪಾದನೆಗಾಗಿ ಗುರುಪಾದದಲ್ಲಿ ಕಾಣಿಕೆಯೆಂದು ಅರ್ಪಿಸಲಾದ ಒಂದು ಮಂದಿರದಲ್ಲಿ ಆರಿಸಿ ತೆಗೆದ ಹನ್ನೆರಡು ಜನ ಶಿಷ್ಯರನ್ನು ಕೂಡಿಸಿದರು. ಸೇಂಟ್ ಜಾನ್ ಬರೆದ ಸುವಾರ್ತೆಯಲ್ಲಿಯ ಒಂದು ಭಾಗವನ್ನು ಓದಿ ತಮ್ಮ ಪ್ರವಚನಕ್ಕೆ ಆರಂಭ ಮಾಡಿದರು. ಏಳುವಾರ ಭಾರತದ ಪವಿತ್ರ ಗ್ರಂಥಗಳನ್ನು ಚರ್ಚಿಸಿದರು. ಅಲ್ಲದೆ ತಮ್ಮೆಡೆಗೆ ಬಂದ ಆತ್ಮಗಳಲ್ಲಿ ವೀರೋತ್ಸಾಹವನ್ನು ಉಕ್ಕಿಸುವ ಕಾರ್ಯ ಮಾಡಿದರು. " ಸ್ವಾತಂತ್ರ್ಯ, " " ಧೈರ್ಯ, " ಪಾವಿತ್ರ್ಯ, " "ಆತ್ಮ ನಿಂದೆಯ ಪಾಪ" ಮುಂತಾದವೇ ಅವರ ವಿಷಯಗಳಾಗಿದ್ದವು. ಅವರ ದೃಷ್ಟಿಯಲ್ಲಿ ಇದು ಹೆಚ್ಚು ಮಹತ್ವದ ಶಿಕ್ಷಣ.

" ವ್ಯಕ್ತಿತ್ವವೇ ನನ್ನ ಗುರಿ, " ಅವರು ಅಭೆಯಾನಂದರಿಗೆ ಬರೆದರು. ವ್ಯಕ್ತಿಗಳನ್ನು ತರಬೇತು ಮಾಡುವುದಕ್ಕಿಂತ ಹೆಚ್ಚಿನ ಮಹತ್ವಾ

ಕಾಂಕ್ಷೆ ನನಗಿಲ್ಲ."

ಅವರು ಇನ್ನೊಮ್ಮೆ ಅಂದರು:

" ಒಬ್ಬಾನೊಬ್ಬ ವ್ಯಕ್ತಿಗಾದರೂ ತನ್ನ ಮುಕ್ತಿ ಸಾಧಿಸಲು ನೆರವಾಗಿ ಗೆದ್ದರೆ, ನಾನು ನಿರರ್ಥಕವಾಗಿ ಹೆಣಗಲಿಲ್ಲ."

ಭಗವಾನ್ ರಾಮಕೃಷ್ಣರ ಪದ್ಧತಿಯನ್ನು ಅನುಸರಿಸಿದರು. ಎದುರಿನಲ್ಲಿ ಕುಳಿತು ಕೇಳುವವರ ತಲೆಯ ಮೇಲೆ ಹಾಯಿಸಿ, ವಕ್ತಾರರು ಬೋಧಕರು "ಜನತೆ" ಯೆಂದೆನ್ನುವ ಅವ್ಯಕ್ತ ವ್ಯಕ್ತಿಯನ್ನು ಉದ್ದೇಶಿಸಿ ಅವರು ಎಂದಿಗೂ ಪ್ರವಚನ ಮಾಡಲಿಲ್ಲ. ಕೇಳಲು ಕುಳಿತ ಪ್ರತಿಯೊಬ್ಬನನ್ನು ಉದ್ದೇಶಿಸಿಯೇ ಅವರು ಮಾತನಾಡುತ್ತಿದ್ದರು. "ಒಂದೊಂದು ವ್ಯಕ್ತಿಮಾತ್ರದಲ್ಲಿ ಇಡೀ ವಿಶ್ವವೇ ಹುದುಗಿಕೊಂಡಿದೆ." ಎಂದು ಅವರು ಅನ್ನುತ್ತಿದ್ದರು. ವಿಶ್ವದ ಮೂಲ ಕೇಂದ್ರ ವ್ಯಕ್ತಿಯಲ್ಲಿದೆ. ಒಂದು ಸಂಘದ ಮಹಾಸಂಸ್ಥಾಪಕರಾದಾಗ್ಯೂ ಕೊನೆಯವರೆಗೆ ಅವರು ಮುಖ್ಯತಃ ಸನ್ಯಾಸಿಗಳಾಗಿಯೇ ಬಾಳಿದರು. ಸನ್ಯಾಸಿಗಳನ್ನು ಮತ್ತು ಮುಕ್ತರನ್ನು ನಿರ್ಮಾಣ ಮಾಡುವುದೇ ಅವರ ಆಕಾಂಕ್ಷೆ. ಕೆಲ ವಿಶಿಷ್ಟ ಜೀವಿಗಳಿಗೆ ಮುಕ್ತಿಯನ್ನಿತ್ತು ಅವರನ್ನು ಮತ್ತೆ ಸ್ವಾತಂತ್ರ್ಯಪ್ರಸಾರಕರನ್ನಾಗಿ ಮಾಡುವುದೇ ಅಮೇರಿಕೆಯಲ್ಲಿ ಅವರ ನಿಶ್ಚಿತ ಸಂಕಲ್ಪ.

೧೮೯೫ರ ಬೇಸಗೆಯಲ್ಲಿ ಹಲವು ಜನ ಪಾಶ್ಚಾತ್ಯರು ಅವರ ಕೂಗಿಗೆ 'ಓ' ಗೊಟ್ಟು ಶಿಷ್ಯರಾದರು. ಆದರೆ ಈ ಜನ ಭಿನ್ನ ಪ್ರಕೃತಿಯವರೆಂದು ಮುಂದೆ ತಿಳಿಯಿತು. ಸುತ್ತು ಸುಳಿಯುವವರ ಭೂತಭವಿಷ್ಯಗಳನ್ನೆಲ್ಲ ಒಂದೇ ಮೊದಲ ನೋಟದಲ್ಲಿ ತಿಳಿದುಕೊಳ್ಳುವ ಶ್ರೀರಾಮಕೃಷ್ಣರ ಗರುಡದೃಷ್ಟಿ ವಿವೇಕಾನಂದರಲ್ಲಿ ಇರಲಿಲ್ಲ. ಹೋಗಹೋಗುತ್ತ ಕಾಳು-ಜಳ್ಳು ಎರಡನ್ನೂ ಹೊತ್ತು ಸಾಗುವರು. ನಾಳಿನ ದಿನ ಗಾಳಿ ಜಳ್ಳನ್ನು ತೂರಲಿ, ಕಾಳು ತಾನೇ ಉಳಿಯುವುದು ಎಂಬ ಭಾವನೆ ಅವರದು. ಆದರೆ ಆ ಗುಂಪಿನಲ್ಲಿ ಅವರು ತಮ್ಮ ಕೆಲ ಭಕ್ತೋತ್ತಮರನ್ನು ಮಾತ್ರ

ಆರಿಸಿದರು. ಅವರಲ್ಲಿ ಶಿಷ್ಯಶ್ರೇಷ್ಠನೆಂದರೆ ಜೆ. ಜಿ. ಗುಡ್ವಿನ್. ಆ ಇಂಗ್ಲಿಷ ತರುಣನು ತನ್ನ ಬಾಳನ್ನೆಲ್ಲ ಧಾರೆಯೆರೆದನು. ೧೮೯೫ ರ ಕೊನೆಯಿಂದ ಅವನು ವಿವೇಕಾನಂದರ ಸ್ವಯಂನಿಯುಕ್ತ ಕಾರ್ಯದರ್ಶಿಯಾದನು. ತಮ್ಮ ಬಲಗೈ ಎಂದು ಅವನ ಗುರು ಅವನಿಗೆ ಅನ್ನುತ್ತಿದ್ದರು. ಅಮೇರಿಕೆಯಲ್ಲಿ ಬಿತ್ತಿದ ಬೀಜವನ್ನು ಕಾಯ್ದಿರಿಸಿದ ಶ್ರೇಯ ಅವನದೇ.

೧೮೯೫ರ ಆಗಸ್ಟದಿಂದ ಡಿಸೆಂಬರ್‌ವರೆಗೆ ಅಮೇರಿಕೆಯಲ್ಲಿದ್ದು ವಿವೇಕಾನಂದರು ಇಂಗ್ಲಂಡಿಗೆ ಹೋಗಿ ಮತ್ತೆ ಚಳಿಗಾಲದಲ್ಲಿ ಮರಳಿ ಬಂದು ೧೮೯೬ರ ಎಪ್ರಿಲ್ ವರೆಗೆ ಅಮೇರಿಕೆಯಲ್ಲಿಯೇ ಇದ್ದರು. ವೇದಾಂತ-ಪಾಠಗಳ ಎರಡು ವ್ಯಾಖ್ಯಾನಮಾಲೆಗಳನ್ನು ಸಾಗಿಸಿದರು. ನ್ಯೂಯಾರ್ಕದಲ್ಲಿ ತಮ್ಮ ಮನೆಯಲ್ಲೂ ವರ್ಗಗಳಿಗೆ ಪಾಠ ಹೇಳುತ್ತಿದ್ದರು. ೧೮೯೫ರ ನವ್ಹಂಬರದಲ್ಲಿ ಪವಣಿಸಿದ ಮೊದಲನೆಯ ವ್ಯಾಖ್ಯಾನಮಾಲೆಯೆಂದರೆ ಕರ್ಮಯೋಗವಿಷಯಕವಾದುದು. ಅದು ಅವರ ಅತ್ಯುತ್ಕೃಷ್ಟ ಪ್ರವಚನವೆಂದು ಎಣಿಸಲಾಗಿದೆ. ಎರಡನೆಯದು ಭಕ್ತಿಯೋಗದ ಮೇಲೆ, ೧೮೯೬ರ ಫೆಬ್ರುವರಿಯಲ್ಲಿ.

ನ್ಯೂಯಾರ್ಕ್, ಬಾಸ್ಟನ್, ಡೆಟ್ರಾಯಿಟ್ ಮುಂತಾದ ಸ್ಥಳಗಳಲ್ಲೆಲ್ಲ ವ್ಯಾಖ್ಯಾನ ಕೊಟ್ಟರು— ಸಾರ್ವಜನಿಕ ಸಭೆಗಳಲ್ಲಿ, ಹಾರ್ಟ್‌ಫೋರ್ಡದ ಮೆಟಾಫೀಜಿಕಲ್ ಸೊಸಾಯಿಟಿಯಲ್ಲಿ, ಬ್ರೂಕ್‌ಲಿನ್ನದ ಎಥಿಕಲ್ ಸೊಸಾಯಿಟಿಯಲ್ಲಿ ಮತ್ತು ಹಾರ್ವರ್ಡದ ತತ್ವಜ್ಞಾನದ ವಿದ್ಯಾರ್ಥಿಗಳ ಮತ್ತು ಪ್ರೊಫೆಸರರ ಮುಂದೆ. ಪೌರ್ವಾತ್ಯ ದರ್ಶನಗಳ ಪ್ರೊಫೆಸರರಾಗಿರೆಂದು ಹಾರ್ವರ್ಡದಲ್ಲಿ ಅವರನ್ನು ಕೇಳಿದರು. ಸಂಸ್ಕೃತ ಪ್ರೊಫೆಸರರಾಗಿರೆಂದು ಕೊಲಂಬಿಯಾದಲ್ಲಿ ಕೇಳಿದರು. ನ್ಯೂಯಾರ್ಕದಲ್ಲಿ ಫ್ರಾನ್ಸಿಸ್ ಲೆಗೇಟರ ಅಧ್ಯಕ್ಷತೆಯಲ್ಲಿ ವೇದಾಂತ ಸೊಸಾಯಿಟಿಯನ್ನು ಸ್ಥಾಪಿಸಿದರು. ಈ ಸೊಸಾಯಿಟಿಯೇ ಮುಂದೆ ಅಮೇರಿಕೆಯಲ್ಲಿ ವೇದಾಂತ-ಆಂದೋಲನದ ಕೇಂದ್ರವಾಯಿತು.

ಧಾರ್ಮಿಕ ಸಹಿಷ್ಣುತೆ ಮತ್ತು ಸರ್ವವ್ಯಾಪಕತೆ ಇವೇ ಅವರ ಸಂದೇಶ. ಹೊಸ ಜಗತ್ತಿನಲ್ಲಿ ಮೂರು ವರ್ಷಗಳ ಪ್ರವಾಸ, ಪಾಶ್ಚಿಮಾತ್ಯರ ಧಾರ್ಮಿಕ ವಿಚಾರಗಳ ಸತತ ಪರಿಶೀಲನ— ಇವುಗಳಿಂದ ವಿಶ್ವಧರ್ಮದ ಅವರ ಆದರ್ಶ ಪರಿಪಕ್ವವಾಗಿದ್ದಿತು. ಆದರೆ ಅವರಲ್ಲಿ ಹಿಂದುತ್ವದ ಭಾವನೆ ಮಾತ್ರ ಧಕ್ಕೆ ತಗುಲಿ ನಿಂತಿದ್ದಿತು. ತನ್ನ ವಿಶ್ವವಿಜಯಿಯಾದ ಸಾಮರ್ಥ್ಯವನ್ನು ದೊರಕಿಸಿ ಭಾರತವು ಮತ್ತೆ ಪಶ್ಚಿಮದ ಮೇಲೆ ಜ್ಞಾನದ ಜೈತ್ರಯಾತ್ರೆಯನ್ನು ಕೈಕೊಳ್ಳಬೇಕಾದರೆ, ಭಾರತದ ಮಹಾ ಧಾರ್ಮಿಕ ಮತ್ತು ದಾರ್ಶನಿಕ ವಿಚಾರಗಳ ಸಂಪೂರ್ಣ ಪುನರ್ಘಟನೆಯಾಗುವುದು ಅತ್ಯಂತ ಅವಶ್ಯವೆಂದು ಅವರು ಮನಗಂಡಿದ್ದರು. ೧೮೯೭ ರಲ್ಲಿಯೇ ಮದ್ರಾಸಿನಲ್ಲಿಯೇ ಅವರು ಈ ಅಭಿಪ್ರಾಯವನ್ನು ಸಾರಿದ್ದರು. ವಿಚಾರಗಳ ಕಾಡು ಕಡಿದು ತೊಡಕು ಬಿಡಿಸಿ ವಿಶ್ವಾತ್ಮನ ಸುತ್ತು ಅವನ್ನೆಲ್ಲ ವರ್ಗೀಕರಿಸಿ ಮತ್ತೆ ಮಂಡಿಸಬೇಕು. ತೋರಿಕೆಯಲ್ಲಿ ಒಂದಕ್ಕೊಂದು ವಿರೋಧಿಯಾಗಿ ಕಾಣುವ ಭಾರತೀಯ ದರ್ಶನಗಳ—ದ್ವೈತ, ಅದ್ವೈತ, ವಿಶಿಷ್ಟಾದ್ವೈತ—ಇವುಗಳ ಮತ್ತು ಉಪನಿಷತ್ತುಗಳ ಸಮನ್ವಯವನ್ನು ಮಾಡಿ ಪಾಶ್ಚಾತ್ಯ ದಾರ್ಶನಿಕ ವಿಚಾರಗಳೊಂದಿಗೆ ಹೊಂದಿಸಿ, ಹಿಮಾಲಯದ ನೆಳಲಿನಲ್ಲಿ ಬೆಳೆದು ಬಂದ ಅತಿಪ್ರಾಚೀನ ದರ್ಶನಗಳಲ್ಲಿ ಮತ್ತು ಆಧುನಿಕ ವಿಜ್ಞಾನವು ಒಪ್ಪಿದ ತತ್ವಗಳಲ್ಲಿ ಸಾಮ್ಯಸಂಬಂಧಗಳನ್ನು ತೋರಿಸಬೇಕು. ಈ ದರ್ಶನಸಮನ್ವಯವುಳ್ಳ ವಿಶ್ವಧರ್ಮವನ್ನು ಕುರಿತು ಒಂದು ಮಹಾ ಗ್ರಂಥವನ್ನು ಬರೆಯಬೇಕು. ಇವೆಲ್ಲಕ್ಕಾಗಿ ಅವಶ್ಯವಿದ್ದ ಸಾಹಿತ್ಯ ಸಲಕರಣೆಗಳನ್ನು ಒದಗಿಸಬೇಕೆಂದು ತಮ್ಮ ಭಾರತೀಯ ಶಿಷ್ಯರಿಗೆ ಆಗ್ರಹದಿಂದ ಹೇಳಿದರು. ಭಾರತೀಯ ತತ್ವವಿಚಾರಗಳನ್ನು ಯುರೋಪದ ಭಾಷೆಗಳಲ್ಲಿ ಅನುವಾದಿಸಿ, ನೀರಸ ತತ್ವಜ್ಞಾನದಿಂದ, ಪುರಾಣಗಳ ಗೊಂದಲದಿಂದ ಮತ್ತು ವಿಚಿತ್ರ ಮಾನವಶಾಸ್ತ್ರದಿಂದ ಒಂದು ಸರಲ, ಸುಲಭ, ಲೋಕಪ್ರಿಯ ಮತ್ತು ಶಿಷ್ಟಸಮ್ಮತವಾದ ಧರ್ಮವನ್ನು

ಹೊರಡಿಸಬೇಕಾಗಿದೆ ಎಂದು ಅವರು ಪ್ರತಿಪಾದಿಸಿದರು.

ಈ ಸಾಹಸವೆಂದರೆ ಯುಗಯುಗಾಂತರಗಳಿಂದ ಬಂದ ಧರ್ಮ ಸೂತ್ರಗಳ ನಿಜವಾದ ಹೆಣಿಕೆಯಲ್ಲಿ ಅದಲು ಬದಲು ಮಾಡಿದಂತೆ ಆಗುವುದೆಂದು ಯಾರಾದರೂ ಸಹಜವಾಗಿ ಅನ್ನಬಹುದು. ಸಂಪ್ರದಾಯಶರಣ ಭಾರತೀಯರು ಮತ್ತು ಭಾರತೀಯ ಧರ್ಮದರ್ಶನಗಳ ಅಭ್ಯಾಸಿಗಳಾದ ಯುರೋಪೀಯ ಪಂಡಿತರು ಹೀಗೆ ಅಂದೇ ಅಂದರು. ಆದರೆ ವಿವೇಕಾನಂದರು ಅವರನ್ನು ನಂಬಲಿಲ್ಲ. ಇದಕ್ಕೆ ಸ್ವಾಮಿಯವರು ಅಂದರು:

"ಸತ್ಯವನ್ನು ಬಾಸಣಿಸಿ ಮಸಣಿಸಿ ಬಂದ ಸುಳ್ಳು ಸೂತ್ರಗಳ ಹೆಣಿಕೆಗಳನ್ನು ಹರಿದೊಗೆದರೇನೇ ಧರ್ಮದ ಮೂಲವಾದ ಗಾಢವಾದ ತಿರುಳು ಹೊರಬೀಳುವುದು." ಅನೇಕ ಸಲ ಅವರು ಈ ಮತವನ್ನು ಪ್ರತಿಪಾದಿಸಿದರು.

ಮೇಲಾಗಿ, ಎಂಥವೇ ಯಾವೇ ಕೆಲ ಗ್ರಂಥಗಳಲ್ಲಿ ಧರ್ಮತತ್ವ ಚಿರಂತನವಾಗಿ ಹುದುಗಿಕೊಂಡಿರುವುದೆಂಬುದನ್ನು ಅವರ ಮನಸ್ಸು ಸರ್ವಥಾ ಒಪ್ಪದು. ಧರ್ಮ ಪ್ರಗತಿಪರವಾದುದು. ಕ್ಷಣಮಾತ್ರವೇ ಆಗಲಿ ಅದರ ಪ್ರಗತಿ ಕುಂಠಿತವಾದರೆ ಅದು ಸತ್ತೇ ಹೋಯಿತು. ಅವರ ವಿಶ್ವಧರ್ಮದ ಆದರ್ಶ ಸಹ ಪ್ರಗಮನಶೀಲವೇ ಆಗಿದ್ದಿತು. ಪೂರ್ವ ಪಶ್ಚಿಮಗಳ ಸತತ ಸಮ್ಮಿಲನದಿಂದ ಅದು ಫಲವತ್ತಾಗಬೇಕಾಗಿದೆ. ಯಾವುದೇ ಒಂದು ಕಾಲದ ಯಾವುದೇ ಒಂದು ತತ್ವಕ್ಕೆ ಪೂರ್ವವಾಗಲಿ ಪಶ್ಚಿಮವಾಗಲಿ ಕೊನೆಯ ವರೆಗೆ ಅಂಟಿಕೊಂಡು ಇರಲಾರದು. ನಾನಾ ಜನರಲ್ಲಿ ವಿಧ ವಿಧ ವಿಚಾರಗಳ ಸತತ ವಿನಿಮಯವಾಗಿ ವಿಚಾರ ವಾಹಿನಿ ಅವ್ಯಾಹತವಾಗಿ ಹರಿದು ಅದರಲ್ಲಿ ಮಾನವನು ಮೀಯುತ್ತ ಮುಂದೆ ಸಾಗಬೇಕೆಂಬುದೇ ವೇದಾಂತ ಸಂಘದ ಒಂದು ಉದ್ದೇಶವಾಗಿತ್ತು.

# (೭) ಭಾರತ ಯುರೋಪಗಳ ಸಮ್ಮಿಲನ

ಮೇಲೆ, ಶುಷ್ಕವಾದರೂ ಬೆಳಕು ಚಿಮ್ಮುತ್ತಿರುವ ಮುಗಿಲು. ಕೆಳಗೆ ವಿದ್ಯುನ್ಮಯ ವಾತಾವರಣ. ಇಂಥ ನ್ಯೂಯಾರ್ಕ್‌ದಲ್ಲಿ ವಿವೇಕಾನಂದರ ಕರ್ಮಪ್ರತಿಭೆ ದೀಪದಂತೆ ಬೆಳಗಿತು. ಹೋರಾಟದ ಅಲ್ಲಕಲ್ಲೋಲದ ಆ ಪ್ರಪಂಚದಲ್ಲಿ ಆ ದೀಪ ಅವರನ್ನು ಸವೆಯಿಸಿತು. ವಿಚಾರ, ಲೇಖ, ಆವೇಶ ತುಂಬಿದ ಭಾಷಣ ಪ್ರವಚನ–ಇವುಗಳಲ್ಲಿ ಅವರು ಮಾಡಿದ ಶಕ್ತಿವಿನಿಯೋಗ ಪ್ರಕೃತಿಯ ಮೇಲೆ ಪರಿಣಾಮವನ್ನು ಮಾಡಿತು. ಜನಜಂಗುಳಿಯ ಜಂಜಾಲದಿಂದ ಹೊರಗೆ ಬರುತ್ತಲೆ 'ದೂರೊಂದು ಮೂಲೆಯಲ್ಲಿ ಬಿದ್ದುಕೊಂಡು ಕಣ್ಣು ಮುಚ್ಚಲಾ?' ಎನ್ನುವಂತೆ ಅವರಿಗೆ ಆಗುತ್ತಿತ್ತು. ಕಾಯಿಲೆಗೆ ಗುರಿಯಾದ ಅವರ ದೇಹ ಮಿತಿಮೀರಿದ ಈ ದಣುವಿನಿಂದ ಗಾಸಿಯಾಯಿತು. ಇದರಿಂದ ಅವರು ಸಂಪೂರ್ಣವಾಗಿ ಎಂದಿಗೂ ಗುಣ ಹೊಂದಲೇ ಇಲ್ಲ. ಇದೇ ಸುಮಾರಕ್ಕೆ ಅವರಿಗೆ ಅನಿಸಿತು, ಸಾವು ಹತ್ತಿರಕ್ಕೆ ಬರಹತ್ತಿದೆಂದು. "ಮುಗಿಯಿತು ನನ್ನ ಅವತಾರ," ಎಂದರೊಮ್ಮೆ ಅವರು.

ಆದರೆ ಆ ಮಹಾ ಕರ್ಮಲೀಲೆ, ಆ ವೀರ ಧೀರ ಜೀವನಧ್ಯೇಯ ಅವರನ್ನು ಕೂಗಿತು.

ಯುರೋಪದ ಪ್ರವಾಸದಿಂದ ವಿರಾಮ ಸಿಗಬಹುದೆಂದು ವಿಚಾರ ಮಾಡಿದರು. ಆದರೆ ಹೋದಲ್ಲೆಲ್ಲ ತಮ್ಮ ಸಾಮರ್ಥ್ಯವನ್ನು ಅವರು ವಿನಿಯೋಗಿಸದೆ ಬಿಡಲಿಲ್ಲ. ೧೮೯೫ ರ ಸಪ್ಟೆಂಬರದಿಂದ ನವ್ಹಂಬರ್ ಕೊನೆಯ ವರೆಗೆ, ೧೮೯೬ರ ಎಪ್ರಿಲ್‌ದಿಂದ ಜುಲೈ ಕೊನೆಯವರೆಗೆ ಮತ್ತು ಅಕ್ಟೋಬರದಿಂದ ಡಿಸೆಂಬರ ೧೬ ನೇ ದಿನಾಂಕದ ವರೆಗೆ ಹೀಗೆ ಮೂರು ಸಲ ಇಂಗ್ಲಂಡದಲ್ಲಿ ವಾಸ ಮಾಡಿದರು. ಅಮೇರಿಕೆಗಿಂತಲೂ ಹೆಚ್ಚಾಗಿ ಅದು ಅವರ ಮನಸ್ಸಿನ ಮೇಲೆ ಆಳವಾದ ಅಚ್ಚನ್ನೊತ್ತಿತು. ಅಮೇರಿಕೆಯ ವಿಷಯದಲ್ಲಿ ಅವರು ದೂರಬೇಕಾದುದೇನೂ ಇರಲಿಲ್ಲ.

ವಿರೋಧಿಯಾದ ಭಾವನೆಗಳನ್ನು ಎದುರಿಸಬೇಕಾಯಿತೇನೋ ನಿಜ. ಹೆಂಗುಸರಿಂದ ದೂರ ಜಾರಬೇಕಾಯಿತೇನೋ ಸರಿ. ಆದರೂ ಒಟ್ಟಿನಲ್ಲಿ ಅಮೇರಿಕೆಯಲ್ಲಿ ಅತ್ಯಂತ ಕೋಮಲಹೃದಯಿಗಳ ಸಹಾನುಭೂತಿ, ಪರಮ ಭಕ್ತಿಪರವಶ ಸಹಾಯಕರು, ಬಿತ್ತಿಗೆಗಾಗಿ ಹವಣಿಸಿ ಹಾತೊರೆದ ನೆಲ–ಇವೆಲ್ಲ ಅವರಿಗೆ ಸಿಕ್ಕಿದವು.

ಆದರೆ ಈ ಪುರಾತನ ಪ್ರಪಂಚದಲ್ಲಿ—ಇಂಗ್ಲಂಡದಲ್ಲಿ—ಕಾಲಿಟ್ಟ ಕ್ಷಣವೇ ಬುದ್ಧಿಮತ್ತೆಯ ಬೇರೊಂದು ವಾತಾವರಣದಲ್ಲಿ ಉಸಿರಾಡಿಸಬೇಕಾಯಿತು. ಶಕ್ತಿಯನ್ನು — ರಾಜಯೋಗವನ್ನು—ಹದಗೆಡಿಸಿಯೂ ಅದರಿಂದ ಲೋಕವನ್ನು ಗೆಲ್ಲುವ ಹವ್ಯಾಸದಿಂದ ಅದರ ಅನಿಷ್ಟ ರಹಸ್ಯಗಳನ್ನು ಅರಿಯಬಯಸುವ ತರುಣರ ತಂಡದ ಟೊಳ್ಳು–ಕಾಡು–ಆಕಾಂಕ್ಷೆ ಇಲ್ಲಿರಲಿಲ್ಲ. ಇಲ್ಲಿ ಸಾವಿರಾರು ವರ್ಷ ಪರಿಶ್ರಮದಿಂದ ಹರಿದ ವಿಚಾರವಾಹಿನಿ ಅದ್ವೈತಿಗಳಾದ ವಿವೇಕಾನಂದರಿಗೆ ಅತ್ಯಂತ ಅವಶ್ಯವೆನಿಸಿದ ಜ್ಞಾನಯೋಗದ ಕಡೆಗೆ ಪ್ರತ್ಯಕ್ಷವಾಗಿ ಹರಿಯಲನುವಾಗಿತ್ತು. ಯುರೋಪಕ್ಕೆ ಅದನ್ನು ತಿಳಿಸಿ ಹೇಳುವಾಗ ಪ್ರಾಥಮಿಕ ವರ್ಗದ ಮುಂದಿನ ಮಟ್ಟದಲ್ಲಿ ಅವರು ಆರಂಭಿಸಲು ಶಕ್ಯವಾಯಿತು. ಅದನ್ನು ಸರಿಯಾಗಿ ಶಾಸ್ತ್ರೀಯವಾಗಿ ವಿಮರ್ಶಿಸಲು ಯುರೋಪದ ಜನ ಸಮರ್ಥವಿತ್ತು. ಅಮೇರಿಕೆಯಲ್ಲಿ ಪ್ರೊಫೆಸರ್ ರಾಯಿಟ್, ತತ್ವಜ್ಞಾನಿಯಾದ ವಿಲ್ಯಮ್ ಜೇಮ್ಸ್, ವಿದ್ಯುತ್ತಂತ್ರನಿಪುಣರಾದ ನಿಕೋಲಸ್ ಟಿಸ್ಲಾ–ಇಂಥ ವಿಖ್ಯಾತ ವಿದ್ಯಾವಂತರು ವಿವೇಕಾನಂದರ ಹತ್ತರ ಸೇರಿ ತಮ್ಮ ಸಹಾನುಭೂತಿ ಆಸ್ಥೆಗಳನ್ನು ತೋರಿದರೂ, ಅವರೆಲ್ಲರೂ ಹಾರ್ವರ್ಡ್‌ದಲ್ಲಿಯ ತತ್ವಜ್ಞಾನದ ಪದವೀಧರರಂತೆ ಭಾರತೀಯ ಅಧ್ಯಾತ್ಮ ಶಾಸ್ತ್ರದ ಕ್ಷೇತ್ರದಲ್ಲಿ ಹೊಸಬರೇ ಸರಿ.

ಯುರೋಪದಲ್ಲಿ ಮ್ಯಾಕ್ಸ್ ಮುಲರ್ ಪಾಲ ಡಾಯಿಸನ್‌ರಂಥ ಭಾರತ–ಜ್ಞಾನವಿಶಾರದರನ್ನು ವಿವೇಕಾನಂದರು ಸಂಧಿಸುವುದಿತ್ತು. ಭಾಷಾಶಾಸ್ತ್ರ ಮತ್ತು ತತ್ವಜ್ಞಾನಗಳ ಅಭ್ಯಾಸದಲ್ಲಿ ಪಾಶ್ಚಾತ್ಯ ಪಂಡಿ

ತರು ಅದೆಂಥ ಅವ್ಯಾಹತ ತತ್ಪರತೆಯಿಂದ ಮತ್ತು ನಿಷ್ಕಲಂಕ ಸತ್ಯ ಪ್ರಿಯತೆಯಿಂದ ದುಡಿಯುತ್ತಾರೆಂಬುದನ್ನು ಕಾಣುವುದಿತ್ತು — ಕಂಡು ಅವರ ಅಂತಃಕರಣ ಪರವಶವಾಯಿತು. ಭಾರತೀಯರಿಗೆ ಗೋತ್ತಾಗ ದೆಯೂ ಇಂಥ ಪಾಶ್ಚಾತ್ಯ ಪಂಡಿತರು ಇಷ್ಟು ಪ್ರೀತಿಭಕ್ತಿಗಳಿಂದ ಭಾರತಕ್ಕೆ ಸಲ್ಲಿಸುತ್ತಿರುವ ಸೇವೆ ಅನ್ಯಾದೃಶವಾದುದು ಎಂಬುದನ್ನು ಅರಿತರು.

ಇಂಗ್ಲಂಡದಲ್ಲಿ ಮಾತ್ರ ಹೊಸದೊಂದು ಶೋಧ—ಬೇರೊಂದು ಭಾವನೆ—ಅವರಿಗಾಗಿ ಕಾದಿದ್ದಿತು. ಹಗೆಯಾಗಿ ಅಲ್ಲಿ ಕಾಲಿಟ್ಟರು. ಸ್ನೇಹಕ್ಕೆ ಸೋತರು. ಮುಂದೆ ಭಾರತಕ್ಕೆ ಮರಳಿ ಬಂದಾಗ ನಿರ್ಮಲ ಸತ್ಯನಿಷ್ಠೆಯಿಂದ ಸಾರಿದರು:

"ಇಂಗ್ಲೀಷರ ವಿಷಯದಲ್ಲಿ ಹೃದಯದಲ್ಲಿ ಹಗೆತನ ಬಗೆದು ನನ್ನಂತೆ ಅನ್ಯರಾರೂ ಇಂಗ್ಲಂಡದ ನೆಲದ ಮೇಲೆ ಕಾಲಿಟ್ಟಿರಲಾರರು........ಈಗ ನನ್ನಂತೆ ಇಂಗ್ಲೀಷರನ್ನು ಪ್ರೀತಿಸುವವರಾರೂ ನಿಮ್ಮಲ್ಲಿ ಇರಲಾರರು...."

ಇಂಗ್ಲಂಡ್‌ದಿಂದ ೧೮೯೬ರ ಅಕ್ಟೋಬರ್ ೮ನೇ ದಿನ ಅಮೇರಿಕೆಯ ಶಿಷ್ಯರೊಬ್ಬರಿಗೆ ಬರೆದ ಪತ್ರದಲ್ಲಿ ಅಂದಿರುವರು:

"ಇಂಗ್ಲೀಷರ ವಿಷಯದಲ್ಲಿ ನನ್ನ ವಿಚಾರಗಳಲ್ಲಿ ಕ್ರಾಂತಿಯೇ ಆಗಿ ಹೋಗಿದೆ."

ಅವರು ಕಂಡುದು: "ಒಂದು ವೀರರ ಜನಾಂಗ. ನಿಜವಾದ ಕ್ಷತ್ರಿಯರು.....ಶೂರರು. ಸ್ಥಿರಚಿತ್ತರು....ಭಾವನೆಗಳನ್ನು ಬಚ್ಚಿಡುವುದು, ಬಯಲಿಗೆ ಬೀರದಿರುವುದು — ಇದು ಅವರ ಶಿಕ್ಷಣ. ಆದರೆ ಇಂಗ್ಲೀಷರ ಈ ವೀರಾವೇಶದ ಕೆಚ್ಚೆದೆಯ ಕೆಳಗೂ ಭಾವನೆಗಳ ಆಳವಿದೆ. ಅದನ್ನು ಅಲುಗಿಸಲು ನೀವು ಒಮ್ಮೆ ಅರಿತರೆ ಸಾಕು, ಅವರು ನಿಮ್ಮ ಚಿರಂತನ ಮಿತ್ರರು. ಅವರ ಮೆದುಳಿನಲ್ಲಿ ನೀವು ಒಮ್ಮೆ ಒಂದು ವಿಚಾರವನ್ನು ಹಾಕಿದರಾಯಿತು. ಅದು ಅಲ್ಲಿಂದ ಎಂದಿಗೂ ಹೊರಗೆ ಹೋಗದು. ಅಲ್ಲಿಯೇ ಅಂಕುರಿಸಿ ಫಲಿಸುವುದು. ಹೀಗಿದೆ ಆ ಜನಾಂಗದ

ಅಪಾರ ವ್ಯವಹಾರಕುಶಲತೆ ಮತ್ತು ಉತ್ಸಾಹ........ದಾಸ್ಯವೃತ್ತಿಯನ್ನ ರಿಯದ ವಿಧೇಯತೆ—ಉದಾತ್ತ ಸ್ವಾತಂತ್ರ್ಯಭಾವನೆ ಮತ್ತು ಮಹಾ ನಿಯಮಬದ್ಧತೆ ಇವುಗಳ ಸಮನ್ವಯ—ಇವೆಲ್ಲವುಗಳ ರಹಸ್ಯವನ್ನು ಅವರು ಅರಿತಿದ್ದಾರೆ."

ನೋಡಿದರೆ ಈರ್ಷ್ಯೆ ಹುಟ್ಟಿಸುವಂಥ ಜನಾಂಗ ! ತನ್ನ ದಬ್ಬಾಳಿಕೆಗೆ ಗುರಿಯಾದವರಿಂದಲೂ ಗೌರವವನ್ನು ಸೆಳೆಯುತ್ತದೆ. ದಾಸ್ಯದಲ್ಲಿ ಸಿಲುಕಿ ಬಳಲುವ ತಮ್ಮ ಜನರ ಉದ್ಧಾರಕ್ಕಾಗಿ ಬದ್ಧಕಂಕಣರಾದ ಮತ್ತು ರಾಷ್ಟ್ರದ ಮೂರ್ತಿವೆತ್ತ ಸದಸದ್ವಿವೇಕಬುದ್ಧಿಯಂತಿರುವ ರಾಮ ಮೋಹನರು, ವಿವೇಕಾನಂದರು, ಟಾಗೋರರು, ಗಾಂಧಿಯವರು ಸಹ ತಮ್ಮನ್ನು ಗೆದ್ದು ಆಳುವವರಲ್ಲಿ ಘನತೆಯನ್ನು ಕಂಡಿದ್ದಾರೆ. ಆಳರಸರನ್ನು ಅದಲು ಬದಲು ಮಾಡುವುದಾದಲ್ಲಿ ಅವರು ಬೇರೆಯವರನ್ನು ಆರಿಸಲಾರರು. ಇಂಗ್ಲೆಂಡ್ ತನ್ನ ಸತ್ತೆಯ ರಾಕ್ಷಸೀ ದುರುಪಯೋಗವನ್ನು ಮಾಡಿಕೊಂಡಿದೆಯಾದರೂ, ಯುರೋಪ್ ಅಮೇರಿಕಾ ಖಂಡಗಳಲ್ಲಿಯ ಯಾವ ಪಾಶ್ಚಾತ್ಯ ರಾಷ್ಟ್ರವೂ ಭಾರತೀಯ ವಿಚಾರಗಳ ಅನಿರ್ಬಂಧ ಬೆಳವಣಿಗೆಗೆ ಇಂಗ್ಲೆಂಡ್ ಕೊಟ್ಟಷ್ಟು ಪರಮಾವಧಿ ಅವಕಾಶವನ್ನು ಕೊಡುತ್ತಿರಲಿಲ್ಲ.

ಆದರೆ ಇಂಗ್ಲೆಂಡನ್ನು ಹೊಗಳಿದರೂ ವಿವೇಕಾನಂದರು ತಮ್ಮ ಭಾರತೀಯ ಕರ್ತವ್ಯವನ್ನೆಂದಿಗೂ ಮರೆಯಲಿಲ್ಲ. ಇಂಗ್ಲೆಂಡದ ರಾಜಕೀಯ ಘನತೆಯನ್ನು ಭಾರತೀಯ ಆಧ್ಯಾತ್ಮಿಕ ಸತ್ತೆಗಾಗಿ ವಿನಿಯೋಗಿಸಬೇಕೆಂಬ ಮನೀಷೆ ಅವರದು. ಅವರು ಮುಂದೊಮ್ಮೆ ಬರೆದರು:

" ಅದರ ಎಲ್ಲ ದೋಷಗಳಿರುವಾಗಲೂ ವಿಚಾರಪ್ರಸರಣಕ್ಕೆ ಬ್ರಿಟಿಶ್ ಸಾಮ್ರಾಜ್ಯವೇ ಒಂದು ಮಹಾ ಯಂತ್ರ. ಆ ಯಂತ್ರದ ಮಧ್ಯದಲ್ಲಿ ನನ್ನ ವಿಚಾರಗಳನ್ನು ಸೇರಿಸಬೇಕೆಂದಿರುವೆ. ಅವು ಜಗತ್ತಿನ ತುಂಬೆಲ್ಲ ಹರಡುವವು......... ಆಧ್ಯಾತ್ಮಿಕ ವಿಚಾರಗಳು ಎಂದಿಗೂ ದಲಿತ (ಯಹೂದೀ, ಗ್ರೀಕ್ ಮುಂತಾದ)ಜನಾಂಗಗಳಿಂದಲೇ ಬರುವವು."

ಮೊದಲನೆಯ ಸಲ ಇಂಗ್ಲಂಡಕ್ಕೆ ಹೋದಾಗ ಮದ್ರಾಸದಲ್ಲಿಯ ತಮ್ಮ ಶಿಷ್ಯರೊಬ್ಬರಿಗೆ ಬರೆದರು:

"ಇಂಗ್ಲಂಡ್‌ದಲ್ಲಿ ನನ್ನ ಕಾರ್ಯ ನಿಜವಾಗಿಯೂ ಉಜ್ವಲವಾಗಿದೆ."

ಇಂಗ್ಲಂಡ್‌ದಲ್ಲಿ ಕಾಲಿಡುತ್ತಿರುವಾಗಲೇ ಅವರ ಯಶೋದುಂದುಭಿ ಮೊಳಗಿತು. ವೃತ್ತಪತ್ರಗಳು ಆವೇಶದಿಂದ ಹೊಗಳಿದವು. ಅವರ ಹಿಂದೆ ಬೆಳಗಿ ಹೋದ ಭಾರತೀಯ ಮಹಾಪುರುಷರಾದ ರಾಮಮೋಹನ ರಾಯ, ಕೇಶಬ್‌ಚಂದ್ರ ಸೇನ್, ಅಷ್ಟೇ ಏಕೆ ಭಗವಾನ್ ಬುದ್ಧ ಕ್ರಿಸ್ತರಂಥ ಅತ್ಯುಚ್ಚ ಮಹಾ ಧರ್ಮದಾನಿಗಳ ಕೂಡ ವಿವೇಕಾನಂದರ ನೈತಿಕ ವ್ಯಕ್ತಿತ್ವದ ತುಲನೆಯಾಗಹತ್ತಿತು. ಸಿರಿವಂತರಲ್ಲಿಯೂ ಅವರಿಗೆ ಸನ್ಮಾನ ಸಿಕ್ಕಿತು. ಚರ್ಚ್‌ಗಳ ಮುಖ್ಯಾಧಿಕಾರಿಗಳೂ ಕೂಡ ಸಹಾನುಭೂತಿಯನ್ನು ತೋರಿದರು.

ಇಂಗ್ಲಂಡಿಗೆ ಎರಡನೆಯ ಸಲ ಹೋದಾಗಂತೂ ವೇದಾಂತದ ನಿತ್ಯವರ್ಗಗಳನ್ನೇ ನಡೆಯಿಸಿದರು. ಜನರ ಬುದ್ಧಿಮತ್ತೆಯನ್ನು ಅನುಲಕ್ಷಿಸಿ ಜ್ಞಾನಯೋಗದ ಪಾಠಗಳನ್ನು ಪ್ರಾರಂಭಿಸಿದರು. ಅದಲ್ಲದೆ ಪಿಕ್ಯಾಡಿಲ್ಲಿ ಚಿತ್ರಶಾಲೆಯಲ್ಲಿ, ಪ್ರಿನ್ಸೆಸ್ ಹಾಲಿನಲ್ಲಿ, ಕ್ಲಬ್‌ಗಳಲ್ಲಿ, ಶೈಕ್ಷಣಿಕ ಸಂಘಗಳಲ್ಲಿ, ಆನೀ ಬೆಝೂಂಟ್ ಲಾಜ್‌ದಲ್ಲಿ ಮತ್ತು ಅನೇಕ ಅನೌಪಚಾರಿಕ ಜನಸಮೂಹಗಳಲ್ಲಿ ಅವರು ಹಲವು ವ್ಯಾಖ್ಯಾನಗಳನ್ನು ಕೊಟ್ಟರು. ' ಲಕ್ಷ್ಯವನ್ನಿತ್ತು ಗಾಂಭೀರ್ಯದಿಂದ ಕೇಳುವ ಇಂಗ್ಲೀಷ್ ಶ್ರೋತೃವೃಂದವೆತ್ತ ಮತ್ತು ಮೇಲ್ತೋರಿಕೆಯ ತಲ್ಲೀನತೆಯ ಅಮೇರಿಕೆಯ ಜನಜಂಗುಳಿ ಎತ್ತ '! ಎಂದೆನಿಸಿತು ಅವರಿಗೆ. ಅಮೇರಿಕೆಯುವರಿಗಿಂತ ಇಂಗ್ಲೀಷರು ಬುದ್ಧಿಮತ್ತೆಯಲ್ಲಿ ಕೆಲಮಟ್ಟಿಗೆ ಕಡಮೆಯುವರು ಮತ್ತು ಹೆಚ್ಚು ಸಂಪ್ರದಾಯಶರಣರು. ಆದರೆ ಇಂಗ್ಲೀಷರು ಒಮ್ಮೆ ಮನಸೋತರೆ ಪೂರ್ಣ ಪರವಶರಾಗಿ ಹೋಗುತ್ತಾರೆ. ಅರ್ಧ ಮರ್ಧ ಹಿಂದು ಮುಂದು ಎನ್ನುವುದನ್ನು ಅವರು ಅರಿಯರು. ಹೆಚ್ಚು ಸಲಿಗೆಯೆನಿಸಿ ವಿವೇಕಾನಂದರು ಅವರನ್ನು ಹೆಚ್ಚಾಗಿ ನಂಬಿದರು. ಭಕ್ತಿ

ಹೀನರ ಕಣ್ಣಿನಿಂದ ಇಂದಿನವರೆಗೆ ಆವರು ಮರೆಮಾಜಿದ ತಮ್ಮ ಪ್ರೀತಿಯ ಗುರುವಿನ—ಭಗವಾನ್ ರಾಮಕೃಷ್ಣರ—ವಿಷಯದಲ್ಲಿ ಮಾತ ನಾಡಿದರು. ಭಕ್ತಿಪರವಶವಾದ ನಮ್ರತೆಯಿಂದ ಅವರು ಉಸುರಿದರು:

"ನಾನು ಇದ್ದುದೆಲ್ಲ ಆ ಗುರುವಿನಿಂದಲೇ ಬಂದುದು............ ನನ್ನದೆನ್ನುವ ವಿಚಾರ ಅಣುಮಾತ್ರವೂ ಇಲ್ಲ........"

"ಶ್ರೀರಾಮಕೃಷ್ಣರೆಂದರೆ ಪ್ರಪಂಚದಲ್ಲಿಯ ಅಧ್ಯಾತ್ಮಜೀವನದ ವಸಂತಕಾಲ" ಎಂದು ಸಾರಿದರು.

ಅವರನ್ನು ಮ್ಯಾಕ್ಸ್‌ಮುಲರರ ಹತ್ತಿರಕ್ಕೆ ಕರೆದೊಯ್ದುವರೆಂದರೆ ಶ್ರೀರಾಮಕೃಷ್ಣರೇ. ಭಾರತದ ಧಾರ್ಮಿಕ ಚೈತನ್ಯಲಹರಿಯನ್ನು ನಿತ್ಯ ನವ ಕೌತುಕದಿಂದ ಕಾಣುವ ಆ ವಯೋವೃದ್ಧ ಪ್ರೊಫೆಸರರಿಗೆ ಮೂಡ ಣದ ಮುಗಿಲಿನಲ್ಲಿ ಶ್ರೀರಾಮಕೃಷ್ಣರ ಉದಯೋನ್ಮುಖ ಜ್ಯೋತಿ ಕಂಗೊಳಿಸಿತು. ಈ ಹೊಸ ಅವತಾರವನ್ನು ಕಣ್ಣಾರೆ ಕಂಡವರನ್ನು ಕೇಳುವ ಕುತೂಹಲ ಹೆಚ್ಚಿತು. ಅವರ ಬಿನ್ನಹವನ್ನು ಮನ್ನಿಸಿ ವಿವೇಕಾ ನಂದರ ಗುರುಸ್ಮೃತಿಯ ಕೆಲ ಟಿಪ್ಪಣಿಗಳನ್ನು ಮಾಡಿಕೊಟ್ಟರು. ಆ ಟಿಪ್ಪಣಿಗಳ ಆಧಾರದಿಂದಲೇ ಮ್ಯಾಕ್ಸಮುಲರರು ಶ್ರೀರಾಮಕೃಷ್ಣರ ಚಿಕ್ಕ ಜೀವನಚರಿತ್ರೆಯನ್ನು ಬರೆದುದು. ಬಂಗಾಲದ ಆಕಾಶದಲ್ಲಿ ಬೆಳಗಿ ಹೋದ ಪರಮಹಂಸರನ್ನು ದೂರದಿಂದಲೇ ಕಂಡು ಸಾರಿದ ಆ ಆಕ್ಸ್ ಫೋರ್ಡದ ಜ್ಞಾನಯೋಗಿಯ ಕಡೆಗೆ ವಿವೇಕಾನಂದರ ಮನಸ್ಸು ಹರಿ ಯಿತು. ೧೮೯೬ರ ಮೇ ೨೮ನೇ ದಿನ ಮ್ಯಾಕ್ಸ್‌ಮುಲರರ ಮನೆಗೆ ಹೋಗಲು ಕರೆ ಬಂದಿತು. ಭಾರತದ ತರುಣ ಸ್ವಾಮಿ ಯುರೋಪದ ವೃದ್ಧ ತಪಸ್ವಿಯನ್ನು ವಂದಿಸಿದರು. ಪ್ರಾಚೀನ ಋಷಿಯ ಅವತಾರ ವೆಂದರು. ವೈದಿಕ ಭಾರತದಲ್ಲಿ ಮ್ಯಾಕ್ಸ್‌ಮುಲರರು ತಾಳಿದ ಪೂರ್ವ ಜನ್ಮಗಳನ್ನು ನೆನೆದರು; 'ಪ್ರತಿಕ್ಷಣವೂ ಬ್ರಹ್ಮಸಾಕ್ಷಾತ್ಕಾರ ಹೊಂದು ತ್ತಿರುವ ಮಹಾತ್ಮಾ' ಎಂದರು.

ಬಾಳಿನ ಪರಮ ಮನೋರಮವಾದ ಮೈತ್ರಿಯ ರೂಪದಲ್ಲಿ

ಇನ್ನೂ ಹೆಚ್ಚಿನ ಕಾಣಿಕೆಗಳನ್ನು ಸ್ವಾಮಿಯವರಿಗೆ ಇಂಗ್ಲಂಡ್ ಕೊಡುವುದಿತ್ತು: ಜೆ. ಜೆ. ಗುಡ್ವಿನ್, ಮಾರ್ಗರೆಟ್ ನೋಬಲ್, ಶ್ರೀಮಾನ್ ಮತ್ತು ಶ್ರೀಮತಿ ಸೇವಿಯರರು.

ನ್ಯೂಯಾರ್ಕದಲ್ಲಿ ೧೮೯೫ರ ಕೊನೆಯಲ್ಲಿ ಸ್ವಾಮಿಯವರನ್ನು ಗುಡ್ವಿನ್ ಮೊದಲು ಕಂಡರು. ಸ್ವಾಮಿಯವರು ಹೇಳುತ್ತಿದ್ದಂತೆ ಪ್ರವಚನಗಳನ್ನು ಬರೆದುಕೊಳ್ಳಲು ಕುಶಲ ಲಘುಲೇಖಕರೊಬ್ಬರು ಬೇಕಾಗಿದ್ದರು. ಸಾಕಷ್ಟು ಸುಶಿಕ್ಷಿತರಾದವರು ದೊರಕುವುದು ಕಠಿಣವಾಗಿತ್ತು. ಇಂಗ್ಲಂಡ್‌ದಿಂದ ಬರುತ್ತಲೆ ಗುಡ್ವಿನ್ನರು ಈ ಕೆಲಸ ವಹಿಸಿದರು. ಹದಿನೈದು ದಿನ ಇವರ ಕೆಲಸ ನೋಡಬೇಕು ಎಂದರು ಸ್ವಾಮಿ. ನೋಡಿದುದಾಯಿತು. ಆ ಹದಿನೈದು ದಿನ ಮುಗಿಯುವುದರಲ್ಲಿಯೇ ತಾವು ಬರೆದುಕೊಳ್ಳುತ್ತಿದ್ದ ವಿಚಾರವಾಹಿನಿಯಲ್ಲಿ ಮಿಂದು ಪಾವನರಾಗಿ ತಮ್ಮದೆನ್ನುವುದನ್ನೆಲ್ಲ ತೊರೆದು ಸ್ವಾಮಿಯವರಿಗೆ ಗುಡ್ವಿನ್ನರು ಆತ್ಮಾರ್ಪಣ ಮಾಡಿದರು. ವೇತನ ಬೇಡೆಂದರು. ಹಗಲಿರುಳು ದುಡಿದರು. ಹೋದಹೋದಲ್ಲಿ ಸ್ವಾಮಿಯವರ ನೆಳಲಿನಂತೆ ಹಿಂಬಾಲಿಸಿದರು. ನಲ್ಮೆಯಿಂದ ಭಕ್ತಿಯಿಂದ ಸೇವೆ ಮಾಡಿದರು. ಬ್ರಹ್ಮಚರ್ಯವ್ರತ ಸ್ವೀಕರಿಸಿದರು. ಅಕ್ಷರಶಃ ತಮ್ಮ ಬಾಳನ್ನು ಸ್ವಾಮಿಯವರಿಗೆ ಮೀಸಲು ಮುಡುಪಾಗಿರಿಸಿದರು. ತಮ್ಮ ದೇಶ, ತಮ್ಮ ಕೋಶ, ತಮ್ಮ ಮನೆ, ತಮ್ಮ ಮಾರು, ತಮ್ಮ ಜನ, ತಮ್ಮ ಮನ, ಎಲ್ಲವೂ ಸ್ವಾಮಿಯವರೇ ಎಂದರು! ಈ ರೀತಿ ಶ್ರದ್ಧೆಭಕ್ತಿಗಳಿಂದ ಪರವಶರಾಗಿ ಸ್ವಾಮಿಯವರ ಬೆಂಬಲಿಗರಾಗಿ ಭಾರತಕ್ಕೆ ಬಂದರು!............ಆದರೆ............ಅಕಾಲಮೃತ್ಯುವಶರಾದರು!

ಮಾರ್ಗರೆಟ್ ನೋಬಲ್ ಮಾಡಿದ ಆತ್ಮಸಮರ್ಪಣ ಸಹ ಇಂಥದೇ. ಗುರು ಸ್ವಾಮಿ ವಿವೇಕಾನಂದರ ಹೆಸರಿನ ಜೊತೆಯಲ್ಲಿ ಭಗಿನೀ ನಿವೇದಿತಾ ಎಂಬುದಾಗಿ ಅವಳು ದೀಕ್ಷೆ ಹೊಂದಿದಾಗಿನ ಹೆಸರು ಭವಿಷ್ಯದಲ್ಲಿ ಉಳಿಯುವುದು. ತಮ್ಮ ಶಿಷ್ಯರಾಗಲು ಹವಣಿಸುವವರ

ಸತ್ವಪರೀಕ್ಷೆ ಮಾಡುವುದು ಸ್ವಾಮಿಯವರ ಕಠೋರ ಕ್ರಮ. ಇಂಥ ಪರೀಕ್ಷೆಗೆ ಗುರಿಯಾಗಿ ಗೋಳಾಡಿದಳು ಮಾರ್ಗರೆಟ್. ಆದರೆ ಎಂಥ ಕಠೋರ ಕಷ್ಟವನ್ನು ಅನುಭವಿಸಿದರೂ ಅದನ್ನೊಂದೂ ಅರಿಯಳು, ನೆನೆಯಳು. ಅಂಥದು ಅವಳ ಭಕ್ತಿ.

ಮಿಸ್ ಮ್ಯಾಕ್ಲಿಯಾಡ್ ಬರೆಯುತ್ತಾಳೆ.

"ನಾನು ನಿವೇದಿತೆಗೆ ಅಂದೆ 'ಸ್ವಾಮಿ ಮೂರ್ತಿಮಂತ ತೇಜ.'

ಅವಳಂದಳು: 'ಸ್ವಾಮಿ ಮೂರ್ತಿಮಂತ ಮಾರ್ದವ.'

ನಾನಂದೆ 'ಅದನ್ನು ನಾನು ಕಾಣಲಿಲ್ಲವಲ್ಲ!'

'ಅದನ್ನು ನಿನಗೆ ಅವರು ತೋರಲಿಲ್ಲ!' ಎಂದು ಅವಳಂದಳು."

ಹೀಗೆ ಪ್ರತಿಯೊಬ್ಬರಿಗೆ ಅವರವರ ಸ್ವಭಾವ ಹಾಗೂ ಆಧ್ಯಾತ್ಮಿಕ ಪ್ರಗತಿಗನುಸರಿಸಿ ಸ್ವಾಮಿ ಬೇರೆ ಬೇರೆಯಾಗಿ ಕಾಣುವರು.

ಲಂಡನ್‌ದಲ್ಲಿಯ ಕನ್ಯಾಶಾಲೆಯೊಂದರ ಮುಖ್ಯಾಧ್ಯಾಪಿಕೆ, ಮಾರ್ಗರೆಟ್. ಅವಳ ಶಾಲೆಯಲ್ಲಿ ವಿವೇಕಾನಂದರ ವ್ಯಾಖ್ಯಾನವಾಯಿತು. ಮಾರ್ಗರೆಟ್ ಶರಣುಹೋದಳು. ಆ ಪ್ರಥಮ ದರ್ಶನದ ವಿಷಯ ದಲ್ಲಿ ಮಾರ್ಗರೆಟ್ ಬರೆಯುತ್ತಾಳೆ:

"ನವ್ಹಂಬರ ತಿಂಗಳು. ಚಳಿ ಸೆಳೆವ ಒಂದು ರವಿವಾರ ಮಧ್ಯಾಹ್ನ. ಹಿಂದೆ ಅಗ್ಗಿಷ್ಟಿಗೆ. ಮುಂದೆ ಸ್ವಾಮಿ. ಅವರ ಎದುರಿನಲ್ಲಿ ಅರ್ಧ ಮಂಡಲಾಕಾರದಲ್ಲಿ ಜನ ಕೇಳುತ್ತ ಕುಳಿತಿದ್ದಾರೆ. ಹೊತ್ತು ಇಳಿದು, ಮುಳುಗಿ ಇರುಳು ಉರುಳಹತ್ತಿತು......... ಸ್ವಾಮಿ ನಡುವೆ ಕುಳಿತೇ ಇದ್ದರು.— ಅತಿ ದೂರದ ಯಾವುದೋ ಒಂದು ಲೋಕದ ಸುದ್ದಿ ಸಾರುವವರಂತೆ. ಆಗಾಗ ಬಾಯಲ್ಲಿ 'ಶಿವ! ಶಿವ!' ಎಂಬ ನಾಮವನ್ನು ಉಚ್ಚರಿಸುವ ವಿಚಿತ್ರ ಕ್ರಮ. ಮುಖದ ಮೇಲೆ ಮಾರ್ದವ ಮತ್ತು ಮಹಾತ್ಮ್ಯ ಬೆರೆತು ಬೆಳಗುತ್ತಿದ್ದವು!———"

ಬಹಳ ಹೊತ್ತು ಮಾರ್ಗರೆಟ್ ತರ್ಕಬಲದಿಂದ ಹೋರಾಡಿದಳು. ಪ್ರತಿಯೊಂದು ಉಪನ್ಯಾಸ ಮುಗಿಯುತ್ತಲೆ, "ಅಹುದು ಸ್ವಾಮಿ........

ಆದರೆ........"ಎಂದು ಬೆನ್ನು ಹತ್ತುವ ಹಲವರಲ್ಲಿ ಅವಳೂ ಒಬ್ಬಳು. ವಾದಿಸಿದಳು, ವಿರೋಧಿಸಿದಳು. ಬಹಳ ಹೊತ್ತು ತರ್ಕದ ಹೋರಾಟದ ನಂತರವೇ ಸೋಲುವಳು: ಒಮ್ಮೆ ಸೋತರೆ ಮಾತ್ರ ಚಿರಕಾಲ ಶ್ರದ್ಧೆಯ ಸೆರೆಯಲ್ಲಿ. ವಿವೇಕಾನಂದರೇ ಅಂದಿರುವರು:

"ಇದಕ್ಕಿಂತಲೂ ಹೆಚ್ಚು ಶ್ರದ್ಧಾಮಯ ಆತ್ಮ ಇರಲಾರದು!"

ಸ್ವಾಮಿಯವರ ಕೈಯಲ್ಲಿ ಶರಣೆಂದು ತನ್ನ ದೈವವನ್ನೇ ಒಪ್ಪಿಸಿದಾಗ ಅವಳ ವಯಸ್ಸು ಕೇವಲ ಇಪ್ಪತ್ತೆಂಟು. ಅವಳನ್ನು ಹಿಂದುಸ್ತಾನಕ್ಕೆ ಬರಮಾಡಿಕೊಂಡು ಹಿಂದೂ ಸ್ತ್ರೀಯರ ಶಿಕ್ಷಣದ ಕೆಲಸವನ್ನು ಅವಳಿಗೆ ಒಪ್ಪಿಸಿದರು. ಹಿಂದೂ ಧರ್ಮದ ದೀಕ್ಷೆ ಕೊಟ್ಟರು. "ವಿಚಾರದಲ್ಲಿ, ಕಲ್ಪನೆಯಲ್ಲಿ, ರೀತಿನೀತಿಗಳಲ್ಲಿ ಎಲ್ಲದರಲ್ಲೂ 'ಹಿಂದೂ' ಆಗು. ಹಿಂದಿನದೆಲ್ಲ ಮರೆ ಎಂದು ಹೇಳಿದರು. ಅವಳು ಬ್ರಹ್ಮಚರ್ಯವ್ರತವನ್ನು ಸ್ವೀಕರಿಸಿದಳು. ಹಿಂದುಸ್ಥಾನದ ಸನ್ಯಾಸಿಸಂಘದಲ್ಲಿ ಸ್ವೀಕರಿಸಲಾದ ಮೊಟ್ಟ ಮೊದಲನೆಯ ಪಾಶ್ಚಾತ್ಯ ಸ್ತ್ರೀ ಅವಳೇ. ಮುಂದೆ ಮತ್ತೆ ವಿವೇಕಾನಂದರ ಅಕ್ಕಪಕ್ಕದಲ್ಲಿ ಹಲವು ಸಾರೆ ಅವಳನ್ನು ಕಾಣುವೆವು. ಅವರ ಸಂದರ್ಶನಗಳನ್ನು ಆವಳು ಕಾದಿಟ್ಟಿರುವಳು. ಪಶ್ಚಿಮದಲ್ಲಿ ವಿವೇಕಾನಂದರ ವ್ಯಕ್ತಿತ್ವದ ಪರಿಚಯುವನ್ನು ಮಾಡಿಸಿ ಅದನ್ನು ಲೋಕಪ್ರಿಯ ಮಾಡಲು ಅವಳು ಮಾಡಿದಷ್ಟು ಇನ್ನಾರೂ ಮಾಡಲಿಲ್ಲ.

ಒಮ್ಮೆ ಶರಣೆಂದು ಕೊನೆಯವರೆಗೆ ಸಂಪೂರ್ಣ ಶ್ರದ್ಧೆಯ ಸೆರೆಯಲ್ಲಿ ಆತ್ಮಸಮರ್ಪಣ ಮಾಡುವ ಇಂಥ ಪ್ರೀತಿಭಕ್ತಿಗಳೇ ಸೇವ್ಹಿಯರ್ ದಂಪತಿಗಳ ಮೈತ್ರಿಯ ಲಕ್ಷಣಗಳಾಗಿದ್ದವು. ನಾಲ್ವತ್ತೊಂಬತ್ತು ವರ್ಷದ ನಿವೃತ್ತ ಸೈನ್ಯಾಧಿಕಾರಿ—ಕ್ಯಾಪ್ಟನ್—ಶ್ರೀಮಾನ್ ಸೇವ್ಹಿಯರ್. ಅವನೂ ಅವನ ಪತ್ನಿಯೂ ಧಾರ್ಮಿಕ ವಿಚಾರ ಚರ್ಚೆಯಲ್ಲಿ ಆಸಕ್ತರು. ವಿವೇಕಾನಂದರ ವಿಚಾರ, ವಾಣಿ ಮತ್ತು ವ್ಯಕ್ತಿತ್ವ—ಎಲ್ಲವನ್ನೂ ಕಂಡು ಬೆರಗಾದರು. ಮಿಸ್ ಮ್ಯಾಕ್ಲಿಯಾಡ್ ನನಗೆ ಹೇಳಿ

ದಳು:

"ಅವರ ಒಂದು ಉಪನ್ಯಾಸ ಕೇಳಿ ಹೊರಗೆ ಬರುತ್ತಲೆ. ಶ್ರೀಮಾನ್ ಸೇವ್ಹಿಯರ್ ನನಗೆ ಕೇಳಿದರು: 'ಈ ತರುಣನನ್ನು ಬಲ್ಲೆಯಾ ? ಕಣ್ಣಿಗೆ ಕಾಣುವಂತೆ ಅವನು ನಿಜವಾಗಿಯೂ ಇರುವನೇ?' 'ಓಹೊ!' ನಾನಂದೆ. 'ಹಾಗಾದರೆ ಅವನ ಜೊತೆಯಲ್ಲಿ ದೇವನನ್ನು ಕಾಣಬೇಕು' ಎಂದಂದು ಅವರು ಹೋಗಿ ತಮ್ಮ ಹೆಂಡತಿಯನ್ನು ಕೇಳಿದರು: 'ಸ್ವಾಮಿಯ ಶಿಷ್ಯನಾಗಲು ನನಗೆ ಅಪ್ಪಣೆ ಕೊಡುವೆಯಾ ?' ಅವಳಂದಳು: 'ಓಹೋ ! ಆದರೆ ಸ್ವಾಮಿಯ ಶಿಷ್ಯಳಾಗಲು ನನಗೆ ನೀನು ಅಪ್ಪಣೆ ಕೊಡುವೆಯಾ ? ನಲ್ಮೆಯ ವಿನೋದದಿಂದ ಅವರು ಅಂದರು: 'ಅದೇನೋ ನನಗೆ ತಿಳಿಯದು!'..........."

ಇದ್ದು ಬಿದ್ದುದನ್ನೆಲ್ಲ ಮಾರಿ ಬಂದ ಸ್ವಲ್ಪ ಹಣ ಕಟ್ಟಿಕೊಂಡು ಅವರು ಸ್ವಾಮಿಯ ಜೊತೆಗಾರರಾದರು. ಅವರಿಗಿಂತಲೂ ಸ್ವಾಮಿಯ ವರೇ ಅವರ ಭವಿಷ್ಯದ ಚಿಂತೆಯನ್ನು ವಹಿಸಿ ತಮ್ಮ ಕಾರ್ಯಕ್ಕಾಗಿ ಅವರ ಸರ್ವಸ್ವವನ್ನು ಸೂರೆ ಮಾಡಗೊಡದೆ ಕೆಲ ಭಾಗವನ್ನು ಹಿಂದು ಮುಂದಿನ ಆಧಾರಕ್ಕಾಗಿ ಇಡಹಚ್ಚಿದರು. ಸ್ವಾಮಿಯವರನ್ನು ಅವರು ತಮ್ಮ ಮಗುವಿನಂತೆ ಭಾವಿಸಿದರು.

ವಿವೇಕಾನಂದರ ವಿಚಾರಸಾಗರದಲ್ಲಿ ಸೇವ್ಹಿಯರ್ ದಂಪತಿಗಳ ಮನಸ್ಸನ್ನು ಆಕರ್ಷಿಸಿದುದು ಅದ್ವೈತ ಸಿದ್ಧಾಂತ. ಆ ಅದ್ವೈತಸಿದ್ಧಿಗಾಗಿ, ಅವ್ಯಕ್ತನನ್ನು ಕಾಣಲೋಸುಗ ಧ್ಯಾನಕ್ಕಾಗಿ ಹಿಮಾಲಯದಲ್ಲಿ ಅದ್ವೈತಾಶ್ರಮವನ್ನು ಕಟ್ಟುವುದು ವಿವೇಕಾನಂದರ ಸವಿಗನಸು. ಆ ಕನಸನ್ನು ಕಣಸಾಗಿ ಮಾಡುವುದನ್ನು ಅವರು ಕೈಕೊಂಡರು. ಅವರು ಕಟ್ಟಿದ ಆ ಆಶ್ರಮದಲ್ಲಿ ೧೯೦೧ ರಲ್ಲಿ ಶ್ರೀಮಾನ್ ಸೇವ್ಹಿಯರ್ ಕ್ರಿಸ್ತವಾಸಿಯಾದರು. ಶ್ರೀಮತಿ ಸೇವ್ಹಿಯರಳು ಆ ಮೇಲೆ, ವಿವೇಕಾನಂದರ ನಂತರವೂ, ಬಾಳಿದಳು—ಹಿಮಾಲಯದ ಆ ವನಾಂತರದಲ್ಲಿ ಹದಿನೈದು ವರ್ಷ ಒಬ್ಬಳೇ ಒಬ್ಬಳಾದ ಆ ಯುರೋಪಿಯನ್ ಮಹಿಳೆ ಬಾಳಿದಳು.

ವರ್ಷದ ಹಲವು ತಿಂಗಳು ಹೊರಗಿನ ಪ್ರಪಂಚದ ಸಂಬಂಧ ಸಹ ಆಶ್ರಮಕ್ಕೆ ತಪ್ಪಿ ಹೋಗುತ್ತಿತ್ತು ! ಅಂಥ ಆಶ್ರಮದಲ್ಲಿ ಚಿಕ್ಕಮಕ್ಕಳ ಶಿಕ್ಷಣದಲ್ಲಿ ಶ್ರೀಮತಿ ಸೇವ್ಹಿಯರ್ ನಿರತಳಾಗುತ್ತಿದ್ದಳು.

" ನಿನಗೆ ಇಲ್ಲಿ ಬೇಸರ ಬಾರದೇ ?" ಎಂದು ಮಿಸ್ ಮ್ಯಾಕ್ಲಿಯಾಡ್ ಕೇಳಿದಾಗ ಶ್ರೀಮತಿ ಸೇವ್ಹಿಯರ್ ಹೇಳಿದಳು:

" ನನಗೆ ಸ್ವಾಮಿಯವರದೇ ಧ್ಯಾನ !"

ವಿವೇಕಾನಂದರೊಬ್ಬರಿಗೇನೇ ಇಂಗ್ಲಂಡ್ ಇಂಥ ಸನ್ಮಿತ್ರರನ್ನು ಕೊಡಲಿಲ್ಲ. ತಮ್ಮ ನಂಬಿಗೆಯ ಶಿಷ್ಯರನ್ನು ಮತ್ತು ಶೂರ ಸಹಾಯಕರನ್ನು ಭಾರತೀಯ ಮಹಾತ್ಮರು ಇಂಗ್ಲೀಷರಲ್ಲಿ ಕಂಡುಕೊಂಡಿರುವರು. ರವೀಂದ್ರನಾಥ ಠಾಕೂರರ ಪಿಯರ್ಸನ್, ಗಾಂಧಿಯವರ ಆಂಡ್ರ್ಯೂಜ್ ಮತ್ತು ಮೀರಾಬೆನ್—ಇವರನ್ನು ಎಲ್ಲರೂ ಬಲ್ಲರು...........ಮುಂದೆ ಇಂಗ್ಲಂಡದಿಂದ ತನಗೆ ಆದ ಲಾಭಹಾನಿಗಳ ಲೆಖ್ಖವನ್ನು ಸ್ವತಂತ್ರ ಭಾರತವು ಮಾಡುವಾಗ ಅನ್ಯಾಯದ ಭಾರದಿಂದ ತಕ್ಕಡಿ ಬಾಗಿದರೂ ಇಂಥ ಪವಿತ್ರಹೃದಯದ ಸ್ನೇಹಿತರ ತೂಕದಿಂದ ತಕ್ಕಡಿಯ ಮುಳ್ಳು ಅತ್ತಿತ್ತ ಹೊಯ್ದಾಡದೆ ಇರದು.

ಇಂಗ್ಲಂಡ್‌ದಲ್ಲಿ ಸ್ವಾಮಿಯವರ ಮಾತಿಗೆ ಈ ರೀತಿ ಆಳವಾದ ಮಾರ್ದನಿ ದೊರೆತುದೇನೋ ಸರಿ. ಆದರೆ ಅಮೇರಿಕೆಯಲ್ಲಿ ಸ್ಥಾಪಿತವಾಗಿ ಮುಂದೆ ವಿಶಾಲವಾಗಿ ಬೆಳೆದ ರಾಮಕೃಷ್ಣ ಮಿಶನ್‌ದಂಥ ಯಾವ ಸಂಸ್ಥೆಯನ್ನೂ ಅವರು ಇಂಗ್ಲಂಡ್‌ದಲ್ಲಿ ಸ್ಥಾಪಿಸಲಿಲ್ಲ. ಇಂಗ್ಲಂಡ್ ಯುರೋಪಗಳ ಉಚ್ಚ ಬುದ್ಧಿಮತ್ತೆಯ ವಾತಾವರಣದಲ್ಲಿ ವರ್ಚಸ್ಸನ್ನು ನೆಲೆಗೊಳಿಸುವ ಆತ್ಮಿಕ ಸಾಮರ್ಥ್ಯವುಳ್ಳ ಬೋಧಕರು (ಮಿಶನರಿ) ಯಾರೂ ಬರಾನಗರದ ಬಂಧುಗಳಲ್ಲಿ ದೊರೆಯಲಾರರೆಂಬ ಭಾವನೆಯಿಂದ ಹೀಗೆ ಮಾಡಿರಬಹುದೆಂದು ಅವರ ಅಮೇರಿಕೆಯ ಶಿಷ್ಯರೊಬ್ಬರು ನುಡಿದ ಮಾತನ್ನು ನಂಬಬಹುದೇ ? ಆದರೆ ಅವರನ್ನು ಆಗಾಗ ಬಲವಾಗಿ ಬಾಧಿಸುತ್ತಿದ್ದ ಭಯಂಕರ ಬಳಲಿಕೆಯೇ ಇದಕ್ಕೆ

ಕಾರಣವೆಂದು ನನಗೆ ತೋರುತ್ತದೆ. ಅವರಿಗೆ ಪ್ರಪಂಚ ಸಾಕೆನಿಸಿತ್ತು. ಕರ್ಮಬಂಧನದ ಕಿರಿಕಿರಿ ಸಾಕೆನಿಸಿತ್ತು. ಸಂಸಾರ ದೂರವಾಗಿ ಹೆಚ್ಚೆಚ್ಚು ಅವಧಿ ಶಾಂತಿಯಲ್ಲಿ ವಿಶ್ರಾಂತಿಯಲ್ಲಿ ಕಳೆಯಬೇಕೆನಿಸುತ್ತಿತ್ತು. ಇಂಥ ಕಾಲಕ್ಕೆ ಹೊಸದೇನನ್ನೂ ಕಟ್ಟಲು ಅವರು ಒಪ್ಪರು. ೧೮೯೬ ಆಗಸ್ಟ್ ೨೩ನೇ ದಿನ ಅವರು ಬರೆದಿದ್ದಾರೆ:

"ಕಾರ್ಯವನ್ನು ಆರಂಭಿಸಿರುವೆ. ಉಳಿದವರು ಕೊನೆಗಾಣಿಸಲಿ. ಕೆಲಸ ಸಾಗಿಸಬೇಕಾದರೆ ಕೆಲ ಕಾಲ ಹಣ ಆಸ್ತಿ ಎಲ್ಲಕ್ಕೂ ಕೈಹಚ್ಚ ಬೇಕಾಯಿತು. ನನ್ನ ಪಾಲಿನ ಕಾರ್ಯ ಮುಗಿಯಿತು. ವೇದಾಂತ ಸಾಕು. ವಿಶ್ವದ ಯಾವ ತತ್ವಜ್ಞಾನವೂ ಸಾಕು. ಕರ್ಮ ಕೂಡ ಸಾಕು. ಅದರ ಧಾರ್ಮಿಕ ಉಪಯುಕ್ತತೆ ಕೂಡ ನನಗೆ ಬೇಡವಾಗಿದೆ—ಬೇಡವಾದ ಭಾರವಾಗಿದೆ. ಇನ್ನು ದಾರಿ ಹಿಡಿಯುವ ಸಿದ್ಧತೆಯಲ್ಲಿದ್ದೇನೆ........ಈ ಲೋಕಕ್ಕೆ ಈ ನರಕಕ್ಕೆ ಮರಳಿ ಬರುವುದು ಬೇಡ."

ಅವರ ಶರೀರವನ್ನು ಸವೆಯಿಸುತ್ತಿದ್ದ ರೋಗದ ಭಯಂಕರ ಬಾಧೆ ಮತ್ತು ಆಯಾಸವನ್ನು ಬಲ್ಲವರೆಲ್ಲ ತೀವ್ರ ಸ್ವರೂಪದಲ್ಲಿ ಅರಿಯಬಹುದಾದ ಆರ್ತಸ್ವರವದು. ಆದರೆ ಬೇರೆ ಕಾಲಕ್ಕೆ ಅವರ ಹರ್ಷಕ್ಕೆ ಮಿತಿಯೇ ಇರಲಿಲ್ಲ. ವಿಶ್ವವೆಲ್ಲ ಬುದ್ಧಿಯಾಚೆಯ ಬಾಲಗೋಪಾಲನ ಆನಂದಮಯ ಲೀಲಾಜಾಲವೆಂದು ಅವರಿಗೆ ತೋರುತ್ತಿತ್ತು. ಆದರೂ ಆನಂದದಲ್ಲಾಗಲಿ ದುಃಖದಲ್ಲಾಗಲಿ ಅನಾಸಕ್ತಿ ಮಾತ್ರ ಇದ್ದೇ ಇತ್ತು. ಪ್ರಪಂಚದ ಬಾಳು ಅವರಿಂದ ಬೇರೆಯಾಗಹತ್ತಿತ್ತು. ಗಾಳಿಪಟದ ದಾರ ಹರಿಯಹತ್ತಿತ್ತು.

ಸ್ವಾಮಿಯವರ ಸ್ವಾಸ್ಥ್ಯವನ್ನು ಕಾಯುವ ಹೊಣೆ ಹೊರತು ಪ್ರೀತಿಯ ಗೆಳೆಯರು ಅವರನ್ನು ವಿಶ್ರಾಂತಿಗಾಗಿ ಮತ್ತೆ ಸ್ವಿಟ್ಝರ್ಲಂಡಕ್ಕೆ ಕರೆದೊಯ್ದರು. ೧೮೯೬ರ ಬೇಸಗೆಯನ್ನೆಲ್ಲ ಅವರು ಅಲ್ಲಿಯೇ ಕಳೆದರು. ಹಿಮಾಲಯವನ್ನು ನೆನಪಿಗೆ ತರುವ ಆ ಹಿಮಾಚ್ಛಾದಿತ ಗಿರಿ

ಕಂದರ, ವನಾಂತರ ಮತ್ತು ಹಳ್ಳಕೊಳ್ಳಗಳ ಮೇಲಿಂದ ಹಾಯ್ದು ಬರುವ ಗಾಳಿಯ ಸೊಗಸಿನಿಂದ ಅವರಿಗೆ ಒಳ್ಳೆ ಹಿತವಾದಂತಾಯಿತು. ಅಲ್ಲಿ ಆಲ್ಪ್ಸ್ಪರ್ವತದ ಅಡಿಯಲ್ಲಿಯ ಒಂದು ಹಳ್ಳಿಯಲ್ಲಿ ಮೊಟ್ಟ ಮೊದಲು ಅವರಿಗೆ ಹಿಮಾಲಯದಲ್ಲಿ ಅದ್ವೈತಾಶ್ರಮವನ್ನು ಕಟ್ಟುವ ವಿಚಾರ ತಲೆದೋರಿತು. ಪೂರ್ವಪಶ್ಚಿಮ ಖಂಡಗಳಲ್ಲಿಯ ಶಿಷ್ಯರೆಲ್ಲರು ಅಂಥದೊಂದು ಆಶ್ರಮದಲ್ಲಿ ಕೂಡಬೇಕೆಂದು ಅವರಂದರು. ಅವರ ಹತ್ತರಿದ್ದ ಸೇವ್ಹಿಯರ್ ದಂಪತಿಗಳು ಆ ವಿಚಾರವನ್ನು ಎತ್ತಿ ಹಿಡಿದು ಅದನ್ನು ತಮ್ಮ ಜೀವನಕಾರ್ಯವನ್ನಾಗಿ ಮಾಡಿಕೊಂಡರು.

ಗುಡ್ಡಗಾಡಿನ ಆ ವಿಶ್ರಾಂತಿನಿಲಯಕ್ಕೆ ಒಂದು ಓಲೆ ಬಂದಿತು. ಕೀಲದಲ್ಲಿ ತಮ್ಮನ್ನು ಕಾಣಬೇಕಾಗಿ ಪ್ರೊಫೆಸರ್ ಪಾಲ್ ಡಾಯಸನ್ನರು ಬರೆದಿದ್ದರು. ಅವರನ್ನು ಕಾಣಲು ಸ್ವಾಮಿಯವರು ಹೀಡಲ್‌ಬರ್ಗ್, ಕಾಬ್ಲೆಂಝ್, ಕೋಲೋನ್ ಮತ್ತು ಬರ್ಲಿನ್ ಮಾರ್ಗವಾಗಿ ಹೊರಟರು. ಜರ್ಮನಿಯ ಭೌತಿಕ ಸಾಮರ್ಥ್ಯವನ್ನು ಮತ್ತು ಉಚ್ಚ ಸಂಸ್ಕೃತಿಯನ್ನು ಕೆಲಮಟ್ಟಿಗಾದರೂ ಕಾಣಬೇಕೆಂಬ ಬಯಕೆ ಅವರದು.

“ ವೇದಾಂತವೆಂದರೆ—ಸತ್ಯಸಂಶೋಧನೆಯ ಯತ್ನದಲ್ಲಿ ಮಾನವನ ಪ್ರತಿಭೆ ಕಟ್ಟಿದ ಮಹೋಜ್ವಲ ಮತ್ತು ಮಹಾರ್ಘ್ಯ ಜ್ಞಾನ ಮಂದಿರ, ನಿರ್ಮಲ ನೀತಿಮತ್ತೆಯ ಅತ್ಯಂತ ಪ್ರಬಲ ಆಧಾರ, ಬಾಳು ಸಾವುಗಳಲ್ಲಿ ಕಷ್ಟನಷ್ಟಗಳಲ್ಲಿ ನಿತಾಂತ ಶಾಂತಿಯ ನಿಕೇತನ ” ಎಂದು ಪಾಲ್ ಡಾಯಸನ್ನರ ಬಲವಾದ ನಂಬಿಗೆ. ಇಂಥ ಪರಮ ವೇದಾಂತ ಭಕ್ತರು ಸ್ವಾಮಿಯವರನ್ನು ಬಲು ಹರ್ಷೋತ್ಸಾಹಗಳಿಂದ ಸ್ವಾಗತಿಸಿದುದು ಅನಪೇಕ್ಷಿತವಲ್ಲ.

ಸ್ವಾಮಿಯವರ ಆಕರ್ಷಕ ವ್ಯಕ್ತಿತ್ವ, ಆಧ್ಯಾತ್ಮಿಕ ಶಕ್ತಿಸಂಪತ್ತು ಮತ್ತು ಆಳವಾದ ಜ್ಞಾನಗಳ ಮನವರಿಕೆಯಾಯಿತು ಡಾಯ್‌ಸನ್ನರಿಗೆ. ಆದರೆ ಆ ತರುಣ ಸ್ವಾಮಿಯ ಭವ್ಯ ಭವಿತವ್ಯ ಅವರ ಮುನ್ನೋ

ಟಕ್ಕೆ ನಿಲುಕಿದಂತೆ ಕಾಣುವುದಿಲ್ಲ. ಹೊರಹೊರಗೆ ಹೃಷ್ಟಪುಷ್ಟರಾಗಿ ಕಂಡ ಸ್ವಾಮಿಯವರ ಹೃದಯ ತಮ್ಮ ಜನದ ದುಃಖದಾರಿದ್ರ್ಯಗಳಿಗಾಗಿ ಕಂಗಾಲಾಗಿತ್ತು. ಆ ಹೃದಯದ ಆಳದಲ್ಲಿ ಹುದುಗಿದ ರುದ್ರ ಗಾಂಭೀರ್ಯ ಆ ಪ್ರೊಫೆಸರರ ಕಲ್ಪನೆಗೆ ಸಿಲುಕಲಿಲ್ಲ. ಹಿಂದುಸ್ಥಾನದ ಸಲುವಾಗಿ ಹೆಣಗಿದ ಜರ್ಮನಿಯ ಪಂಡಿತರ — ಆ ಆಧುನಿಕ ಋಷಿಯ — ಎದುರಿನಲ್ಲಿ ಉಪಕೃತಿಯ ಸಂತೃಪ್ತಿಯಿಂದ ಮತ್ತು ವಿಶ್ರಾಂತಿಯ ಸೊಗಸಿನಿಂದ ಸ್ವಾಮಿಯವರು ನಲಿದರು. ಭಾರತಕ್ಕೆ ಡಾಯಸನ್ನರು ಮಾಡಿದ ಉಪಕಾರದ ಭಾವನೆ ವಿವೇಕಾನಂದರ ಹೃದಯದಿಂದ ಎಂದೂ ಅಳಿಸಿ ಹೋಗಲಿಲ್ಲ. ಕೀಲ್ ಹಾಂಬರ್ಗ್, ಆಮಸ್ಟರ್ಡಾಮ್ ಮತ್ತು ಲಂಡನ್ ಮುಂತಾದಲ್ಲೆಲ್ಲ ಡಾಯಸನ್ನರ ಗೆಳೆತನದಲ್ಲಿ ಸಹವಾಸದಲ್ಲಿ ಕಳೆದ ದಿನಗಳ ಸವಿನೆನಪು ಅವರ ಹೃದಯದಲ್ಲಿ ಸದೈವ ಬೆಳಗಿತು. ಆ ಸವಿನೆನಪು "ಬ್ರಹ್ಮವಾದಿನ್" ದಲ್ಲಿ ಬರೆದ ಒಂದು ಉಜ್ವಲ ಲೇಖದಲ್ಲಿ ಅಜರಾಮರವಾಗಿದೆ. ಭಾರತದ ವಿಷಯದಲ್ಲಿ ಭಾರತೀಯರಿಗಿಂತ ಯಾರ ಹೃದಯದಲ್ಲಿ ಅರಿವು-ಒಲವುಗಳು ಹೆಚ್ಚಾಗಿ ಉಕ್ಕಿದುವೋ ಅಂಥ ಯುರೋಪದ ಮಹಾವಿದ್ವಾಂಸರಿಗೆ.... ವಿಶೇಷತಃ ಅವರಲ್ಲಿ ಸರ್ವಶ್ರೇಷ್ಠರಾದ ಮ್ಯಾಕ್ಸಮುಲರ್ ಮತ್ತು ಪಾಲ್ ಡಾಯಸನ್ನರಿಗೆ ಭಾರತ ಎಷ್ಟು ಋಣಿಯಾಗಿದೆಂಬ ಮಾತನ್ನು ಮರೆಯಲಾಗದೆಂದು ವಿವೇಕಾನಂದರು ಆ ಲೇಖದಲ್ಲಿ ತಮ್ಮ ಶಿಷ್ಯರಿಗೆ ಸಾರಿದರು.

ಇಂಗ್ಲಂಡದಲ್ಲಿ ಮತ್ತೆ ಎರಡು ತಿಂಗಳು ಕಳೆದರು. ಮ್ಯಾಕ್ಸ್ ಮುಲರರನ್ನು ಮತ್ತೆ ಕಂಡರು. ಎಡ್ವರ್ಡ್ ಕಾರ್ಪೆಂಟರ್, ಫ್ರೆಡ್‌ರಿಕ್ ಮಾಯರ್ಸ್, ಮತ್ತು ಕ್ಯಾನನ್ ವಿಲ್ಬರ್ಫೋರ್ಸ್ ಇವರಿಗೆ ಸಂದರ್ಶನಗಳನ್ನಿತ್ತರು. ವೇದಾಂತ ಮಾಯಾ ಮತ್ತು ಅದ್ವೈತ, ಹಿಂದೂ ತತ್ವದರ್ಶನ ಮುಂತಾದ ವಿಷಯಗಳ ಮೇಲೆ ಹೊಸದೊಂದು ವ್ಯಾಖ್ಯಾನ ಮಾಲೆಯನ್ನು ಪವಣಿಸಿದರು. ಆದರೆ ಅವರ ಯುರೋಪದ ವಾಸ

ಮುಗಿಯಬಂದಿತ್ತು. ಮರಳಿ ಬರಲು ಭಾರತದ ಕರೆ ಬಂದಿತ್ತು. ಮಾತೃಭೂಮಿಯ ದರ್ಶನಕ್ಕಾಗಿ ಅವರ ಮನಸ್ಸು ಹಾತೊರೆಯುತ್ತಿತ್ತು. ಯಾತನಾಮಯ ಜೀವನಯಂತ್ರದ ಮತ್ತು ಕರ್ಮಬಂಧನದ ಜಂಜಾಟದಿಂದ ಜಾರುವೆನೆಂದೂ ಹೊಸ ಸಂಕಲೆಗಳ ಸಂಬಂಧ ಸಾಕೆಂದೂ ಮೂರು ವಾರಗಳ ಹಿಂದೆ ನೈರಾಶ್ಯದ ರೋಷಾವೇಷದಿಂದ ಸಾರಿದ ಆ ದಣಿದ ಜೀವ ಮತ್ತೆ ಉತ್ಸಾಹದಿಂದ ಅದರಲ್ಲಿ ಧುಮುಕಿತು. ರಥದ ನೊಗಕ್ಕೆ ಹೆಗಲನ್ನಿಕ್ಕಿತು. ಹೊರಡುವಾಗ ತಮ್ಮ ಇಂಗ್ಲೀಷ್ ಮಿತ್ರರಿಗೆ ಸ್ವಾಮಿ ಹೇಳಿದರು:

"ಈ ದೇಹದಿಂದ ಹೊರಗೆ ಬಂದು ಹರಿದ ಬಟ್ಟೆಯಂತೆ ಅದನ್ನು ಬಿಸುಡಿ ಹಾಕುವುದು ಒಳ್ಳೆಯದೆಂದು ಅನಿಸುತ್ತದೆ. ಆದರೆ ಮಾನವ ಕುಲದ ಸೇವೆಯನ್ನು........ನಾನೆಂದಿಗೂ ಬಿಡಲಾರೆ........"

ಕೆಲಸ ಮಾಡುವುದು; ಈ ಜನ್ಮದಲ್ಲಿ, ಬರಲಿರುವ ಜನ್ಮಗಳಲ್ಲಿ ಸೇವೆಗೈಯುವುದು, ಸೇವೆಗೈಯಲೆಂದು ಮತ್ತೆ ಜನ್ಮ ತಾಳುವುದು........ "ಅಹುದು, ಅಹುದು, ಈ ನರಕಕ್ಕೆ ಮರಳಿ ಬರಲೇಬೇಕು" ಎಂದರು ವಿವೇಕಾನಂದರು ! ಈ 'ನರಕ'ದ ಜ್ವಾಲೆಗಳ ಕೂಡ ಹೋರಾಡುವುದು ಮತ್ತು ಆ ಜ್ವಾಲೆಗಳಿಂದ ಬಳಲುವವರನ್ನು ಉಳಿಸುವುದು. ಇದಕ್ಕೆ ಅವರು ಮರಳಿ ಬರಲೇ ಬೇಕು! ಆಸರು ಬೇಸರಿಲ್ಲದೆ ಮರಳಿ ಬರಲೇ ಬೇಕು! ಇದೇ ಅವರ ವಿಧಿ! ಮಿಕ್ಕವರನ್ನು ಉಳಿಸುವುದಕ್ಕಾಗಿ ತಾವು ಉರಿದು ಹೋಗುವುದು! ಇದೇ ಅವರ ವಿಧಿಲಿಖಿತ!

೧೮೯೬ರ ಡಿಶೆಂಬರ್ ೧೬ನೇ ದಿನ ಇಂಗ್ಲಂಡ್ ಬಿಟ್ಟು ಡೋವ್ಹರ್, ಕ್ಯಾಲೇ, ಮಾಂಟ್ ಸೆನಿಸ್ ಮಾರ್ಗವಾಗಿ ಹೊರಟು ಇಟಲಿಯಲ್ಲಿ ಕೆಲ ದಿನ ತಂಗಿದರು. ಮಿಲಾನ್‌ದಲ್ಲಿ ಡಾ. ವ್ಹಿನ್ಸಿಯ "ಕೊನೆಯ ಊಟ" ಎಂಬ ಭವ್ಯಪಾವನವಾದ ಕಲಾಕೃತಿಗೆ ತಲೆಬಾಗಿದರು. ರೋಮ್ ಕಂಡಾಗಂತೂ ದಿಲ್ಲಿಯನ್ನು ಕಂಡಂತಾಗಿ ಅವರಿಗೆ ಹರ್ಷವಾಯಿತು. ಹಿಂದೂ ಮತ್ತು ಕ್ಯಾಥೊಲಿಕ್ ಪೂಜಾ-ಉಪಾಸನಾವಿಧಿಗಳ

ಸಾಮ್ಯ ಕಂಡು ಸೋಜಿಗ ಹೊಂದಿ ಅವುಗಳ ಉಜ್ವಲತೆ, ಸಾಂಕೇತಿಕ ಸೌಂದರ್ಯ ಮತ್ತು ಭಾವನೋದ್ದೀಪಕ ಸಾಮರ್ಥ್ಯ ಇವನ್ನೆಲ್ಲ ತಮ್ಮ ಜೊತೆಯಲ್ಲಿದ್ದ ಇಂಗ್ಲೀಷ್ ಮಿತ್ರರಿಗೆ ತಿಳಿಸಿ ಹೇಳಿದರು. ಅಲ್ಲಿ ಸಮಾಧಿಗಳಲ್ಲಿ ಚಿರನಿದ್ರೆಯಲ್ಲಿ ಲೀನರಾದ ಹುತಾತ್ಮರ ಮತ್ತು ಕ್ರಿಸ್ತನ ಮೊದಮೊದಲಿನ ಅನುಯಾಯಿಗಳ ಜೀವನಸ್ಮೃತಿಯಿಂದ ಸ್ವಾಮಿಯು ವರ ಅಂತಃಕರಣ ಅಲ್ಲೋಲಕಲ್ಲೋಲವಾಯಿತು. ಬಾಲಕ್ರಿಸ್ತ ಮತ್ತು ಕುಮಾರೀ ಮಾತಾ ಇವರ ಮೂರ್ತಿಗಳ ವಿಷಯದಲ್ಲಿ ಇಟಾಲಿಯನ್ನರ ಹೃದಯದಲ್ಲಿ ಅರಳುವ ಪೂಜ್ಯಭಾವನೆಯನ್ನು ಅವರೂ ಅನುಭವಿಸಿದರು. ಹಿಂದುಸ್ತಾನದಲ್ಲಾಗಲಿ ಅಮೇರಿಕೆಯಲ್ಲಾಗಲಿ ವಿವೇಕಾನಂದರು ಆಡಿದ ಮಾತುಗಳ ಮೇಲಿಂದ ತಿಳಿಯುತ್ತದೆ: ಕ್ರಿಸ್ತ ಮತ್ತು ಮಾತಾ ಮೇರಿ ಅವರ ಹೃದಯದಲ್ಲಿ ಸದೈವ ನಲಿಯುತ್ತಿದ್ದರೆಂದು. ಸ್ವಿತ್ಝರ್ಲಂಡದ ಗುಡ್ಡಗಾಡಿನಲ್ಲಿ ಹಾದಿಯಲ್ಲಿ ಒಂದು ಚರ್ಚ್ ಕಂಡಿತು. ಒಳಗೆ ಹೊಕ್ಕು ಶ್ರೀಮತಿ ಸೇವ್ಹಿಯರಳ ಮುಖಾಂತರವಾಗಿ ಕುಮಾರೀ ಮೇರಿಯ ಪದತಲದಲ್ಲಿ ಹೂಗಳನ್ನರ್ಪಿಸುತ್ತ ಅಂದರು: "ಅವಳೂ ಮಹಾತಾಯಿಯೇ! "

ಮುಂದೊಮ್ಮೆ ಅವರ ಶಿಷ್ಯರೊಬ್ಬರಿಗೆ ವಿಚಿತ್ರ ಕಲ್ಪನೆಯೊಂದು ಹೊಳೆಯಿತು. ಸಿಸ್ಟಿನ್ ಮ್ಯಾಡೋನಾ ಮೂರ್ತಿಯನ್ನು 'ಆಶೀರ್ವದಿಸಿರಿ' ಎಂದು ಸ್ವಾಮಿಯವರ ಕೈಯಲ್ಲಿ ಕೊಟ್ಟರು. "ಛೇ! ಛೇ!" ಎಂದು ಉದ್ಗಾರ ತೆಗೆದು ಸ್ವಾಮಿ ಕ್ರಿಸ್ತಮೂರ್ತಿಯ ಪಾದಸ್ಪರ್ಶ ಮಾಡಿ ಅಂದರು:

"ನನ್ನ ಕಂಬನಿಯಿಂದಲ್ಲ, ಆದರೆ ಎದೆಯ ನೆತ್ತರದಿಂದ ಅವರ ಪಾದ ತೊಳೆಯುತ್ತಿದ್ದೆ!"

ಕ್ರಿಸ್ತನಿಗೆ ವಿವೇಕಾನಂದರಷ್ಟು ಹತ್ತಿರದವರು ಇನ್ನಾರೂ ಇರಲಾರರೆಂದು ನಿಜವಾಗಿಯೂ ಹೇಳಬಹುದು. ಜೀವ-ಶಿವ ಸಂಧಾನ ಮಾಡಬಂದ ಆ ಮಹಾದೂತ ಪೂರ್ವಪಶ್ಚಿಮಗಳ ಸಂಧಾನಕ್ಕಾಗಿಯೂ

ಬಾಳಿದನೆಂದು ವಿವೇಕಾನಂದರಿಗಿಂತಲೂ ಹೆಚ್ಚು ಸ್ಪಷ್ಟವಾಗಿ ಅನ್ಯರಾರೂ ಭಾವಿಸಿರಲಾರರು. ಕ್ರಿಸ್ತ ತನ್ನವನೆಂದು ಪೂರ್ವ ಅನ್ನುತ್ತದೆ. ಪೂರ್ವದಿಂದಲೇ ಕ್ರಿಸ್ತ ಪಶ್ಚಿಮಕ್ಕೆ ಬಂದನು.

ಹಡಗದಲ್ಲಿ ಯುರೋಪದಿಂದ ಹಿಂದುಸ್ತಾನಕ್ಕೆ ಮರಳಿ ಹೊರಟಾಗ ಎರಡು ಖಂಡಗಳನ್ನು ಕೂಡಿಸಿದ ಈ ದೈವೀ ಬಂಧನದ ವಿಷಯದಲ್ಲಿ ವಿವೇಕಾನಂದರು ಬಹಳ ಯೋಚಿಸಿದರು. ಅದೊಂದೇ ಅಲ್ಲ. ಕಗ್ಗತ್ತಲೆಯಲ್ಲಿ ಮಾರ್ಗದರ್ಶಕರಿಲ್ಲದೆ, ನೆರವಿಲ್ಲದೆ, ಅತ್ಯಂತ ಪುರಾತನ ಜ್ಞಾನನಿಧಿಯ — ಭಾರತದ ನಿರ್ಮಲ ಆತ್ಮಜ್ಯೋತಿಯ— ದಾರಿಯನ್ನು ಕಂಡುಹಿಡಿದ ನಿಷ್ಕಾಮ ಬುದ್ಧಿಯ ಆ ಮಹಾಲೇಖಕರು ಗೊತ್ತು ಹಚ್ಚಿದ ಸಂಬಂಧವಿತ್ತು. ಅಲ್ಲದೆ ಹಳೆ ಹೊಸ ಖಂಡಗಳಲ್ಲಿ ಸ್ವಾಮಿಯವರ ಉಜ್ವಲ ತೇಜೋಮಯ ಮಾತುಗಳಿಗೆ ಉತ್ತರವಾಗಿ ತಂಡತಂಡವಾದ ಜನರಿಂದ ಅನಪೇಕ್ಷಿತವಾದ ಉರಿದೆದ್ದ ಅಧ್ಯಾತ್ಮ ತೇಜವಿತ್ತು! ತಮ್ಮಲ್ಲಿ ಸಂಪೂರ್ಣವಾಗಿ ಆತ್ಮಸಮರ್ಪಣ ಮಾಡಿದ ಶುದ್ಧ ಮತ್ತು ನಿರ್ಮಲ ಅಂತಃಕರಣಗಳಲ್ಲಿ ಉಕ್ಕಿದ ಉದಾತ್ತ ಶ್ರದ್ಧೆ ಮತ್ತು ಗಾಢ ಪ್ರೇಮ! (ಮುಂಗೈಜೋರು, ಉಕ್ಕಿನ ಮುಷ್ಟಿ, ಮತ್ತು ಶಸ್ತ್ರವಾದ — ಇವುಗಳಿಂದ ಸನ್ನದ್ಧವಾಗಿ ದಿಗ್ವಿಜಯಕ್ಕಾಗಿ ಹೊರಟ ಹೊಸ ಪಶ್ಚಿಮದ ವಿಷಯದಲ್ಲಿ ಸ್ವಾಮಿ ಇದೇ ರೀತಿ ಭಾವಿಸುತ್ತಿದ್ದರೇ ?) ಭಕ್ತಿಪ್ರೀತಿಗಳ ದಾಸರಾಗಿ ಅವರ ಹೆಜ್ಜೆಯಲ್ಲಿ ಹೆಜ್ಜೆಯನ್ನಿಟ್ಟು ಹಿಂಬಾಲಿಸುವ ಉದಾತ್ತ ಮಿತ್ರರು — (ಅವರಲ್ಲಿ ಇಬ್ಬರು, ಸೇವ್ಹಿಯರ್ ದಂಪತಿ, ಹಡಗದಲ್ಲಿ ಅವರ ಪಕ್ಕದಲ್ಲಿಯೇ ಇದ್ದರು; ಯುರೋಪಕ್ಕೆ ತಮ್ಮ ಹಿಂದಿನ ಬಂಧನಗಳಿಗೆಲ್ಲ ಶರಣು ಹೊಡೆದು ಅವರ ಬೆಂಬಲಿಗರಾಗಿದ್ದರು.) — ಇವೆಲ್ಲ ಪ್ರೇಮಸೂತ್ರಗಳ ಯೋಚನೆ ಒಂದೊಂದಾಗಿ ಹಲವಾಗಿ ಸ್ವಾಮಿಯವರ ಹೃದಯದಲ್ಲಿ ಸುಳಿಯಹತ್ತಿದವು.

ನಾಲ್ಕು ವರ್ಷಗಳ ದೀರ್ಘ ದಿಗಂತಯಾತ್ರೆಯನ್ನು ಮುಗಿಸಿ ಅವರು ತಮ್ಮ ಜನಕ್ಕೆ ಒಯ್ಯುತ್ತಿರುವ ಹೃದಯದ ಸಂಪತ್ತು, ಆಧ್ಯಾ

ತ್ಮಿಕ ಸಂಪತ್ತು ಇವುಗಳಿಂದಲೇ ಭಾರತದ ಉದ್ಧಾರವೇನು ಆಗಲಿಲ್ಲ ನಿಜ. ಆದರೆ ಹಿಂದುಸ್ತಾನದ ಕಷ್ಟನಿವಾರಣೆಗಾಗಿ ಅದರ ಮಹತ್ವವೂ ಅಗತ್ಯವೂ ಹೆಚ್ಚಾಗಿ ಇರಲಿಲ್ಲವೇ ? ಯಾವ ಅಗತ್ಯದ ಸಹಾಯಕ್ಕಾಗಿ ಅವರು ಹೊರಹೊರಟಿದ್ದರೋ ಅದು — ಪಶ್ಚಿಮದ ಆಸುರೀ ಸಂಪತ್ತಿನಲ್ಲಿಯ ಹಿಡಿ ಅಕ್ಕಿ — ಹಿಂದುಸ್ತಾನದ ಲಕ್ಷಾಂತರ ಜನರನ್ನು ಸಾವಿನಿಂದ ಉಳಿಸಲು ಬೇಕೆನಿಸಿದ ಹಿಡಿ ಅಕ್ಕಿ - ಅವರಿಗೆ ಸಿಕ್ಕಿತೇ? ಅದನ್ನು ಅವರು ತರುತ್ತಿದ್ದರೇ? ಇಲ್ಲ. ಆ ದೃಷ್ಟಿಯಿಂದ ಅವರ ಯಾತ್ರೆ ನಿಷ್ಫಲವಾಯಿತು. ಹೊಸ ಹಾದಿಯಿಂದ ಅವರು ಕಾರ್ಯವನ್ನು ಮತ್ತೆ ಪ್ರಾರಂಭಿಸಬೇಕಾಗಿ ಬಂದಿತು. ಹಿಂದುಸ್ತಾನದ ಪುನರುದ್ಧಾರ ಹಿಂದುಸ್ತಾನದಿಂದಲೇ ಆಗಬೇಕು, ಹಿತ-ಸುಖ-ಎಲ್ಲವೂ ಒಳಗಿನಿಂದಲೇ ಬರಬೇಕು.

ಮುಂಬರುವ ಸಾವಿಗೆ ತಾವು ಗುರಿಯಾಗಿ ನಿಂತಿರುವುದು ಅವರಿಗೆ ಅನಿಸಿತು. ಆದರೂ ಭಾರತದ ಪುನರುದ್ಧಾರಕ್ಕಾಗಿ ಭಗೀರಥ ಪ್ರಯತ್ನ ಮಾಡಲು ಹಿಂದುಮುಂದೆ ನೋಡದೆ ಇಷ್ಟರಲ್ಲಿ ಅವರು ಕಂಕಣ ಕಟ್ಟುವುದರಲ್ಲಿದ್ದರು. ಅದಕ್ಕಾಗಿ ಈ ಮುಂಚೆ ಇಲ್ಲದ ಒಂದನ್ನು ಪಶ್ಚಿಮದ ಯಾತ್ರೆ ಅವರಿಗೆ ಕೊಟ್ಟಿತ್ತು — ಅಧಿಕಾರ, ವ್ಯಕ್ತಿತ್ವದ ವರ್ಚಸ್ಸು !

## (೮) ಮರಳಿ ಮಾತೃಭೂಮಿಗೆ

ಸರ್ವಧರ್ಮಸಮ್ಮೇಲನದಲ್ಲಿ ವಿವೇಕಾನಂದರಿಗೆ ದೊರಕಿದ ಪ್ರಚಂಡ ವಿಜಯದ ವಾರ್ತೆ ಭಾರತಕ್ಕೆ ನಿಧಾನವಾಗಿ ತಲ್ಪಿತು. ಆದರೆ ಒಮ್ಮೆ ತಲ್ಪಿದುದೇ ತಡ, ಇಡೀ ರಾಷ್ಟ್ರವೇ ಹರ್ಷ ಮತ್ತು ಅಭಿಮಾನಗಳಿಂದ ಕೇಕೆ ಹೊಡೆಯಿತು! ದೇಶದ ತುಂಬೆಲ್ಲ ಅದೇ ಸುದ್ದಿಯೇ ಸುದ್ದಿ ! ಬರಾನಗರದ ಸನ್ಯಾಸಿಗಳಿಗೆ ಆರು ತಿಂಗಳು ಈ ವಾರ್ತೆ ತಿಳಿದಿರಲಿಲ್ಲ. ಚಿಕ್ಯಾಗೋದಲ್ಲಿ ವಿಜಯಿಯಾದ ವೀರನು ತಮ್ಮ ಬಂಧು

ವೆಂಬ ಕಲ್ಪನೆ ಸಹ ಅವರಿಗೆ ಬಂದಿರಲಿಲ್ಲ. ವಿವೇಕಾನಂದರ ಒಂದು ಓಲೆಯಿಂದ ಅವರಿಗೆ ಸಮಾಚಾರ ತಿಳಿಯಿತು. ಹರ್ಷದಿಂದ ಶ್ರೀ ರಾಮಕೃಷ್ಣರ ಭವಿಷ್ಯವಾಣಿಯನ್ನು ನೆನೆದರು: "ತಳಹದಿ ಅದುರುವಂತೆ ವಿಶ್ವವನ್ನೆಲ್ಲ ನರೇಂದ್ರ ನಡುಗಿಸಿ ಬಿಡುವನು!"

ಅರಸರಿಗೆ ಪಂಡಿತರಿಗೆ ಪಾಮರರಿಗೆ ಎಲ್ಲರಿಗೂ ಹರ್ಷವಾಯಿತು. ಕೀರ್ತಿಶಾಲಿಯಾದ ತನ್ನ ಹುದ್ದರಿ ಗೆದ್ದುದಕ್ಕಾಗಿ ಭಾರತವು ವಿಜೃಂಭಣೆಯಿಂದ ಸಮಾರಂಭಗಳನ್ನು ನೆರವೇರಿಸಿತು. ಮದ್ರಾಸ ಬಂಗಾಲಗಳಲ್ಲಿ ಜನತೆಯ ಹೃದಯಜಲಧಿ ಉಕ್ಕೇರಿ ಉತ್ಸಾಹತರಂಗಗಳು ನೆಲ ಮುಗಿಲನ್ನು ಅಪ್ಪಿದವು!

೧೮೯೪ರ ಸೆಪ್ಟೆಂಬರ್ ೫ನೇ ದಿನ. ಚಿಕ್ಯಾಗೋದ ಸಮ್ಮೇಲನವಾಗಿ ಒಂದು ವರ್ಷ ಸಂದುಹೋಗಿದ್ದಿತು. ಕಲಕತ್ತೆಯ ನಗರಮಂದಿರದಲ್ಲಿ ಪ್ರಚಂಡ ಸಭೆ ಸೇರಿತು. ಜನತೆಯ ಎಲ್ಲ ವರ್ಗಗಳ, ಹಿಂದೂಧರ್ಮದ ಎಲ್ಲ ಶಾಖೆಗಳ ಪ್ರತಿನಿಧಿಗಳು ಬಂದಿದ್ದರು. ವಿವೇಕಾನಂದರ ವಿಜಯದ ಸಮಾರಂಭವನ್ನು ನೆರವೇರಿಸಲು ಮತ್ತು ಅಮೇರಿಕೆಗೆ ಧನ್ಯವಾದಗಳನ್ನು ಅರ್ಪಿಸಲು ಸೇರಿದ್ದರು. ವಿಖ್ಯಾತ ಮುಂದಾಳುಗಳ ಸಹಿ ಸಹಿತ ಸುದೀರ್ಘವಾದ ಓಲೆಯೊಂದನ್ನು ಅಮೇರಿಕೆಗೆ ಕಳಿಸಲಾಯಿತು.

ವಿವೇಕಾನಂದರ ಕಾರ್ಯದ ಲಾಭ ಹೊಂದಲು ಕೆಲವು ರಾಜಕೀಯ ಪಕ್ಷಗಳು ಹವಣಿಸಿದವು. ಇದು ವಿವೇಕಾನಂದರಿಗೆ ತಿಳಿಯುತ್ತಲೆ ಅವರು ಬರೆದಿದ್ದರು: "ನಾನು ಅಂದ ಮಾತಿಗೆ ಅಥವಾ ಬರೆದ ಲೇಖಕ್ಕೆ ರಾಜಕೀಯ ಮಹತ್ವವನ್ನು ಕಲ್ಪಿಸಲಾಗದು. ಇದೇನು ಹುಚ್ಚುಚ್ಚಾರ! ರಾಜಕೀಯ ಅಸಂಬದ್ಧತೆಗೂ ನನಗೂ ಯಾವ ಸಂಬಂಧವೂ ಇಲ್ಲ. ರಾಜನೀತಿಯಲ್ಲಿ ನನ್ನ ಶ್ರದ್ಧೆಯಿಲ್ಲ. ದೇವ ಮತ್ತು ಸತ್ಯ ಇವೇ ನನ್ನ ನೀತಿ. ಉಳಿದುದೆಲ್ಲ ಕೆಲಸಕ್ಕೆ ಬಾರದ ಕಸ."

ನಿಷ್ಕಾಮವಾಗಿರದ ಯಾವ ಆಂದೋಲನದಲ್ಲಿಯೂ ಭಾಗ ವಹಿ

ಸಲು ಅವರು ಒಪ್ಪಲಿಲ್ಲ.

"ಸೋಲುಗೆಲುವುಗಳ ಪರಿವೆ ನನಗಿಲ್ಲ.........ನನ್ನ ಆಂದೋಲನ ಪರಿಶುದ್ಧವಾಗಿರಬೇಕು. ಇಲ್ಲವಾದರೆ ಅದಾವುದೂ ನನಗೆ ಬೇಕಿಲ್ಲ."

ಪಶ್ಚಿಮದಲ್ಲಿದ್ದಾಗ ವಿವೇಕಾನಂದರು ಮದ್ರಾಸದಲ್ಲಿಯ ತಮ್ಮ ತರುಣ ಶಿಷ್ಯರ ಸಂಬಂಧವನ್ನು ಎಂದಿಗೂ ತಪ್ಪಿಸಿಕೊಂಡಿದ್ದಿಲ್ಲ. ಆಗಾಗ ಅವರಿಗೆ ಸ್ಫೂರ್ತಿ-ಉತ್ಸಾಹಗಳಿಂದ ಉಕ್ಕುವ ಕಾಗದಗಳನ್ನು ಬರೆಯುತ್ತಿದ್ದರು. ದರಿದ್ರರಾದರೂ, ಜೀವವಿರುವವರೆಗೆ ಶ್ರದ್ಧೆಯಿಂದ ಹೋರಾಡಲು, ಭಗವಂತನ ಸೈನಿಕರಾಗಲು ಅವರಿಗೆ ಹುರಿದುಂಬಿಸುತ್ತಿದ್ದರು.

" ಬಂಧುಗಳಿರಾ, ನಾವು ದರಿದ್ರರು ! ನಾವು ಏತರವರು ? ಎಷ್ಟರವರು ? ನಾವು ಏನೂ ಅಲ್ಲ ! ಆದರೆ ಇಂಥ ದೀನದರಿದ್ರರೇ ಎಂದಿಗೂ ಆ ಮಹಾನ್ ಸರ್ವಶಕ್ತಿಮಂತನ ಸಾಧನಸಾಮುಗ್ರಿಗಳಾಗಿಲ್ಲವೇ ?"

ಮುಂಚಿತವಾಗಿ ಪಶ್ಚಿಮದಿಂದ ಬಂದ ಅವರ ಪತ್ರಗಳಲ್ಲಿ ಮುಂದೆ ಕೈಕೊಳ್ಳಬೇಕಾಗಿರುವ ಕಾರ್ಯದ ರೂಪರೇಷೆ ಹಾಕಲಾಗಿತ್ತು:-

" ಭಾರತದ ದೀನದರಿದ್ರರ ಉದ್ಧಾರ ಮಾಡುವ ಏಕಮಾತ್ರ ಕರ್ತವ್ಯ ಮತ್ತು ಅದಕ್ಕಾಗಿ ವೈಯಕ್ತಿಕ ಶಕ್ತಿಗಳನ್ನೆಲ್ಲ ಕೇಂದ್ರೀಕರಿಸುವುದು, ಆಜ್ಞಾಪಾಲನದ ಸದ್ಗುಣವನ್ನು ಕಲಿತುಕೊಳ್ಳುವುದು, ಮತ್ತು ಇತರರಿಗಾಗಿ ಐಕ್ಯದಿಂದ ಹೋರಾಡಲು ಕಲಿಯುವುದು."

ಆ ಶಿಷ್ಯರ ಪ್ರಗತಿಯನ್ನು ದೂರಿಂದಲೇ ನಿರೀಕ್ಷಿಸುತ್ತಿದ್ದರು. ಮದ್ರಾಸದ " ಬ್ರಹ್ಮವಾದಿನ್ " ಎಂಬ ವೇದಾಂತಪತ್ರಿಕೆಯನ್ನು ಹೊರಡಿಸಲು ಮತ್ತು ತಾವಿಲ್ಲದಾಗ ತಮ್ಮ ಪತಾಕೆಯನ್ನು ಎತ್ತಿ ಹಾರಾಡಿಸಲು ಹಣ ಕಳಿಸುತ್ತಿದ್ದರು. ಆಯಾಸದ ಭಾರದಿಂದ ಕುಸಿಯುವಂತೆ ಆದಾಗಲೂ ಮಾತೃಭೂಮಿಗೆ ಮರಳುವ ದಿನ ಸಮೀಪಿಸ ಹತ್ತಿದಂತೆ ಭಾರತಕ್ಕೆ ಬರೆದ ಅವರ ಓಲೆ ಕಹಳೆಯಂತೆ ಗರ್ಜಿಸುತ್ತವೆ:

" ಮಹಾಕಾರ್ಯವನ್ನು ಮಾಡಬೇಕಾಗಿದೆ...........ಮಕ್ಕಳಿರಾ,

ಹೆದರಬೇಡಿರಿ ! ಧೀರರಾಗಿರಿ !............ಹಿಂದುಸ್ತಾನಕ್ಕೆ ಮರಳಿ ಬಂದು ಅಲ್ಲಿ ಮಾಡಬೇಕಾದುದನ್ನೆಲ್ಲ ಹೂಡುವೆನು. ಕಾರ್ಯ ಮುಂದೆ ಸಾಗಲಿ. ಕೆಚ್ಚೆದೆಯ ಕಲಿಗಳಿರಾ, ಪರಮಾತ್ಮ ನಿಮ್ಮ ಹಿಂದೆ ಇರುವನು !"

ಮದ್ರಾಸದಲ್ಲೊಂದು ಕಲಕತ್ತೆಯಲ್ಲೊಂದು ಹೀಗೆ ಎರಡು ಮತ್ತು ಮುಂದೆ ಮುಂಬಯಿ ಅಲಹಾಬಾದಗಳಲ್ಲಿ ಮತ್ತೆರಡು ಮಧ್ಯವರ್ತಿ ಕೇಂದ್ರಗಳನ್ನು ಸ್ಥಾಪಿಸುವ ಉದ್ದೇಶವನ್ನು ಅವರು ಸಾರಿದರು. ಹಿಂದುಸ್ತಾನವನ್ನು ಮತ್ತು ಪ್ರಪಂಚವನ್ನು ಸೇವಾಬುದ್ಧಿಯಿಂದ ಗೆಲ್ಲಲು ಒಂದು ಕೇಂದ್ರಸಂಸ್ಥೆಯ ಸುತ್ತೆಲ್ಲ ಶ್ರೀರಾಮಕೃಷ್ಣರ ಶಿಷ್ಯಬಂಧುಗಳನ್ನು, ತಮ್ಮ ಶಿಷ್ಯರನ್ನು, ಪಶ್ಚಿಮದಿಂದ ಬಂದ ದಳಪತಿಗಳನ್ನು—ಎಲ್ಲರನ್ನೂ ಶೇಖರಿಸಬೇಕೆಂಬುದೇ ಅವರ ಸಂಕಲ್ಪ.

ಆದುದರಿಂದ ತಾವು ಬರುತ್ತಲೆ ತಮ್ಮ ಆಜ್ಞೆಯ ಒಂದು ಶಬ್ದಕ್ಕಾಗಿ ಕಾದಿರುವ ತಮ್ಮ ಸುಸಜ್ಜಿತ ಸೈನ್ಯವನ್ನು ಅವರು ಎದುರು ನೋಡುತ್ತಿದ್ದರು. ಆದರೆ ಪಶ್ಚಿಮದಲ್ಲಿ ದಿಗ್ವಿಜಯಿಯಾದ ವೀರರನ್ನು ತರುತ್ತಿರುವ ಹಡಗದ ಹಾದಿಯನ್ನು ಕಾಯುತ್ತಾ ಇಡೀ ರಾಷ್ಟ್ರವೆಲ್ಲ—ಅಖಂಡ ಭಾರತದ ಜನತೆಯೆಲ್ಲ — ಹುರಿದುಂಬಿ ತಲೆಯೆತ್ತಿ ನಿಂತಿರಬಹುದೆಂಬ ಕಲ್ಪನೆ ಅವರಿಗೆ ಕನಸಿನಲ್ಲೂ ಬಂದಿರಲಿಲ್ಲ. ದೊಡ್ಡ ದೊಡ್ಡ ಪಟ್ಟಣಗಳಲ್ಲೆಲ್ಲ ಸಮಾಜದ ಎಲ್ಲ ವರ್ಗಗಳ ಸಮಿತಿಗಳು ಅವರನ್ನು ಸ್ವಾಗತಿಸುವುದಕ್ಕಾಗಿ ಸ್ಥಾಪಿಸಲಾದವು. ಸ್ವಾಗತ ಸಮಾರಂಭಕ್ಕಾಗಿ ಮಹಾಮಂಟಪಗಳು ! ತಳಿರುತೋರಣಗಳು ! ಬೀದಿಬೀದಿಗಳ ಮನೆಮನೆಗಳ ಅಲಂಕಾರ ! ಹರ್ಷೋತ್ಸಾಹ ಮೇರೆಮೀರಿ ನುಗ್ಗಿತು ! ಅವರು ಬರುವ ತನಕ ಹಾದಿಯನ್ನು ಕಾಯಲಾರದ ಹಲವರು ದಕ್ಷಿಣ ಭಾರತಕ್ಕೆ ಹರಿದು ಹೋದರು ! ವಿವೇಕಾನಂದರು ಹಡಗದಿಂದ ಇಳಿಯುತ್ತಲೆ ತಾವೇ ಮೊದಲು ಸ್ವಾಗತಿಸಬೇಕೆಂಬ ಹುಮ್ಮಸ್ಸಿನಿಂದ ಹಲವರು ಸಿಂಹಲದ್ವೀಪದ ಸಮುದ್ರದಂಡೆಯನ್ನು ಕಂಡರು !

೧೮೯೭ರ ಜಾನೇವಾರೀ ೧೫ ನೇ ದಿನ ! ಹಡಗದಿಂದ ಸ್ವಾಮಿ

ಇಳಿದರು ! ಸಮುದ್ರತೀರದ ಮೇಲೆ ಗಜಿಬಜಿಸಿದ ಜನಜಾತ್ರೆಯಿಂದ ಪ್ರಚಂಡ ಹರ್ಷಗರ್ಜನೆ ಹೊರಹೊಮ್ಮಿತು ! ಅವರ ಅಡಿದಾವರೆಯನ್ನು ಸೋಂಕಲು ಗುಂಪಿಗೆ ಗುಂಪೇ ಧುಮುಕಿತು ! ಧ್ವಜಪತಾಕೆಗಳೊಂದಿಗೆ ಮೆರವಣಿಗೆ ಹೊರಟಿತು ! ಮಂತ್ರಪಠನ ನಡೆಯಿತು ! ಹಾದಿಹಾದಿಗಳಲ್ಲಿ ಹೂಹೂಗಳ ರಾಶಿ ! ಗಂಗೋದಕವನ್ನು ಚಿಮುಕಿಸಿದರು ! ಮನೆಮನೆಗಳೆದುರಿಗೆ ದೀಪಧೂಪದ ಸುಗಂಧಧೂಮ ಮುಸುಕಿತು ! ಸಾವಿರಾರು ಸಂದರ್ಶಕರು, ಧನಿಕರು, ದರಿದ್ರರು ಕಾಣಿಕೆಗಳನ್ನು ತಂದರು !

ದಕ್ಷಿಣದಿಂದ ಉತ್ತರಕ್ಕೆ ಮತ್ತೊಮ್ಮೆ ಹಿಂದುಸ್ತಾನದ ತುಂಬ ವಿವೇಕಾನಂದರು ಪರ್ಯಟನ ಮಾಡಿದರು. ಮುಂಚೆ ಬೀದಿಯ ಭಿಕಾರಿಯಂತೆ ಅಲೆದಿದ್ದರು. ಆದರೆ ಇಂದು ಅವರ ಪ್ರವಾಸವೆಂದರೆ ಹರ್ಷೋನ್ಮತ್ತ ಜನಜಾತ್ರೆ ಸಾಗಿಸಿದ ವಿಜೃಂಭಣೆಯ ಮೆರವಣಿಗೆ. ಅರಸರು ಅವರ ಮುಂದೆ ಸಾಷ್ಟಾಂಗ ಹಾಕಿದರು. ಅವರ ರಥವನ್ನೆಳೆದರು ತೋಫು ಗರ್ಜಿಸಿದವು. ಆನೆ ಒಂಟೆಗಳಿಂದ ಭೂಷಿತವಾದ ಆ ಪ್ರಚಂಡ ಮೆರವಣಿಗೆಗಳಲ್ಲಿ ಸ್ತುತಿಗೀತಗಳನ್ನು ಪಠಿಸುವ ತಂಡ ತಂಡ ಜನರ ಜಯಘೋಷ ದಿಕ್ಕು ದಿಕ್ಕುಗಳಲ್ಲಿ ದುಮ್ದುಮಿಸಿತು !

ಸ್ವಾಮಿ ಕದನದಿಂದ ಕದಲುವವರಲ್ಲ. ವಿಜಯದುಂದುಭಿಗೂ ಹಿಂಜರಿಯುವವರಲ್ಲ. ಸಂಸಾರದ ಸಿರಿಯನ್ನರಿಯದ, ಹೆಸರುದೆಸೆಯಿಲ್ಲದ, ಮನೆಮಾರು ತೊರೆದ ಮತ್ತು ಪರಮಾತ್ಮನ ಹೊರತು ಇನ್ನೇನೂ ಹತ್ತಿರ ಇರದ ಒಬ್ಬ ಸನ್ಯಾಸಿಗೆ ಇಂಥ ಅಸಾಮಾನ್ಯ ರಾಷ್ಟ್ರೀಯ ಸ್ವಾಗತವೆಂದರೆ ಆ ಎಲ್ಲ ಗೌರವ ತಮಗಲ್ಲ ತಮ್ಮ ಧ್ಯೇಯಕ್ಕೆ ಎಂದು ಅವರು ಮುಚ್ಚುಮರೆಯಿಲ್ಲದೆ ಧಾರಾಳವಾಗಿ ಸಾರಿದರು. ಪವಿತ್ರ ಕಾರ್ಯವನ್ನು ಎತ್ತಿಹಿಡಿಯಲು ತಮ್ಮ ಶಕ್ತಿಗಳನ್ನೆಲ್ಲ ಒಟ್ಟುಗೂಡಿಸಿದರು. ಮೈಯಲ್ಲಿ ಇನ್ನೂ ಶಕ್ತಿಯನ್ನು ಗಳಿಸಬೇಕಾದ ರೋಗಿಯಂತಿದ್ದರು ಅವರು. ಆದರೂ ತಮ್ಮ ಉತ್ಸಾಹವನ್ನು ಮಿತಿಮೀರಿ ವೆಚ್ಚ

ಮಾಡಿದರು. ಉಜ್ವಲ ವ್ಯಾಖ್ಯಾನಗಳ ರೂಪದಿಂದ ಹಾದಿಗುಂಟೆಲ್ಲ ಗಾಳಿಗೆ ತಮ್ಮ ಧ್ಯೇಯದ ಬೀಜಗಳನ್ನು ತೂರಿದರು. ಹಿಂದುಸ್ತಾನವು ಹಿಂದೆಂದೂ ಕೇಳಿರದ ಆ ನಿತಾಂತಸುಂದರವಾದ ವೀರಾವೇಶದ ಉಪ ನ್ಯಾಸಗಳಿಂದ ಇಡೀ ರಾಷ್ಟ್ರದ ರಕ್ತಧಮನಿಗಳಲ್ಲೆಲ್ಲ ಮಿಂಚು ಸುಳಿ ದಂತಾಯಿತು. ಆ ಭಾಷಣಗಳೆಂದರೆ ಅವರ ಕಾರ್ಯದ ಪರಾಕಾ ಷ್ಠೆಯ ಹೆಗ್ಗುರುತು. ಪ್ರಪಂಚದ ಬೇರೊಂದು ಭಾಗದಲ್ಲಿ ದಿಗ್ವಿಜಯಿ ಯಾಗಿ ಅವರು ಮರಳಿ ಮಾತೃಭೂಮಿಗೆ ತಮ್ಮ ಅನುಭವಗಳ ಸಾರ ಸರ್ವಸ್ವವನ್ನು ತಂದಿದ್ದರು. ಪಶ್ಚಿಮದ ಕೂಡ ಬೆಳೆದ ದೀರ್ಘಸಂಬಂಧ ದಿಂದ ಅವರು ಭಾರತದ ವ್ಯಕ್ತಿತ್ವವನ್ನು ಅಂತಃಸತ್ವವನ್ನು ಅರಿಯಲು ಸಮರ್ಥರಾದರು. ಪಶ್ಚಿಮದ ವ್ಯಕ್ತಿತ್ವದ ಬಹುಮುಖ ಶಕ್ತಿಮತ್ತೆಯನ್ನು ಅವರು ಅರಿತರು. ಎರಡೂ ಅವರಿಗೆ ಅಷ್ಟೇ ಅವಶ್ಯವೆನಿಸಿದವು. ಅವು ಪರಸ್ಪರಪೂರಕವಾಗಿದ್ದವು. ಅವೆರಡರ ಸಮನ್ವಯ ಮಾಡಬೇಕೆನ್ನುವ ಅಧಿಕಾರವಾಣಿ ಬೇಕಾಗಿತ್ತು. ಆ ಸಮನ್ವಯದ ಹಾದಿಯನ್ನು ತೋರಿ ಸುವ ಹೊಣೆ — ಅಧಿಕಾರ— ಅವರ ಪಾಲಿಗೆ ಬಂದಿತು.

'ಪವಿತ್ರ ಭರತಭೂಮಿ', 'ವೇದಾಂತದರ್ಶನ' ಎಂಬ ವಿಷಯ ಗಳ ಮೇಲೆ ಅವರು ಕೊಲಂಬೋದಲ್ಲಿ ಒಳ್ಳೇ ಸ್ಫೂರ್ತಿಯಿಂದ ಮಾತ ನಾಡಿದರು. ಧರ್ಮಾಂಧ ಬೌದ್ಧರ ತಂಡವನ್ನು ಲೆಕ್ಕಿಸದೆ ಅನುರಾ ಧಾಪುರದ ಅಂಜೀರಮರದ ನೆಳಲಿನಲ್ಲಿ "ವಿಶ್ವಧರ್ಮ"ದ ಮೇಲೆ ಬಲು ಪರಿಣಾಮಕಾರಕವಾಗಿ ಮಾತನಾಡಿದರು. "ದರಿದ್ರರಲ್ಲಿ, ರೋಗಿಗಳಲ್ಲಿ, ದುರ್ಬಲರಲ್ಲಿ ಶಿವನನ್ನು ಪೂಜಿಸು" ಎಂಬ ಕ್ರಿಸ್ತವಾಣಿಗೆ ಸರಿಹೊಂ ದುವ ವಿಷಯವನ್ನೆತ್ತಿ ರಾಮೇಶ್ವರದ ಜನತೆಯ ಎದುರಿನಲ್ಲಿ ಒಳ್ಳೇ ಉದ್ಬೋಧಕ ಉಪನ್ಯಾಸವಾಯಿತು. ಅಲ್ಲಿಯ ಧರ್ಮಿಷ್ಠನಾದ ಅರಸನು ಹೃದಯದಲ್ಲಿ ಉಕ್ಕಿದ ದಾನಬುದ್ಧಿಯಿಂದ ಹರ್ಷಪರವಶನಾಗಿ ಸಾವಿ ರಾರು ಜನರಿಗೆ ಅನ್ನಸಂತರ್ಪಣೆ ಮಾಡಿಸಿದನು. ಆದರೆ ತಮ್ಮ ಅತ್ಯುಚ್ಚ ಉತ್ಸಾಹವನ್ನು ಅವರು ಮದ್ರಾಸಿನಲ್ಲಿ ಪ್ರಕಟಿಸಲಾಗಿರಿಸಿದರು.

ಆನಂದದ ಉನ್ಮತ್ತ ಆವೇಶದಿಂದ ಅವರ ದಾರಿಯನ್ನು ಅನೇಕ ವಾರಗಳಿಂದ ಮದ್ರಾಸದ ಜನತೆ ಕಾದಿದ್ದಿತು. ಅಲ್ಲಿ ಹದಿನೇಳು ವಿಜಯ ಮಂಟಪಗಳು ತಳಿರುತೋರಣಗಳಿಂದ ಅಲಂಕೃತವಾಗಿ ತಲೆಯೆತ್ತಿ ನಿಂತಿದ್ದವು! ಹಿಂದುಸ್ತಾನದ ಬೇರೆ ಬೇರೆ ಭಾಷೆಗಳಲ್ಲಿ ಒಟ್ಟು ಇಪ್ಪತ್ತನಾಲ್ಕು ಮಾನಪತ್ರಗಳನ್ನು ಸಮರ್ಪಿಸಲಾಯಿತು ! ಜನದ ಮಿಕ್ಕ ಜೀವನವೆಲ್ಲ ನಿಂತು ಹೋಗಿದ್ದಿತು! ಒಂಬತ್ತು ದಿನ ಒಂದೇ ಸವನೆ ವಿಜೃಂಭಣೆಯ ಪ್ರಚಂಡ ಸಮಾರಂಭ !

ಉತ್ಸುಕತೆಯಿಂದ ಮೈಮರೆತ ನಿಂತ ಜನಕ್ಕೆ ಅವರ ಉತ್ತರವೆಂದರೆ ಅದೊಂದು ವೀರ ಸಂದೇಶ. “ ಭಾರತಕ್ಕೆ ಸಂದೇಶ ” ! ಶ್ರೀರಾಮನ, ಶಿವನ, ಕೃಷ್ಣನ ಭಾರತದ ಪುನರುದ್ಧಾರದ ರಣಕಹಳೆ ! ವೀರಹೃದಯವನ್ನು ಅಮರ ಆತ್ಮವನ್ನು ರಣಕ್ಕೆ ಕೂಗುವ ರಣಕಹಳೆ! ಕಾಳಗಕ್ಕಾಗಿ ಮುಂದೆ ಮುಂದಕ್ಕೆ ಕಾಲಿಡಿರಿ ಎಂದು ಕೂಗುವ ಸೇನಾಪತಿಯ ರಣಗರ್ಜನೆ ! ವಿವರಿಸಿ ಹೇಳುವ ಯುದ್ಧಯೋಜನೆ ! ಒಂದಾಗಿರಿ ! ಒಂದಾಗಿ ಹೋರಾಡಿರಿ ! ಇದೇ ಅವರ ಮಂತ್ರ !

“ ಭಾರತಾ ! ನನ್ನ ಭಾರತಾ ! ಎದ್ದೇಳು ! ಎಲ್ಲಿದೆ ನಿನ್ನ ಪ್ರಾಣ? ಎಲ್ಲಿದೆ ನಿನ್ನ ಚೈತನ್ಯ ? ನಿನ್ನ ಅಮರ ಆತ್ಮನಲ್ಲಿ ! ಒಂದೊಂದು ವ್ಯಕ್ತಿಗೆ ಹೇಗೋ ಹಾಗೆ ಒಂದೊಂದು ರಾಷ್ಟ್ರಕ್ಕೆ ಒಂದೊಂದು ವಿಷಯವಿದೆ. ಆ ವಿಷಯ ಆ ರಾಷ್ಟ್ರದ ಕೇಂದ್ರ—ಆ ರಾಷ್ಟ್ರದ ಮುಖ್ಯ ಸ್ವರ. ಆ ಸ್ವರದ ಸುತ್ತು ಸುಳಿದು ಮಿಕ್ಕೆಲ್ಲ ಸ್ವರ ಸಮರಸತೆಯನ್ನು ಹುಟ್ಟಿಸುತ್ತವೆ........ಯಾವುದೇ ರಾಷ್ಟ್ರ ತನ್ನ ರಾಷ್ಟ್ರೀಯ ಚೈತನ್ಯವನ್ನು ಬಿಸುಡುವುದೋ, ಸಾವಿರಾರು ವರ್ಷ ತನ್ನದೆಂದು ಕಂಡು ಹಿಡಿದ ಹಾದಿಯನ್ನು ಬಿಟ್ಟು ಬಿಡುವುದೋ ಆ ರಾಷ್ಟ್ರ ಬದುಕದು!—ಸಾಯುವುದು!...........ಒಂದೊಂದು ರಾಷ್ಟ್ರದಲ್ಲಿ — ಇಂಗ್ಲಂಡ್‌ದಂತೆ— ರಾಜಕೀಯ ಸತ್ತೆಯೇ ಅದರ ಪ್ರಾಣ. ಇನ್ನೊಂದರಲ್ಲಿ ಕಲಾಜೀವನ. ಭಾರತದಲ್ಲಿ ಧಾರ್ಮಿಕ ಜೀವನವೇ ರಾಷ್ಟ್ರದ ಕೇಂದ್ರ, ರಾಷ್ಟ್ರೀಯ

ಜೀವನವೆಂಬ ಸಂಗೀತದ ಮುಖ್ಯ ಸ್ವರ........ ಆದುದರಿಂದ ಧರ್ಮವನ್ನು ಕಿತ್ತು ಹಾಕುವ ಯತ್ನದಲ್ಲಿ ಗೆದ್ದು, ನೀವು ರಾಜಕಾರಣದ ಅಥವಾ ಸಮಾಜಸುಧಾರಣೆಯ ಬೆನ್ನು ಹತ್ತಿದರೆ ಮುಗಿಯಿತು ! ನೀವು ಹೇಳಹೆಸರಿಲ್ಲದ ಹಾಗಾಗಿ ಹೋಗುತ್ತೀರಿ ........ ಸಮಾಜಸುಧಾರಣೆ ರಾಜಕಾರಣ ಇವನ್ನು ಆ ಧಾರ್ಮಿಕ ಚೈತನ್ಯದ ಮುಖಾಂತರವೇ ಮುಂದರಿಸಬೇಕು........ತನ್ನ ಹಾದಿ ಯಾವುದೆಂದು ಪ್ರತಿಯೊಬ್ಬನು ನಿರ್ಧರಿಸಬೇಕಾಗಿದೆ; ಅದರಂತೆ ಪ್ರತಿರಾಷ್ಟ್ರವೂ ನಿರ್ಧರಿಸಬೇಕಾಗಿದೆ. ಯುಗಯುಗಗಳ ಮುಂಚೆ ನಾವು ನಮ್ಮ ಹಾದಿಯನ್ನು ನಿರ್ಧರಿಸಿದ್ದೇವೆ........ಅಮರ ಆತ್ಮದಲ್ಲಿ ಅಚಲ ಶ್ರದ್ಧೆ—ಅದೇ ನಮ್ಮ ಹಾದಿ.... ಅದನ್ನು ಯಾರು ಬಿಟ್ಟುಕೊಡುವರೋ ನೋಡುತ್ತೇನೆ. ಇದೇ ನನ್ನ ಆಹ್ವಾನ. ನಿಮ್ಮ ಪ್ರಕೃತಿಯನ್ನು ಪರಿವರ್ತಿಸುವಿರಾ ?

" ನಿರರ್ಥಕವಾಗಿ ದೂರುತ್ತ ಕುಳಿತಿರುವುದು ಬೇಕಿಲ್ಲ. ಅದಕ್ಕೂ ಹೆಚ್ಚಿನ ಕರ್ತವ್ಯ ನಿಮ್ಮದಿದೆ. ಕೈಯಲ್ಲಿಯ ಕಸುವನ್ನು ಬಳಸಿರಿ. ಅದರಲ್ಲಿ ಎಷ್ಟು ಪ್ರಭಾವವಿರುತ್ತದೆಂಬುದನ್ನು ಅರಿತು ನೀವು ಅದಕ್ಕೆ ಅರ್ಹರಾದರೆ ಲೋಕದಲ್ಲೆಲ್ಲ ಕ್ರಾಂತಿ ಹುಟ್ಟಿಸುವ ಹಬ್ಬಿಸುವ ಹುರುಪು ಬರುವುದು. ಭಾರತವೆಂದರೆ ಅಧ್ಯಾತ್ಮದ ಭಾಗೀರಥಿ. ಆಂಗ್ಲೋ ಸ್ಯಾಕ್ಸನ್ ಜನಾಂಗಗಳ ಭೌತಿಕ ವಿಜಯ ಆ ಭಾಗೀರಥಿಯ ಪ್ರವಾಹಕ್ಕೆ ತಡೆಯಾಗಿಲ್ಲ, ನೆರವಾಗಿದೆ. ಇಂಗ್ಲಂಡದ ಸಾಮರ್ಥ್ಯ ಪ್ರಪಂಚದ ರಾಷ್ಟ್ರಗಳನ್ನು ಒಂದುಗೂಡಿಸಿದೆ. ಸಮುದ್ರದಾಚೆಯ ಹಾದಿಗಳನ್ನು ಇಂಗ್ಲಂಡ್ ತೆರೆದಿರುವುದರಿಂದ ಭಾರತದ ಅಧ್ಯಾತ್ಮದ ತೆರೆಗಳು ಹಬ್ಬುತ್ತ ಹಬ್ಬುತ್ತ ದಿಗಂತಗಳನ್ನು ಪಾವನ ಮಾಡುವವು.

" ಭಾರತದ ಚೈತನ್ಯವಾವುದು ? ಪ್ರಪಂಚವು ದಾರಿ ಕಾಯುತ್ತಿರುವ ಹೊಸ ಶ್ರದ್ಧೆ—ಹೊಸ ಮಾತು—ಅದಾವುದು ?........

" ನಮ್ಮಿಂದ ಲೋಕಕ್ಕೆ — ಮೇಲಿನವರಿಗಿಂತಲೂ ಕೆಳಗಿನವರಿಗೆ, ಸುಶಿಕ್ಷಿತರಿಗಿಂತಲೂ ಅಶಿಕ್ಷಿತರಿಗೆ, ಸಮರ್ಥರಿಗಿಂತಲೂ ದುರ್ಬಲರಿಗೆ—

ಬೇಕಾದ ಇನ್ನೊಂದು ಮಹಾತತ್ತ್ವವೆಂದರೆ ನನ್ನಲ್ಲಿ—ನಿಮ್ಮಲ್ಲಿ, ಎಲ್ಲರಲ್ಲಿ ಎಲ್ಲದರಲ್ಲಿ ಆತ್ಮಪರಮಾತ್ಮರಲ್ಲಿ ಇರುವ ಆಧ್ಯಾತ್ಮಿಕ ಏಕತ್ವ—ಅಖಿಲ ವಿಶ್ವದ, ಅನಂತ ಸತ್ಯದ ಮಹಾಭವ್ಯವಾದ ಅಮರತತ್ತ್ವ ! ನೀವು ನಾನು ಅಣ್ಣತಮ್ಮಂದಿರು ಮಾತ್ರವಲ್ಲದೆ ಇಬ್ಬರೂ ನಿಜವಾಗಿಯೇ ಒಂದೇ ಎಂಬ ನೀತಿದರ್ಶನಕ್ಕೆ ಆತ್ಮದ ಅನಂತ ಐಕ್ಯ ಚಿರಂತನ ತಳಹದಿ ಯಾಗಿದೆ............ಇಂದು ಯುರೋಪಕ್ಕೆ ಈ ತತ್ತ್ವ ಬೇಕಾಗಿದೆ. ದಲಿತ ರಾಷ್ಟ್ರಗಳಿಗೆ—ನಮಗೆ—ಬೇಕಾಗಿದೆ. ಇಂಗ್ಲಂಡ್, ಫ್ರಾನ್ಸ, ಜರ್ಮನಿ, ಅಮೇರಿಕೆಗಳಲ್ಲಿ ಮೈದೋರುತ್ತಿರುವ ರಾಜಕೀಯ ಮತ್ತು ಸಾಮಾಜಿಕ ಆಕಾಂಕ್ಷೆಗಳಿಗೆ ಈ ಮಹಾತತ್ತ್ವ ಯಾರೂ ಅರಿಯದಂತೆ, ತಳಹದಿಯಾಗ ಹತ್ತಿದೆ. ಮೇಲಾಗಿ ಪುರಾತನ ವೇದಾಂತದರ್ಶನಕ್ಕೆ, ಪ್ರಾಚೀನ ಭಾರ ತದ ಆತ್ಮಜ್ಯೋತಿಯಿಂದ ಅಭಿವ್ಯಕ್ತವಾದ ಪರಮಗಂಭೀರ ಪರಮ ಪರಿಶುದ್ಧವಾದ ಅದ್ವೈತದರ್ಶನಕ್ಕೆ ಇದು ತಳಹದಿಯಾಗಿದೆ........ನಾನು ಅದ್ವೈತವನ್ನೇ ತೀರ ಹೆಚ್ಚಾಗಿ ಮತ್ತು ದ್ವೈತವನ್ನು ತೀರ ಕಡಮೆ ಯಾಗಿ ಪ್ರತಿಪಾದಿಸುತ್ತೇನೆಂಬ ದೂರನ್ನು ಒಮ್ಮೆ ಕೇಳಿದೆನು. ಅಹುದು. ದ್ವೈತದಲ್ಲಿ ಅಡಕವಾಗಿರುವ ಮಹಾಭವ್ಯತೆ, ಪ್ರೇಮಭಕ್ತಿಯ ಮಹಾ ಸಾಗರ, ಭಕ್ತಿಪರವಶತೆಯ ಅನಂತ ಆನಂದ ಎಲ್ಲವನ್ನೂ ನಾನು ಬಲ್ಲೆ. ಹರ್ಷದಿಂದಲೇ ಆಗಲಿ, ಕಂಬನಿ ಸುರಿಸುವ ಸಮಯವಲ್ಲ ಇದು. ಸಾಕಷ್ಟು ಕಂಬನಿ ಸುರಿಸಿದುದಾಯಿತು. ಮೆತ್ತಗೆ ಮುದ್ದೆಯಾಗಿರುವ ಹೊತ್ತು ಹೋಯಿತು. ಅರಳಮುದ್ದೆಯಂತಾಗಿದ್ದ ಈ ವರೆಗಿನ ಮಾರ್ದವ ಸಾಕು. ನಮ್ಮ ನಾಡಿಗೆ ಈಗ ಬೇಕಾದುದು ಕಬ್ಬಿಣದ ಸ್ನಾಯು, ಉಕ್ಕಿನ ನರ, ಪ್ರಚಂಡ ಇಚ್ಛಾಶಕ್ತಿ. ಇವೆಲ್ಲವನ್ನು ಪ್ರಪಂಚದಲ್ಲಿಯ ಯಾವ ಶಕ್ತಿಯೂ ವಿರೋಧಿಸಲಾರದು. ಮಹಾಸಾಗರತಳಕ್ಕೆ ಇಳಿದು ಸಾವಿನ ಕಣ್ಣಲ್ಲಿ ಕಣ್ಣಿಟ್ಟು ನೋಡುವ ಸಾಹಸಕ್ಕೂ ಹಿಮ್ಮೆಟ್ಟದೆ, ಈ ಶಕ್ತಿಗಳು ತಮ್ಮ ಧ್ಯೇಯವನ್ನು ಹೇಗಾದರೂ ಸಾಧಿಸುತ್ತವೆ. ಇದು ನಮಗೆ ಈಗ ಬೇಕಾದುದು. ಇದು ಹುಟ್ಟಿ ಬಲಿತು ಬೆಳೆದು ಬಲ

ಶಾಲಿಯಾಗಬೇಕಾಗಿದೆ. ಅದಕ್ಕಾಗಿ ನಾವು ಎಲ್ಲರೂ ಒಂದೇ ಎಂಬ ಅದ್ವೈತದರ್ಶನವನ್ನು ಅರಿಯಲೇ ಬೇಕು. ಮನಗಾಣಲೇ ಬೇಕು. ಶ್ರದ್ಧೆ! ಶ್ರದ್ಧೆ! ಆತ್ಮಶ್ರದ್ಧೆ ನಮಗೆ ಬೇಕೀಗ....ನಿಮ್ಮ ಪುರಾಣಗಳಲ್ಲಿಯ ಮೂವತ್ತು ಮೂರು ಕೋಟಿ ದೇವದೇವತೆಗಳಲ್ಲ, ಇಷ್ಟೇ ಏಕೆ, ಪರಕೀಯರು ನಿಮ್ಮಲ್ಲಿ ತಂದಿರಿಸಿದ ಎಲ್ಲ ದೇವದೇವತೆಗಳಲ್ಲಿ ಸಹ ನಿಮ್ಮ ಶ್ರದ್ಧೆ ಇದ್ದರೂ ನಿಮ್ಮಲ್ಲಿ ಮಾತ್ರ ಆತ್ಮಶ್ರದ್ಧೆ ಇರದಿದ್ದರೆ ನಿಮ್ಮ ಗತಿಯೇನು ? ನಿಮ್ಮ ಉದ್ಧಾರ ಆಗುವುದೆಂತು ? ಆತ್ಮಶ್ರದ್ಧೆಯನ್ನು ವಹಿಸಿ ಅದರ ಬಲದಿಂದ ಎದ್ದು ನಿಲ್ಲಿರಿ........ಕಳೆದ ಸಾವಿರಾರು ವರ್ಷ ಹೊರಗಿನಿಂದ ಬಂದು ಎಂಥವರೋ ನಾಲ್ಕು ಜನ ಪರಕೀಯರು ನಿಮ್ಮನ್ನು—ಮೂವತ್ತು ಮೂರು ಕೋಟಿ ಜನರಾದ ನಿಮ್ಮನ್ನು — ಆಳುತ್ತಿರುವರು. ಅದೇಕೆ ? ಅವರಲ್ಲಿ ಆತ್ಮಶ್ರದ್ಧೆ ಇದ್ದಿತು. ಅದು ನಿಮ್ಮಲ್ಲಿ ಮಾತ್ರ ಇರಲಿಲ್ಲ. ಒಬ್ಬ ಇಂಗ್ಲೀಷರವನು ನಮ್ಮೊಬ್ಬ ದೇಶಬಾಂಧವನನ್ನು ಕೊಂದನೋ ಅಥವಾ ಅವನ ಮೇಲೆ ಅತ್ಯಾಚಾರ ಮಾಡಿದನೋ ಎಂಬ ಸಮಾಚಾರವನ್ನು ವೃತ್ತಪತ್ರದಲ್ಲಿ ಓದಿದೆನು. ದೇಶದ ತುಂಬೆಲ್ಲ ಹಾಹಾಕಾರವೆದ್ದಿತು. ಅದನ್ನು ಓದಿ ಕಂಬನಿ ತುಂಬಿತು. ಆದರೆ ಮರುಕ್ಷಣದಲ್ಲಿಯೇ ಒಂದು ಯೋಚನೆ ಮನಸ್ಸಿನಲ್ಲಿ ಸುಳಿಯಿತು. ಇದಕ್ಕೆಲ್ಲ ಹೊಣೆಗಾರರಾರು ? ಇಂಗ್ಲೀಷರಲ್ಲ. ನಮ್ಮ ಅಧೋಗತಿಗೆ ನಾವೇ ಹೊಣೆಗಾರರು. ಸಿರಿಯ ಮತ್ತು ಸತ್ತೆಯ ಅಹಂಕಾರದಿಂದ ಅಂಧರಾದ ನಮ್ಮ ಪೂರ್ವಜರು ನಮ್ಮ ದೇಶದ ಹೀನ ದರಿದ್ರರನ್ನು ಕಾಲಕೆಳಗೆ ಮೆಟ್ಟುತ್ತ ನಡೆದರು. ಮತ್ತು ರಾಷ್ಟ್ರದ ಸರ್ವಸಾಮಾನ್ಯ ಜನರು ಹೀನದೀನರಾಗಿ, ಗತಿಯಿಲ್ಲದವರಾಗಿ, ತಾವು ಮಾನವರೆಂಬುದನ್ನು ಸಹ ಮರೆತು ಬಿಟ್ಟರು. ಸಾವಿರಾರು ವರ್ಷ ಅವರನ್ನು ಕಟ್ಟಿಗೆ ಕಡಿಯಲು ಮತ್ತು ನೀರು ಹೊರಲು ಹಚ್ಚಿರುವುದರಿಂದ ತಾವು ಕಟ್ಟಿಗೆ ಕಡಿಯುವ ಮತ್ತು ನೀರು ಹೊರುವ ಗುಲಾಮರೆಂದು ಅವರ ನಂಬಿಕೆಯಾಗಿದೆ.

"ನನ್ನ ಭಾವೀ ದೇಶಪ್ರೇಮಿಗಳೇ, ಭಾವೀ ಸುಧಾರಕರೇ, ನಿಮಗೆ

ಭಾವನೆಯಿದೆಯೇ ? ದೇವದೇವತೆಗಳ, ಋಷಿಗಳ ಮತ್ತು ಯೋಗಿಗಳ ವಂಶಜರಾದ ಮೂವತ್ತು ಮೂರು ಕೋಟಿ ಜನ ಪಶುಸಮಾನರಾಗಿರುವರೆಂಬ ಭಾವನೆ ನಿಮಗೆ ಇರುವುದೇ ? ಇದರಿಂದ ನಿಮಗೆ ತಳಮಳವಾಗುತ್ತಿರುವುದೇ ? ಇದರಿಂದ ನಿಮ್ಮ ಕಣ್ಣಿನ ನಿದ್ದೆ ಹಾರಿ ಹೋಗಿದೆಯೇ ?........ ಇದರಿಂದ ನಿಮಗೆ ಹುಚ್ಚು ಹಿಡಿದಂತಾಗಿದೆಯೇ ? ಈ ಹಾಳಿನ ಈ ಗೋಳಿನ ವಿಚಾರ ದುಸ್ಸ್ವಪ್ನದಂತೆ ನಿಮ್ಮ ಬೆನ್ನು ಹತ್ತಿದೆಯೇ ? ಇದರಿಂದ ನೀವು ನಿಮ್ಮ ಹೆಸರುದೆಸೆ, ಮಡದಿ ಮಕ್ಕಳು, ಆಸ್ತಿಪಾಸ್ತಿ, ದೇಹ— ಎಲ್ಲವನ್ನು ಮರೆತಿರುವಿರಾ ? ದೇಶ ಭಕ್ತನಾಗಲು ಅದೇ ಮೊದಲನೆಯ ಹೆಜ್ಜೆ........ಶತಕಾನುಶತಕಗಳ ವರೆಗೆ ಅಧೋಗತಿಯ ಪಾಠ ಸಿಕ್ಕಿದೆ. 'ನೀವೂ ಏನೂ ಅಲ್ಲ ! ಯಾತಕ್ಕೂ ಬಾರದವರು !' ಎಂದು ಅವರಿಗೆ ಹೇಳುತ್ತ ಬಂದಿದೆ. 'ನೀವು ಮನುಷ್ಯರಲ್ಲ !' ಎಂದು ಸರ್ವಸಾಮಾನ್ಯ ಜನರಿಗೆ ಹೇಳುತ್ತ ಬಂದಿದೆ. ಶತಕಾನುಶತಕ ಹೆದರಿಕೆಯಲ್ಲಿ ಬೆದರಿಕೆಯಲ್ಲಿ ಬೆಳೆದು ಬಂದ ಈ ಜೀವಗಳೆಲ್ಲ ಪಶುಸಮಾನವಾಗಿ ಬಿಟ್ಟವೆ. ಆತ್ಮದ ಸುದ್ದಿ ಎಂದಿಗೂ ಅವರ ಕಿವಿಯ ಹತ್ತಿರ ಸುಳಿಯಲಿಲ್ಲ. ಆತ್ಮದ ಸಮಾಚಾರ ಅವರಿಗೆ ತಿಳಿಯಲಿ. ಹೀನ ದೀನ ದರಿದ್ರರಲ್ಲಿಯೂ ಆತ್ಮನಿದ್ದಾನೆಂಬ ಅರಿವು ಅವರಿಗೆ ಆಗಲಿ—ಜನ್ಮಮೃತ್ಯುಜರಾತೀತನಾದ ಆತ್ಮ ! ಶಸ್ತ್ರ ಇರಿಯಲಾರದ ಆತ್ಮ ! ಬೆಂಕಿ ದಹಿಸಲಾರದ ಆತ್ಮ ! ಗಾಳಿ ಒಣಗಿಸಲಾರದ ಆತ್ಮ ! ಅಮರ, ಅನಾದ್ಯನಂತ, ನಿತ್ಯ, ನಿರ್ಮಲ, ಸರ್ವಶಕ್ತ ಸರ್ವವ್ಯಾಪಿಯಾಗಿಹ ಆತ್ಮ !

"ನೀವೆಲ್ಲರೂ, ಪ್ರತಿಯೊಬ್ಬರೂ, ಮಹಾಜನರಾಗಬಹುದು ! ಸಜ್ಜನರಾಗಬಹುದು ! ನಿಮ್ಮಲ್ಲಿ ಅನಂತ ಶಕ್ತಿಯಿದೆ. ಉಚ್ಚನಿರಲಿ ನೀಚನಿರಲಿ, ಬಲಶಾಲಿಯಿರಲಿ, ಬಲಹೀನನಿರಲಿ, ಪ್ರತಿಯೊಬ್ಬನ ಹಿಂದೆ ಆ ಪರಾತ್ಪರ ಸಚ್ಚಿದಾನಂದ ಪರಮಾತ್ಮನಿರುವನೆಂದು ತಿಳಿಸಿ ಹೇಳಿರೋ! ಪ್ರತಿಯೊಬ್ಬ ಗಂಡಸಿಗೆ, ಹೆಂಗಸಿಗೆ, ಕೂಸಿಗೆ, ಕುಲಶೀಲಗಳನ್ನು,

ಎಣಿಸದೆ, ಶಕ್ತಿ-ಅಶಕ್ತಿಗಳನ್ನು ಗಣಿಸದೆ ತಿಳಿಸಿ ಹೇಳಿರೋ! ಪ್ರತಿಯೊಂದು ವ್ಯಕ್ತಿಗೆ ನಾವು ಸಾರಿ ಹೇಳುವಾ! 'ಎದ್ದೇಳಿರಿ! ಎಚ್ಚರಾಗಿರಿ! ಗುರಿ ಮುಟ್ಟುವವರೆಗೆ ನಿದ್ದೆಗೈಯದಿರಿ! ಏಳಿರಿ! ಎಚ್ಚರಾಗಿರಿ! ಈ ದೌರ್ಬಲ್ಯದ ಮಾಯೆಯಿಂದ ಎಚ್ಚರಾಗಿರಿ! ಆತ್ಮ ಅನಂತವಿದೆ! ಸರ್ವಸಮರ್ಥವಿದೆ! ಸರ್ವಜ್ಞವಿದೆ! ಸಿಡಿದು ನಿಲ್ಲಿರಿ! ನಿಮ್ಮ ಸಾಮರ್ಥ್ಯವನ್ನು ಸಾರಿರಿ! ನಿಮ್ಮ ಮಹತ್ವವನ್ನು ಅರಿಯಿರಿ. ನಿಮ್ಮಲ್ಲಿ ಹುದುಗಿದ ಶಿವನನ್ನು ಪ್ರಪಂಚಕ್ಕೆ ಸಾರಿರಿ. ಅವನನ್ನು ಅಲ್ಲಗಳೆಯದಿರಿ!'

"ಹೇಡಿ ಹೆಣಗಳನ್ನಲ್ಲ, ಮನುಷ್ಯರನ್ನು ನಿರ್ಮಿಸುವ ಧರ್ಮ ಬೇಕಾಗಿದೆ ನಮಗೆ. ಮನುಷ್ಯರನ್ನು ನಿರ್ಮಿಸುವ ಸರ್ವಸಂಪೂರ್ಣ ಶಿಕ್ಷಣ ಬೇಕಾಗಿದೆ ನಮಗೆ. ಮನುಷ್ಯರನ್ನು ನಿರ್ಮಿಸುವ ದರ್ಶನಗಳು ಬೇಕಾಗಿವೆ ನಮಗೆ. ಸತ್ಯದ ಪರೀಕ್ಷೆ ಇಲ್ಲಿಯೇ ಇದೆ—ಯಾವುದು ನಿಮ್ಮನ್ನು ಶಾರೀರಿಕ ಬೌದ್ಧಿಕ ಮತ್ತು ಆತ್ಮಿಕ ದೃಷ್ಟಿಗಳಿಂದ ನಿರ್ವೀರ್ಯರನ್ನಾಗಿ ಮಾಡುವುದೋ, ಅದನ್ನು—ಆ ವಿಷಯವನ್ನು—ಬಿಸುಟಿ ಹಾಕಿರಿ. ಅದರಲ್ಲಿ ಜೀವವಿಲ್ಲ ಅದು ಎಂದಿಗೂ ಸತ್ಯವಾಗಲಾರದು. ಸತ್ಯ ಶಕ್ತಿಪ್ರದವಿದೆ. ಸತ್ಯ ಶುದ್ಧವಿದೆ. ಸತ್ಯ ಸರ್ವಜ್ಞಾನಮಯವಿದೆ. ಸತ್ಯ ಶಕ್ತಿಪ್ರದವಿರಲೇ ಬೇಕು. ಜ್ಯೋತಿಃಪ್ರದವಿರಲೇ ಬೇಕು. ಉತ್ಸಾಹಪ್ರದವಿರಲೇ ಬೇಕು........ನಿಮ್ಮನ್ನು ನಿರ್ವೀರ್ಯರನ್ನಾಗಿ ಮಾಡುವ ಗೂಢವಾದಗಳನ್ನು ಬಿಟ್ಟುಬಿಡಿರಿ. ಪ್ರಪಂಚದಲ್ಲಿ ಅತ್ಯಂತ ಉಚ್ಚ ಸತ್ಯಗಳು ತೀರ ತೀರ ಸರಳವಾಗಿವೆ. ನಿಮ್ಮ ಬಾಳಿನಂತೆ ಸರಳವಾಗಿವೆ.

"ಆದುದರಿಂದ........ಹಿಂದುಸ್ಥಾನದಲ್ಲಿ, ಹಿಂದುಸ್ಥಾನದ ಹೊರಗೆ ನಮ್ಮ ಧರ್ಮಶಾಸ್ತ್ರಗಳ ಸತ್ಯತತ್ವಗಳನ್ನು ಕಲಿಸಲು ನಮ್ಮ ತರುಣರನ್ನು ಪ್ರಬೋಧಕರನ್ನಾಗಿ ಸಜ್ಜುಗೋಳಿಸುವ ಸಂಸ್ಥೆಗಳನ್ನು ಪ್ರಾರಂಭಿಸುವ ಯೋಜನೆಯನ್ನು ಮಾಡಿದ್ದೇನೆ. ಮನುಷ್ಯರು, ಮನುಷ್ಯರು ಮನುಷ್ಯತ್ವವುಳ್ಳ ಮನುಷ್ಯರು ಬೇಕಾಗಿರುವರು. ಮಿಕ್ಕುದೆಲ್ಲ ತಾನಾಗಿಯೇ ಬರುವುದು. ಆದರೆ ಸಮರ್ಥರಾದ ಉತ್ಸಾಹಿಗಳಾದ, ಶ್ರದ್ಧಾ

ವಂತರಾದ ಅತ್ಯಂತ ಕಳಕಳಿಯ ತರುಣರು ಬೇಕಾಗಿರುವರು. ಇಂಥ ಒಂದು ನೂರು ತರುಣರು ಬನ್ನಿರಿ. ಪ್ರಪಂಚವೆಲ್ಲ ಪಲ್ಲಟವಾಗುತ್ತದೆ. ಮಿಕ್ಕೆಲ್ಲ ಶಕ್ತಿಗಿಂತ ಇಚ್ಛಾಶಕ್ತಿ ಪ್ರಬಲವಾಗಿದೆ. ಇಚ್ಛೆಯ ಎದುರಿನಲ್ಲಿ ಮಿಕ್ಕುದೆಲ್ಲ ಮಣಿಯಲೇ ಬೇಕು. ಇಚ್ಛಾಶಕ್ತಿ ದೇವರಿಂದ ಬಂದುದು. ನಿರ್ಮಲ ಬಲಶಾಲಿಯಾದ ಇಚ್ಛಾಶಕ್ತಿ ಸರ್ವಸಮರ್ಥವಾಗಿದೆ !........

" ಆನುವಂಶಿಕ ಸಂಸ್ಕಾರದಿಂದ ಬ್ರಾಹ್ಮಣನಿಗೆ ವಿದ್ಯೆಯ ಬಲವು ಹೆಚ್ಚಿದ್ದರೆ, ಬ್ರಾಹ್ಮಣನ ಶಿಕ್ಷಣಕ್ಕಾಗಿ ಹಣ ವೆಚ್ಚಮಾಡದೆ ಹಣವನ್ನೆಲ್ಲ ಹೊಲೆಯನಿಗಾಗಿ ವೆಚ್ಚ ಮಾಡಿರಿ. ದುರ್ಬಲನಿಗೆ ಕೊಡಿರಿ. ಎಲ್ಲ ದಾನದ ಅವಶ್ಯಕತೆ ಅವನಿಗಿದೆ. ಹುಟ್ಟಿನಿಂದಲೇ ಚುರುಕಾಗಿದ್ದರೆ ಬ್ರಾಹ್ಮಣನು ಅನ್ಯರ ನೆರವಿಲ್ಲದೆ ತನ್ನ ಶಿಕ್ಷಣ ದೊರಕಿಸುವನು........ನನಗೆ ತಿಳಿದ ಮಟ್ಟಿಗೆ ಇದು ನ್ಯಾಯ. ಬುದ್ಧಿ ಒಪ್ಪುವಂಥ ನ್ಯಾಯ.

" ಮುಂಬರುವ ಐವತ್ತು ವರ್ಷಗಳಲ್ಲಿ ನಿರರ್ಥಕ ದೇವರೆಲ್ಲ ನಮ್ಮ ಮನದಿಂದ ಮಾಯವಾಗಿ ಹೋಗಲಿ. ರಾಷ್ಟ್ರದೇವನೇ ನಮ್ಮ ಜೀವಂತ ದೇವ. ಎಲ್ಲೆಲ್ಲೂ ಅವನ ಕೈಯೇ, ಎಲ್ಲೆಲ್ಲೂ ಅವನ ಕಾಲೇ ! ಎಲ್ಲೆಲ್ಲೂ ಅವನ ಕಣ್ಣೇ ! ಅವನು ಸರ್ವವ್ಯಾಪಿಯಾಗಿರುವನು. ಮಿಕ್ಕ ದೇವರೆಲ್ಲ ಮಲಗಿರುವರು. ನಮ್ಮ ಸುತ್ತೆಲ್ಲ ಕಾಣುವ ವಿರಾಟ್‌ಸ್ವರೂಪಿಯಾದ ರಾಷ್ಟ್ರದೇವರನ್ನು ಬಿಟ್ಟುಕೊಟ್ಟು ಇನ್ನಾವ ಸುಳ್ಳು ದೇವರನ್ನು ಪೂಜಿಸುವುದು ? ನಮ್ಮ ಸುತ್ತಲೂ ಇರುವ ವಿರಾಟ್‌ಸ್ವರೂಪ ದೇವನ ಪೂಜೆಯೇ ಆದಿಪೂಜೆ!........ಮಾನವರು ಹಾಗೂ ಪ್ರಾಣಿಗಳು ಇವರೇ ನಮ್ಮ ದೇವರು ! ನಾವು ಮೊದಲು ಪೂಜಿಸಬೇಕಾದ ಹೆಚ್ಚಿನ ದೇವರೆಂದರೇ ನಮ್ಮ ದೇಶಬಾಂಧವರು ! "

ಈ ಶಬ್ದಗಳ ಪ್ರತಿಧ್ವನಿಯ ಪ್ರತಿಗರ್ಜನೆಯನ್ನು ಕಲ್ಪನೆಯಿಂದಲೇ ಊಹಿಸಬೇಕು!

ಹೀಗೆ ಗುಡುಗು ಹಾಕಿ ವಿವೇಕಾನಂದರು 'ಶಿವ ! ಶಿವ ! ಶಿವ !' ಎಂದು ಘೋಷಿಸಿದಾಗ ಭಾರತ ಕೂಡ 'ಶಿವ ! ಶಿವ ! ಶಿವ !' ಎಂದು

ಘೋಷಿಸಿತು! ಬಿರುಗಾಳಿ ಬೀಸಿಹೋಯಿತು! ನಾಡಿನಲ್ಲೆಲ್ಲ ಬೆಂಕಿಯ ಮಳೆಗರೆಯಿತು! ಆತ್ಮತೇಜವನ್ನು ಬಡಿದೆಬ್ಬಿಸಿತು! ಮಾನವನಲ್ಲಿ ಮಲಗಿದ ಅನಂತಶಕ್ತಿಯಾದ ದೇವನನ್ನು ಕೆರಳಿಸಿತು! ಅಮೃತದಂತೆ ಮೃತಸಂಜೀವನಿಯಾಯಿತು!

ಆದರೆ ಸತ್ತವರು ಸಿಡಿದೆದ್ದರೇ ? ಅವರ ಸಿಂಹಗರ್ಜನೆಗೆ ಹುರಿದುಂಬಿದ ಹಿಂದುಸ್ತಾನ ಅವರ ಆಶೆಗೆ ಸಲ್ಲುವ ಉತ್ತರವನ್ನಿತ್ತಿತೆ ? ಭಾರತದ ಹುಮ್ಮಸ್ಸಿನ ಕೂಗು ಕಾರ್ಯರಂಗಕ್ಕಿಳಿಯಿತೇ ? ಆ ಕ್ಷಣಕ್ಕೆ ಮಾತ್ರ ಆ ಉರಿಯೆಲ್ಲ ಹೊಗೆಯಲ್ಲಿ ಹುದುಗಿ ಹೋದಂತಾಯಿತು ನಿಜ. ತಮ್ಮ ಸೈನ್ಯಕ್ಕೆ ಬೇಕಾದ ತರುಣರ ತಂಡ ಸಾಕಷ್ಟು ಬರಲಿಲ್ಲೆಂದು ಎರಡು ವರ್ಷಗಳ ನಂತರ ವಿವೇಕಾನಂದರು ಮನನೊಂದು ಸಾರಿದರು. ದುಸ್ಸ್ವಪ್ನದಲ್ಲಿ ಮುಳುಗಿ ಹೋದ, ಪರಂಪರೆಯ ಗುಲಾಮರಾದ, ಮತ್ತು ತಿಲಮಾತ್ರವೇ ಆದ ಯತ್ನದಿಂದಲೂ ಕುಸಿಯುವ ಜನರ ಸ್ವಭಾವ-ಪ್ರಕೃತಿಗಳನ್ನು ಕ್ಷಣಮಾತ್ರದಲ್ಲಿ ಪರಿವರ್ತಿಸಲು ಶಕ್ಯವಿಲ್ಲ. ಆದರೆ ಗುರು ಸೆಳೆದ ಚಬಕದಿಂದ ಬೆಚ್ಚಿ ಬಿದ್ದು ಅರೆಹಾರಿದ ನಿದ್ದೆಯಲ್ಲಿ ಭಾರತ ಮೊಟ್ಟಮೊದಲನೆಯ ಸಲ ಮಿಸುಕಾಡಹತ್ತಿತು. ಆ ದುಸ್ಸ್ವಪ್ನದ ನಡುವೆ ತನ್ನ ದೇವನ ಅರಿವು ತುಂಬಿದ ಭಾರತ ಪ್ರಗತಿಯಾತ್ರೆಯ ಜಯಭೇರಿಯನ್ನು ಮೊದಲಂದು ಹೊಡೆಯಿತು ! ಅಂದಿನಿಂದ ಘೋರ ಕುಂಭಕರ್ಣನಿದ್ರೆ ತೊಲಗಿ ಭಾರತ ಉದಯೋನ್ಮುಖವಾಯಿತು.

ವಿವೇಕಾನಂದರ ಸಮಾಧಿಯ ನಂತರ ಮೂರು ವರ್ಷಗಳಲ್ಲಿ ಮುಂದಿನ ಪೀಳಿಗೆ ತಿಲಕ ಗಾಂಧಿಯವರ ಆಂದೋಲನದ ಪ್ರಸ್ತಾವನೆಯಾದ ವಂಗಭಂಗದ ಆಂದೋಲನವನ್ನು ಕಂಡಿತು. ಅಂದಿನಿಂದ ಇಂದಿನ ವರೆಗೆ ಸುಸಂಘಟಿತವಾದ ಜನತೆಯ ಸಾಮೂಹಿಕ ಆಂದೋಲನದಲ್ಲಿ ಭಾರತ ಧುಮುಕಿದೆ ! ಇದೆಲ್ಲ ಸ್ಫೂರ್ತಿಯ ಉಗಮ ಆ ಮದ್ರಾಸದ ಸಂದೇಶದಲ್ಲಿ ! 'ಭಾರತಾ ! ಎದ್ದೇಳು ! ಬಾ ಮುಂದೆ !' ಎಂದು ಗರ್ಜಿಸಿ ಬಡಿದೆಬ್ಬಿಸಿದ ಆ ವೀರ ವಾಣಿಯ ದಿವ್ಯಸಂದೇಶದಲ್ಲಿ !

ಆ ಶಕ್ತಿಸಂದೇಶದಲ್ಲಿ ಎರಡು ಅರ್ಥ — ರಾಷ್ಟ್ರೀಯ ಮತ್ತು ಮಾನವೀಯ. ಅದ್ವೈತಪ್ರತಿಪಾದಕರಾದ ಆ ಸನ್ಯಾಸಿಶ್ರೇಷ್ಠರಿಗೆ ಆ ಸಂದೇಶದ ಮಾನವೀಯ ಅರ್ಥದಲ್ಲಿಯೇ ಹೆಚ್ಚಾದ ಮಹತ್ವ ಕಂಡರೂ ಆ ಸಂದೇಶದ ಮತ್ತೊಂದು ಅರ್ಥವೇ ರಾಷ್ಟ್ರದ ರಕ್ತಧಮನಿಗಳಲ್ಲಿ ನವಚೈತನ್ಯವನ್ನು ಹರಿಯಿಸಿತು. ಇತಿಹಾಸದ ಆ ಕ್ಷಣದಲ್ಲಿ ಪ್ರಪಂಚವನ್ನೇ ಹುರಿದುಂಬಿಸಿದ ದೇಶಾಭಿಮಾನದ ಕೂಗಿಗೆ ಭಾರತವೂ ಕಿವಿಗೊಟ್ಟಿತು.

ದೇಶಾಭಿಮಾನದ ರಾಕ್ಷಸೀ ಆವೇಶದ ಘಾತಕ ಪರಿಣಾಮಗಳನ್ನು ನಾವು ಇಂದು ಕಣ್ಣಾರೆ ಕಾಣುತ್ತಿದ್ದೇವೆ. ಈ ರಾಷ್ಟ್ರೀಯತ್ವದ ಬಸುರಿನಲ್ಲಿ ಅನಾಹುತವು ಹುದುಗಿಯೇ ಇದ್ದಿತು. ಎಲ್ಲ ತರದ ಮೂರ್ಖತನದ ಕೃತಿಗಳಿಗೆ ಎಡೆಗೊಡುವ ಜನಾಂಗದ ಅಥವಾ ರಾಷ್ಟ್ರದ ಪಾಶವೀ ಹೆಮ್ಮೆಯೆಂಬುದರ ಪ್ರಯೋಜನಕ್ಕಾಗಿ ರಾಷ್ಟ್ರೀಯ ಭಾವನೆಯ ಉಚ್ಚ ಆತ್ಮಿಕ ಸಾಮರ್ಥ್ಯವನ್ನು ಹೊರಳಿಸಿಕೊಳ್ಳಬಹುದೆಂಬ ಅಂಜಿಕೆಗೆ ಕಾರಣವಿದ್ದೇ ಇತ್ತು. ಈ ಘೋರ ಅನಾಹುತದ ಭಯವನ್ನು ಇಂದು ನಾವು ಬಲ್ಲೆವು. ಅತ್ಯಂತ ನೀಚ ರಾಷ್ಟ್ರೀಯ ವಿಕಾರಗಳ ತೃಪ್ತಿಗಾಗಿ ಅದೆಂಥ ಪರಿಶುದ್ಧವಾದ ಆದರ್ಶಗಳ ಹೋಳಿಯಾಗಿದೆಂಬುದನ್ನು ನಾವು ಕಣ್ಣಾರೆ ಕಂಡಿದ್ದೇವೆ. ಆದರೆ ರಾಷ್ಟ್ರೀಯ ಐಕ್ಯದ ಭಾವನೆಯನ್ನು ಉದ್ದೀಪಿಸದ ಹೊರತು ಅಸ್ತವ್ಯಸ್ತವಾದ ಅಸಂಘಟಿತವಾದ ಭಾರತದಲ್ಲಿ ಮಾನವೀಯ ಐಕ್ಯದ ಭಾವನೆಯ ಬೀಜ ಬಿತ್ತುವುದೆಂತು ? ಒಂದು ಇನ್ನೊಂದಕ್ಕೆ ಹಾದಿ. ಹೆಚ್ಚಿನ ಕಷ್ಟದ ದಾರಿಯಾದರೂ ಚಿಂತೆಯಿಲ್ಲ ನೇರವಾದ ಇನ್ನೊಂದು ದಾರಿಯೇ ನನಗೆ ಹೆಚ್ಚಾಗಿ ಸಮ್ಮತವಾಗಿದೆ. ರಾಷ್ಟ್ರೀಯತ್ವದ ಹಾದಿ ಹಿಡಿದ ಜನರೆಲ್ಲ ಆ ಹಾದಿಯನ್ನು ತುಳಿಯುತ್ತ ಅದೇ ಅವಸ್ಥೆಯಲ್ಲಿ ನಿಂತು ಬಿಡುವರು. ರಾಷ್ಟ್ರೀಯತ್ವದ ಸೀಮೆ ದಾಟಿ ಹೋಗುವುದೇ ಇಲ್ಲ, ಶ್ರದ್ಧೆಯ ಮತ್ತು ಪ್ರೀತಿಯ ತಮ್ಮ ಸಾಮರ್ಥ್ಯವನ್ನೆಲ್ಲ ಅವರು ಹಾದಿಯಲ್ಲಿಯೇ ವೆಚ್ಚ ಮಾಡಿ ಬಿಡು

ತ್ತಾರೆ........ಆದರೆ ವಿವೇಕಾನಂದರ ಉದ್ದೇಶ ಹೀಗಿರಲಿಲ್ಲ. ಎಚ್ಚತ್ತ ಭಾರತ ತನ್ನ ಅಳಿದ ಸಾಮರ್ಥ್ಯವನ್ನು ಮತ್ತೆ ಗಳಿಸಿಕೊಂಡು ಮಾನವ ಕುಲದ ಸೇವೆಯನ್ನು ಮಾಡಬೇಕೆಂಬುದೇ ಗಾಂಧಿಯವರಂತೆ ಅವರದಾದರೂ ಉದ್ದೇಶ. ಆದರೂ ಗಾಂಧಿಯವರಿಗಿಂತ ಹೆಚ್ಚು ಚಾಣಾಕ್ಷರಾದ ವಿವೇಕಾನಂದರು ರಾಜಕಾರಣದಲ್ಲಿ ಧರ್ಮದ ವರ್ಚಸ್ಸನ್ನು ನೆಲೆಗೊಳಿಸಬೇಕೆನ್ನುವ ಗಾಂಧಿಯವರ ಹತಾಶ ಯತ್ನವನ್ನು ಎಂದೂ ಒಪ್ಪುತ್ತಿದ್ದಿಲ್ಲ. ಅಮೇರಿಕೆಯಿಂದ ಬಂದ ಅವರ ಪತ್ರಗಳ ಮೇಲಿಂದ ನಿಚ್ಚಳವಾಗಿ ಕಾಣುವುದೇನಂದರೆ ಪ್ರತಿಯೊಂದು ಸಂದರ್ಭದಲ್ಲಿ ಅವರು ರಾಜಕಾರಣಕ್ಕೂ ತಮಗೂ ನಡುವೆ ಬಿಚ್ಚುಗತ್ತಿಯನ್ನು ಇಡುತ್ತಿದ್ದರು: " ರಾಜಕಾರಣದ ಹುಚ್ಚುಚ್ಚಾರಕ್ಕೂ ನನಗೂ ಯಾವ ಸಂಬಂಧವೂ ಇರಲು ಶಕ್ಯವಿಲ್ಲ. " ಆದರೆ ವಿವೇಕಾನಂದರು ಯಾವಾಗಲೂ ತಮ್ಮ ಸ್ವಭಾವಧರ್ಮವನ್ನು ಮತ್ತು ಆತ್ಮದ ಅದಮ್ಯ ತೇಜವನ್ನು ಲಕ್ಷ್ಯದಲ್ಲಿ ಇಡಬೇಕಾಗುತ್ತಿತ್ತು. ಗೆದ್ದವರ ಅಹಂಕಾರದಿಂದ ಮೂರ್ಖ ಮದಾಂಧತೆಯಿಂದ ಇಂಗ್ಲೀಷರು ಮಾಡುವ ಅಪಮಾನಕ್ಕೆ ಕೆರಳಿ ಸಿಡಿದೆದ್ದು ತನ್ನ ದರ್ಶನವನ್ನು ಒಪ್ಪದೆ ಹೋದರೂ ತಪ್ಪಿಲ್ಲ, ರಾಷ್ಟ್ರೀಯತ್ವದ ಭಯಂಕರ ಭಾವಾವೇಶಕ್ಕೆ ಗುರಿಯಾಗುವಂತೆ ವಿವೇಕಾನಂದರಲ್ಲಿದ್ದ ಆ ಸ್ವಾಭಿಮಾನಿಯಾದ ಭಾರತೀಯನು ದಾರುಣ ಪ್ರತಿಕ್ರಿಯೆ ತೋರುತ್ತಿದ್ದನು. ೧೮೯೮ರ ಅಕ್ಟೋಬರದ ಮೊದಲಿನ ಕೆಲ ದಿನಗಳಲ್ಲಿ ತಲೆದೋರಿದ ಆತ್ಮಿಕ ಅಲ್ಲೋಲಕಲ್ಲೋಲ ಶಾಂತವಾಗುವವರೆಗೆ ಆ ಆಂತರಿಕ ಹೋರಾಟ ಸಾಗಿಯೇ ಇದ್ದಿತು.

ಕೆಲ ಧರ್ಮಾಂಧ ಮುಸಲ್ಮಾನರು ಒಂದು ಕಾಲೀ ದೇವಾಲಯವನ್ನು ಭ್ರಷ್ಟನಷ್ಟವಾಗಿ ಮಾಡಿದ್ದರು. " ಇಂಥದ್ದನ್ನು ನಡೆಯಗೊಡುವುದೆಂತು ? ನಾನು ಅಲ್ಲಿ ಇದ್ದುದಾದರೆ ನನ್ನ ತಾಯಿಯನ್ನು ಸಂರಕ್ಷಿಸಲು ನನ್ನ ಪ್ರಾಣಗಳನ್ನೇ ಈಡಾಡುತ್ತಿದ್ದೆ ! " ಎಂಬ ಆವೇಶದಿಂದ ವಿವೇಕಾನಂದರು ನಡುಗಿದರು. ಅದಕ್ಕೂ ಮುಂಚೆ ಕೆಲ ದಿನ

ಗಳ ಹಿಂದೆ ಇಂಗ್ರಜೀ ಸತ್ತೆಯು ಪಾಶವೀ ದುರುಪಯೋಗದಿಂದ ಅವರ ರಾಷ್ಟ್ರೀಯ ಸ್ವಾಭಿಮಾನಕ್ಕೆ ಆಘಾತವಾಗಿತ್ತು. ತಮ್ಮ ಮಾತೃಭೂಮಿಯ ದೀನ ದುರ್ದಸೆಯನ್ನೂ ಸಂಕಟಪರಂಪರೆಯನ್ನೂ ನೆನೆದು ಉಕ್ಕಿ ಭೋರ್ಗರೆವ ಭಾವನೆಗಳಿಗೆ ಗುರಿಯಾಗಿ ಅವರು ಕಾಶ್ಮೀರದಲ್ಲಿಯ ಕಾಲೀಮಾತೆಯ ಒಂದು ದೇವಾಲಯದಲ್ಲಿ ಏಕಾಕಿಯಾಗಿ ಸಮಾಧಿ ಮಗ್ನರಾದರು. ಸಮಾಧಿಯಿಂದ ಹೊರಗೆ ಹೊಸ ಮನುಷ್ಯರಾಗಿ ಬಂದು ಭಗಿನೀ ನಿವೇದಿತೆಗೆ ಅಂದರು:

"ನನ್ನ ದೇಶಾಭಿಮಾನವೆಲ್ಲ ಉರಿದು ಹೋಯಿತು. ನಾನು ತಪ್ಪಿದ್ದೆ. ನನಗೆ ಕಾಲೀಮಾತೆ ಅಂದಳು: 'ಶ್ರದ್ಧಾಹೀನರು ನನ್ನ ದೇಗುಲಗಳನ್ನೆಲ್ಲ ಹಾಳುಗೆಡಹಿದರೇನು? ನನ್ನ ಮೂರ್ತಿಗಳನ್ನು ಒಡೆದರೇನು? ಅದರಿಂದ ನಿನಗೇನು? ನನ್ನನ್ನು ನೀನು ರಕ್ಷಿಸುತ್ತಿರುವೆಯಾ? ಅಥವಾ ನಿನ್ನನ್ನು ನಾನು ರಕ್ಷಿಸುತ್ತಿರುವೆನೋ?' ದೇಶಾಭಿಮಾನದ ಅಹಂಕಾರ ಅಳಿದು ಹೋಯಿತು! ನಾನು ಒರೀ ಒಂದು ಚಿಕ್ಕ ಮಗು!"

ಆದರೆ ಮದ್ರಾಸದ ಆ ವೀರಸಂದೇಶಗಳ ಧಬಧಬೆಯ ಧ್ವನಿಯಲ್ಲಿ, ಪ್ರವಾಹದ ರಭಸದಲ್ಲಿ ಮಾನವನ ಅಹಂಕಾರವನ್ನು ತಡೆಹಿಡಿಯುವ ಕಾಲೀಮಾತೆಯ ತಿರಸ್ಕಾರಪೂರ್ವಕವಾದ ಮತ್ತು ಪ್ರಸನ್ನವಾದ ವಾಣಿ ಜನತೆಯ ಕಿವಿಗೆ ಕೇಳಿಸಲೇ ಇಲ್ಲ. ಭೋರ್ಗರೆವ ಪ್ರವಾಹದ ರೋಷಾವೇಶದಲ್ಲಿ ಜನತೆ ಹರಿದುಕೊಂಡು ಹೋಯಿತು!

## (೯) ಶ್ರೀರಾಮಕೃಷ್ಣ ಸೇವಾಸಂಘದ ಸ್ಥಾಪನೆ

ಜನತೆಯ ನಿಜವಾದ ಮುಂದಾಳು ಸಣ್ಣ ಮಾತನ್ನು ಸಹ ಅಲಕ್ಷಿಸುವುದಿಲ್ಲ. ಧ್ಯೇಯಸಾಧನೆಯ ಹಾದಿಯ ಮೇಲೆ ಜನರನ್ನು, ಕರೆದೊಯ್ಯಲು ಕೇವಲ ಅವರ ಉತ್ಸಾಹವನ್ನು ಕೆರಳಿಸಿದರೆ ಮಾತ್ರ ಸಾಲದು. ಈ ಮಾತನ್ನು ವಿವೇಕಾನಂದರು ಅರಿತಿದ್ದರು. ಜನರ

ಆಧ್ಯಾತ್ಮಿಕ ಪಥಕವನ್ನು ನಿರ್ಮಿಸುವುದು ಬೇಕಾಗಿದ್ದಿತು ಅವರಿಗೆ. ತಾವು ಆರಿಸಿದ ವ್ಯಕ್ತಿಗಳು ಜನರಿಗೆ ಹೊಸಯುಗದ ಆದರ್ಶಗಳಾಗಿ ಕಾಣಬೇಕು. ಇಂಥ ಆದರ್ಶ ವ್ಯಕ್ತಿಗಳನ್ನು ಕಣ್ಣಾರೆ ಕಂಡೇ ಜನರು ಹೊಸ ಯುಗದ ಮಾತನ್ನು ಆಸ್ಥೆಯಿಂದ ನಂಬಲು ಸಾಧ್ಯ.

ಅದಕ್ಕಾಗಿಯೇ ಮದ್ರಾಸ್ ಕಲಕತ್ತೆಗಳ ವಿಜಯವಿಜೃಂಭಣೆಯ ಜಂಜಾಟದಿಂದ ಮುಕ್ತರಾಗುತ್ತಲೆ ವಿವೇಕಾನಂದರು ಆಲಮ್‌ಬಝಾರ ದಲ್ಲಿಯ ತಮ್ಮ ಆಶ್ರಮದತ್ತ ಕಣ್ಣು ಹೊರಳಿಸಿದರು. ಗುರುಬಂಧು ಗಳನ್ನು ತಮ್ಮ ವಿಚಾರಗಳ ಮಟ್ಟಕ್ಕೆ ತರಲು ಅವರಿಗೆ ಪ್ರಯಾಸ ವಾಯಿತು. ವಿಶ್ವಯಾತ್ರೆಗಾಗಿ ಹಾರಾಡಿದ ಆ ಗರುಡನ ದೃಷ್ಟಿ ದಿಗಂತ ಗಳನ್ನೆಲ್ಲ ಸುತ್ತರಿದಿತ್ತು. ಆದರೆ ಮನೆಯ ಮೂಲೆಯಲ್ಲಿ ಭಗವಂತನ ಉಪಾಸನೆ ಮಾಡುತ್ತ ಕುಳಿತ ಗುರುಬಂಧುಗಳ ವೈಚಳಿ ಹೋಗಿದ್ದಿಲ್ಲ, ಹೆದರಿಕೆ ಹಾರಿದ್ದಿಲ್ಲ. ತಮ್ಮ ಮಹಾಬಂಧುವನ್ನು ಅವರು ಪ್ರೀತಿಸಿ ದರು. ಆದರೆ ಅವರನ್ನು ಅರಿಯುವುದು ಗುರುಬಂಧುಗಳಿಗೆ ದುಸ್ತರ ವಾಯಿತು. ವಿವೇಕಾನಂದರನ್ನು ಹುರಿದುಂಬಿಸಿದ ರಾಷ್ಟ್ರಸೇವೆಯ ಮತ್ತು ಸಮಾಜಸೇವೆಯ ಆದರ್ಶ ಅವರಿಗೆ ತಿಳಿಯಲಿಲ್ಲ. ಪರಂಪರಾ ಗತ ಭಾವನೆ, ವೈಯಕ್ತಿಕ ಧರ್ಮಮಾರ್ಗ, ಪ್ರಶಾಂತ ಧ್ಯಾನ, ಅಲಿಪ್ತ ಮತ್ತು ನಿಶ್ಚಿಂತ ಜೀವನ — ಇವನ್ನೆಲ್ಲ ಹೋಮಿಸುವುದೆಂದರೆ ಅವರಿಗೆ ಸಂಕಟ ಬಂದಿತು. ತಮ್ಮ ಭಕ್ತಿಮಯ ಅಹಂಕಾರದ ಸಮರ್ಥನೆಗಾಗಿ ಪ್ರಾಮಾಣಿಕ ಬುದ್ಧಿಯಿಂದ ಪವಿತ್ರ ಕಾರಣಗಳನ್ನು ಅವರು ಸುಲಭವಾಗಿ ಮುಂದೊಡ್ಡಿದರು. ಜಗದ ಜಂಜಡದಿಂದ ನಿರ್ಲಿಪ್ತರಾದ ಗುರು ರಾಮ ಕೃಷ್ಣರ ಉದಾಹರಣೆಯನ್ನು ಎತ್ತಿ ತೋರಿದರು. ಆದರೆ ಶ್ರೀರಾಮಕೃಷ್ಣರ ಅತ್ಯಂತ ಪ್ರಗಾಢ ವಿಚಾರಗಳ ನಿಜವಾದ ಭಾಂಡಾರ ತಾವೇ ಎಂದು ವಿವೇಕಾನಂದರು ಪ್ರತಿಪಾದಿಸಿದರು. ಮದ್ರಾಸ್ ಮತ್ತು ಕಲಕತ್ತೆ ಗಳಲ್ಲಿ ಅವರು ಶ್ರೀರಾಮಕೃಷ್ಣರ ಹೆಸರಿನಿಂದಲೇ ಯಾವಾಗಲೂ ಮಾತ ನಾಡಿದುದು. "ನನ್ನ ಗುರು, ನನ್ನ ಆದರ್ಶ, ನನ್ನ ವೀರ, ನನ್ನ

ಮುಂದಾಳು, ಈ ಬಾಳಿನಲ್ಲಿ ನನ್ನ ದೇವರು." ತಾವು ಪರಮಹಂಸರ ದನಿ ಎಂದು ಸಾರಿದರು. ಯಾವ ಹೊಸ ವಿಚಾರವನ್ನೂ ತಾವು ಹೇಳುತ್ತಿಲ್ಲವೆಂದೂ, ತಾವು ಕೇವಲ ಪರಮಹಂಸರ ನಂಬಿಗೆಯ ಆಳಾಗಿದ್ದು ಅವರ ಆಜ್ಞಾಪಾಲನಕ್ಕಾಗಿ ನಿಂತವರೆಂದೂ ಸಾರಿದರು.

"ನನ್ನಿಂದ ಏನಾದರೂ ಕಾರ್ಯವಾಗಿದ್ದರೆ, ನನ್ನ ಬಾಯಿಂದ ಹೊರಬಿದ್ದ ಒಂದಾದರೂ ಶಬ್ದದಿಂದ ಯಾರಿಗಾದರೂ ನೆರವಾಗಿದ್ದರೆ, ಅದು ನನ್ನದಲ್ಲ. ಅದು ಅವರದೇ. ಅದು ನನ್ನ ಗುರುಗಳದೇ. ದುರ್ಬಲವಾದುದೆಲ್ಲ ನನ್ನದು. ಜೀವನದಾಯಿಯಾದುದು, ನಿರ್ಮಲವಾದುದು, ಪವಿತ್ರವಾದುದು — ಎಲ್ಲವೂ ಅವರದೇ ಸ್ಫೂರ್ತಿ ! ಅವರದೇ ವಾಣಿ ! ಸ್ವತಃ ಅವರೇ !"

ಹಿಂದೆ ಗೂಡಿನಲ್ಲುಳಿದ ಶಿಷ್ಯರ ಮೇಲೆ ರೆಕ್ಕೆಗಳನ್ನು ಹರವಿದ ಶ್ರೀರಾಮಕೃಷ್ಣರೊಬ್ಬರು, ಅವೇ ರೆಕ್ಕೆಗಳನ್ನು ಹರವಿ ತಮ್ಮ ಶಿಷ್ಯನ ರೂಪದಿಂದ ಪ್ರಪಂಚವನ್ನೆಲ್ಲ ಸುತ್ತಿ ಬಂದ ಶ್ರೀರಾಮಕೃಷ್ಣರು ಇನ್ನೊಬ್ಬರು. ಈ ಇಬ್ಬರು ರಾಮಕೃಷ್ಣರಲ್ಲಿ ವಿರೋಧ ಅನಿವಾರ್ಯವಿದ್ದಿತು. ಈ ವಿರೋಧದಲ್ಲಿ ಗೆಲುವು ಯಾರದೆಂಬ ವಿಷಯದಲ್ಲಿ ಸಂಶಯವೇ ಇರಲಿಲ್ಲ. ವಿಜಯಿಯಾದ ತರುಣನ ಅನ್ಯಾದೃಶ ವರ್ಚಸ್ಸು, ಅವನ ಪ್ರತಿಭೆಯ ಶ್ರೇಷ್ಠತೆ, ಭಾರತವು ಮಾಡಿದ ಅವನ ಜಯಜಯಕಾರ, ಇಷ್ಟೇ ಅಲ್ಲದೆ ಗುರುಬಂಧುಗಳು ವಿವೇಕಾನಂದರ ವಿಷಯದಲ್ಲಿ ತಾಳಿದ ಮತ್ತು ಶ್ರೀರಾಮಕೃಷ್ಣರು ತೋರಿದ ಪ್ರೀತಿ—ಇವೆಲ್ಲವುಗಳ ಮೇಲಿಂದ ಈ ವಿರೋಧದ ಕೊನೆಯನ್ನು ಮೊದಲೇ ಊಹಿಸಬಹುದಾಗಿತ್ತು. ವಿವೇಕಾನಂದರು ಪರಮಹಂಸರ ಪಟ್ಟಶಿಷ್ಯರಾದರು.

ಆದುದರಿಂದ ವಿವೇಕಾನಂದರ ಆದೇಶಗಳನ್ನು ಮನಸ್ಸಿನಿಂದ ಸಂಪೂರ್ಣವಾಗಿ ಒಪ್ಪದಿದ್ದರೂ ಗುರುಬಂಧುಗಳು ಅವನ್ನೆಲ್ಲ ಪಾಲಿಸಿದರು. ತಮ್ಮ ಮಂಡಲದಲ್ಲಿ ಯುರೋಪೀಯ ಶಿಷ್ಯರನ್ನು ಸ್ವೀಕರಿಸಲು ಮತ್ತು ಸಮಾಜಸೇವೆಯ ವ್ರತವನ್ನು ವಹಿಸಲು ವಿವೇಕಾನಂದರು

ಒತ್ತಾಯ ಪಡಿಸಿದರು. ತಮ್ಮ ವಿಷಯದಲ್ಲಾಗಲಿ ತಮ್ಮ ಉದ್ಧಾರದ ವಿಷಯದಲ್ಲಾಗಲಿ ವಿಚಾರ ಮಾಡಕೂಡದೆಂದು ವಿಧಿಸಿದರು. ಪರರನ್ನು ಉಳಿಸಲು ಅವಶ್ಯವಾದರೆ ನರಕದ ಅಂಧತಮಸ್ಸಿನಲ್ಲಿ ಜಿಗಿಯಲು ಕೂಡ ಟೊಂಕ ಕಟ್ಟಿದ ಸನ್ಯಾಸಿಗಳ ಹೊಸದೊಂದು ಸಂಪ್ರದಾಯವನ್ನು ನಿರ್ಮಿಸುವುದಕ್ಕಾಗಿ ನಾನು ಬಂದುದು ಎಂದು ಸಾರಿದರು. ತಮ್ಮ ಮುಕ್ತಿಯ ವಿಷಯದಲ್ಲಿ ವಿಚಾರ ಮಾಡುವುದು ಅವತಾರ ಪುರುಷರ (ಪರಮಹಂಸರ) ಶಿಷ್ಯರಿಗೆ ಸಲ್ಲದೆಂದು ವಾದಿಸಿದರು. ಏಕಾಂತ ಉಪಾಸನೆ ಬೇಕೆನ್ನುವ ನಿರರ್ಥಕ ದೇವದೇವತೆಗಳ ಪ್ರಸ್ಥ ಸಾಕು! ಸರ್ವಭೂತಾಂತರ್ಹಿತನಾದ, ವಿರಾಟ್‌ಸ್ವರೂಪನಾದ, ಚೈತನ್ಯಮಯನಾದ ಹೊಸಯುಗದ ದೇವನ ಉಪಾಸನೆ ಆರಂಭವಾಗಲಿ! ಆ ಉಪಾಸನೆಯ ಕೂಗಿಗೆ ಪ್ರತಿಯೊಬ್ಬ ಮಾನವನ ಹೃದಯದಲ್ಲಿ ಮಲಗಿದ ಬ್ರಹ್ಮಶಾರ್ದೂಲ ಎದ್ದೇಳಲಿ!

ಆ ಗುರುಬಂಧುಗಳು ಉತ್ತಮರು. ಹಲವರು ವಿವೇಕಾನಂದರಿಗಿಂತ ಹಿರಿಯರು. ಒಮ್ಮೊಮ್ಮೆ ನಿಜವಾದ ಶ್ರದ್ಧೆ ಮನಸ್ಸಿನಲ್ಲಿ ಮೈದೋರದಿದ್ದರೂ ಆವರು ವಿವೇಕಾನಂದರ ಆದೇಶಗಳನ್ನು ಪಾಲಿಸಿದರು. ಸ್ವಾಮಿಯವರ ಆದೇಶವಾಣಿಯು ಸರಣಿ ಅಷ್ಟು ಪ್ರೇರಕವಾಗಿತ್ತು. ಒಂದು ದಿನ ಸಹ ಕದಲದೆ ಸತತ ಹನ್ನೆರಡು ವರ್ಷ ಮಠದಲ್ಲಿ ಸೇರಿಕೊಂಡ ರಾಮಕೃಷ್ಣಾನಂದರು ಮಠ ಬಿಟ್ಟು ಹೊರಬಿದ್ದರು. ಉಳಿದವರಿಗೆ ಅವರು ಉದಾಹರಣೆಯನ್ನು ಹಾಕಿಕೊಟ್ಟರು. ದಕ್ಷಿಣ ಹಿಂದುಸ್ತಾನದಲ್ಲಿ ವೇದಾಂತತತ್ವಪ್ರಸಾರಕ್ಕಾಗಿ ಮದ್ರಾಸಕ್ಕೆ ಹೋಗಿ ಅಲ್ಲೊಂದು ಕೇಂದ್ರವನ್ನು ಸ್ಥಾಪಿಸಿದರು. ಸೇವಾಭಾವನೆಯಿಂದ ತುಂಬಿ ತುಳುಕುವ ಅಖಂಡಾನಂದರು ಎರಡನೆಯವರು. ಮುರಶಿದಾಬಾದಕ್ಕೆ ಹೋಗಿ ಭೀಕರ ಬರಗಾಲದ ಭವಣೆಯಿಂದ ಪೀಡಿತರಾದ ಜನರ ಕಷ್ಟನಿವಾರಣೆಗಾಗಿ ಟೊಂಕ ಕಟ್ಟಿದರು.

ಸಮಾಜಸೇವೆಯ ಬೇರೆ ಬೇರೆ ಹಾದಿಗಳನ್ನು ಹಿಡಿದು ನೋಡಿ

ದರು. ಮೊದಮೊದಲು ಕೆಲಮಟ್ಟಿಗೆ ಅವ್ಯವಸ್ಥೆಯಾಯಿತು. ವ್ಯವಸ್ಥಿತವಾದ ಒಂದು ಯೋಜನೆಯನ್ನು ನಿಯೋಜಿಸಲೇಬೇಕೆಂದು ವಿವೇಕಾನಂದರ ತಳಮಳ. ಒಂದು ದಿನ ಸಹ ಹಾಗೇ ಹೋಗಕೂಡದು. ಹಿಂದುಸ್ತಾನಕ್ಕೆ ಮರಳಿ ಬಂದ ಕೆಲ ತಿಂಗಳು ಜನಸಾಮಾನ್ಯರನ್ನು ಎಚ್ಚರಿಸುವುದರಲ್ಲಿ ಹೋದವು. ಮಾನವನ ಅಳತೆಗೆ ಮೀರುವಂತೆ ಶಕ್ತ್ಯುತ್ಸಾಹಗಳನ್ನು ವೆಚ್ಚ ಮಾಡಿದರು. ಅವರ ರೋಗ ಬಲವಾಗಿ ಮರುಕಳಿಸಿತು. ಆ ವರ್ಷದ ಬೇಸಗೆಯಲ್ಲಿ ವಿಶ್ರಾಂತಿಗಾಗಿ ಎರಡು ಸಲ ಗುಡ್ಡಗಾಡು ಸೇರಬೇಕಾಯಿತು — ಮೊದಲನೆಯ ಕೆಲವು ವಾರಗಳ ಮಟ್ಟಿಗೆ ದಾರ್ಜಿಲಿಂಗಕ್ಕೆ, ಎರಡನೆಯ ಸಲ ಮೂರು ತಿಂಗಳು ಆಲ್ಮೋರಾಕ್ಕೆ.

ಈ ಮಧ್ಯದಲ್ಲಿ ಒಂದು ಹೊಸ ಸಂಘವನ್ನು ಸ್ಥಾಪಿಸುವಷ್ಟು ಶಕ್ತಿ —ಉತ್ಸಾಹಗಳನ್ನು ಗಳಿಸಿದರು. ಆ ಸಂಘ — ರಾಮಕೃಷ್ಣ ಸೇವಾ ಸಂಘ — ಇಂದಿಗೂ ಹುರುಪಿನಿಂದ ಜೀವಿಸಿ ಕೆಲಸ ಮಾಡುತ್ತಿದೆ.

* * * * *

೧೮೯೭ರ ಮೇ ತಿಂಗಳ ಮೊದಲನೆಯ ದಿನ ಶ್ರೀರಾಮಕೃಷ್ಣರ ಎಲ್ಲ — ಸನ್ಯಸ್ತ ಮತ್ತು ಸಂಸಾರಿ — ಶಿಷ್ಯರು ಕಲಕತ್ತೆಯಲ್ಲಿ ತಮ್ಮ ಗುಂಪಿನ ಬಲರಾಮನೆಂಬವನ ಮನೆಯಲ್ಲಿ ಸೇರಿದರು. ಗುರು ವಿವೇಕಾನಂದರು ಮಾತನಾಡಿದರು. ಸುಸಂಘಟನೆಯಿಲ್ಲದೆ ಬಹಳ ಕಾಲ ಬಾಳುವಂಥ ಯಾವ ಸಂಸ್ಥೆಯನ್ನೂ ಸ್ಥಾಪಿಸಲು ಶಕ್ಯವಿಲ್ಲೆಂದು ಹೇಳಿದರು. ಪ್ರತಿಯೊಬ್ಬನಿಗೂ ಮತಾಧಿಕಾರವಿದ್ದ ಮತ್ತು ಬಹುಮತದ ಬಲದಿಂದ ನಿರ್ಣಯಕ್ಕೆ ಬರುವ ಪ್ರಜಾಸತ್ತಾತ್ಮಕ ಪದ್ಧತಿಯ ರೀತಿಯಲ್ಲಿ ಸಂಘವ್ಯವಸ್ಥೆಯನ್ನು ಹಿಂದುಸ್ತಾನದಂಥ ದೇಶದಲ್ಲಿ ಪ್ರಾರಂಭಿಸುವುದು ಜಾಣತನವಾಗಿದ್ದಿಲ್ಲ. ತಮ್ಮ ಪ್ರೀತಿವಿಷಯಗಳನ್ನು ಮತ್ತು ವಿಶಿಷ್ಟ ಗ್ರಹಿಕೆಗಳನ್ನು ಸಾರ್ವಜನಿಕ ಹಿತಕ್ಕೆ ಆಧೀನಗೊಳಿಸುವುದನ್ನು ಸಭಾಸದರೆಲ್ಲ ಕಲಿತರೆ ಅಂದು ಅದಕ್ಕೆ ಅನುಕೂಲ ಕಾಲ ಬರುವುದು.

ಸದ್ಯಕ್ಕೆ ಬೇಕು ಸರ್ವಾಧಿಕಾರಿ. ಇದಲ್ಲದೆ ಸರ್ವರ ಸಾಮಾನ್ಯ ಗುರು ಶ್ರೀರಾಮಕೃಷ್ಣರ ಸೇವಕರೆಂದೇ ಅವರು ಈಗ ಕಾರ್ಯಕ್ಕೆ ಕೈಹಾಕಿದರು.

ಅವರ ಹೇಳಿಕೆಯಂತೆ ಕೆಳಗಿನ ಸೂಚನೆಗಳು ಅಂಗೀಕೃತವಾದವು:

(೧) ಶ್ರೀರಾಮಕೃಷ್ಣಸೇವಾಸಂಘವೆಂಬ ಹೆಸರಿನ ಸಂಸ್ಥೆಯನ್ನು ಸ್ಥಾಪಿಸತಕ್ಕದ್ದು.

(೨) ಮಾನವಕುಲದ ಕಲ್ಯಾಣಕ್ಕಾಗಿ ಶ್ರೀರಾಮಕೃಷ್ಣರು ಪ್ರತಿಪಾದಿಸಿದ ಮತ್ತು ತಮ್ಮ ಜೀವನದಲ್ಲಿ ಆಚರಿಸಿದ ಸತ್ಯತತ್ವಗಳನ್ನು ಪ್ರತಿಪಾದಿಸುವುದು ಮತ್ತು ಅವನ್ನು ಆಚರಿಸಲು ಅವರವರ ಭೌತಿಕ, ಬೌದ್ಧಿಕ ಮತ್ತು ಆಧ್ಯಾತ್ಮಿಕ ಪ್ರಗತಿಗಾಗಿ ಇತರರಿಗೆ ನೆರವಾಗುವುದು ಸಂಘದ ಉದ್ದೇಶ.

(೩) ಎಲ್ಲ ಧರ್ಮಗಳು ಒಂದು ಅಮರ ಮತ್ತು ಶಾಶ್ವತ ಧರ್ಮದ ಹಲವು ರೂಪಗಳಾಗಿರುವುದರಿಂದ, ಎಲ್ಲ ಭಿನ್ನ ಧರ್ಮಗಳ ಅನುಯಾಯಿಗಳಲ್ಲಿ ಪರಸ್ಪರ ಬಂಧುತ್ವವನ್ನು ಸ್ಥಾಪಿಸಲು ಶ್ರೀರಾಮಕೃಷ್ಣರು ಪ್ರಾರಂಭಿಸಿದ ಚಟುವಟಿಕೆಗಳನ್ನು ಅದಕ್ಕೆ ಸಲ್ಲುವ ಭಾವದಿಂದ ಸಾಗಿಸುವುದು ಸಂಘದ ಕರ್ತವ್ಯ.

(೪) ಸಂಘದ ಕಾರ್ಯಕ್ರಮ: ೧. ಜನಸಾಮಾನ್ಯರ ಸಾಂಸಾರಿಕ ಮತ್ತು ಆಧ್ಯಾತ್ಮಿಕ ಕಲ್ಯಾಣಕ್ಕೆ ಅನುಕೂಲವಾಗುವಂಥ ಜ್ಞಾನವನ್ನು ಅಥವಾ ಶಾಸ್ತ್ರಗಳನ್ನು ಕಲಿಸಲು ಬಲ್ಲ ಜನರನ್ನು ತರಬೇತು ಮಾಡುವುದು. ೨. ಕಲೆಕೈಗಾರಿಕೆಗಳನ್ನು ಮುಂದುವರಿಸಿ ಅವಕ್ಕೆ ಉತ್ತೇಜನ ಕೊಡುವುದು. ೩. ಶ್ರೀರಾಮಕೃಷ್ಣರ ಬಾಳಿನಲ್ಲಿ ಅಭಿವ್ಯಕ್ತವಾದ ವೇದಾಂತಿಕ ಮತ್ತು ಇತರ ಧಾರ್ಮಿಕ ವಿಚಾರಗಳನ್ನು ಜನರಲ್ಲಿ ಹರಡುವುದು.

(೫) ಸಂಘದ ಎರಡು ಕಾರ್ಯ ಶಾಖೆಗಳು: ಒಂದು ಭಾರತೀಯ ; ಲೋಕಶಿಕ್ಷಣಕ್ಕಾಗಿ ಆಯುಷ್ಯವನ್ನೆಲ್ಲ ವಿನಿಯೋಗಿಸಲು ಸಿದ್ಧರಿರುವ

ಸನ್ಯಾಸಿಗಳನ್ನು ಮತ್ತು ಸಂಸಾರಿಗರನ್ನು ತರಬೇತು ಮಾಡುವುದಕ್ಕಾಗಿ ಹಿಂದುಸ್ತಾನದ ಬೇರೆ ಬೇರೆ ಭಾಗಗಳಲ್ಲಿ ಮಠಗಳನ್ನು ಮತ್ತು ಆಶ್ರಮಗಳನ್ನು ಸ್ಥಾಪಿಸುವ ಕೆಲಸ ಈ ಶಾಖೆಯದು.

ಇನ್ನೊಂದು ವಿದೇಶೀಯ: ವಿದೇಶಗಳಲ್ಲಿ ಆಧ್ಯಾತ್ಮಿಕ ಕೇಂದ್ರಗಳನ್ನು ಸ್ಥಾಪಿಸುವುದು ಮತ್ತು ಭಾರತೀಯ ಮತ್ತು ವಿದೇಶೀಯ ಕೇಂದ್ರಗಳಲ್ಲಿ ಪರಸ್ಪರ ಸಹಕಾರಿತೆ ಸಹಾನುಭೂತಿಗಳನ್ನು ಉಂಟು ಮಾಡಲು ಸಂಘದ ಸದಸ್ಯರನ್ನು ಕಳಿಸುವುದು ಈ ಶಾಖೆಯ ಕೆಲಸ.

(೬) ಸಂಘದ ಉದ್ದೇಶ ಮತ್ತು ಆದರ್ಶಗಳು ಕೇವಲ ಆಧ್ಯಾತ್ಮಿಕ ಮತ್ತು ಲೋಕಕಲ್ಯಾಣಕ್ಕೆ ಸಂಬಂಧಿಸಿದವುಗಳು; ಆದುದರಿಂದ ರಾಜಕಾರಣದ ಕೂಡ ಸಂಘವು ಸಂಬಂಧವನ್ನು ಬೆಳೆಯಿಸಲಾರದು.

ವಿವೇಕಾನಂದರು ಸ್ಥಾಪಿಸಿದ ಸಂಘದ ಸಾಮಾಜಿಕ, ಲೋಕಕಲ್ಯಾಣಕರ ಮತ್ತು ಲೋಕಸೇವಕ ಸ್ವರೂಪ ನಿಚ್ಚಳವಾಗಿ ಕಾಣುತ್ತದೆ. ಬಹಳ ಮಟ್ಟಿಗೆ ಹಲವು ಧರ್ಮಗಳು ಮಾಡುವಂತೆ, ಆ ಸಂಘ ಬುದ್ಧಿಗೆ ಮತ್ತು ಶ್ರದ್ಧೆಗೆ ವಿರೋಧವನ್ನು ಕಲ್ಪಿಸಲಿಲ್ಲ. ಇಂದಿನ ಬಾಳಿನ ಅವಸರ ಮತ್ತು ಅವಶ್ಯಕತೆಗಳನ್ನು ಅಲ್ಲಗಳೆಯಲಿಲ್ಲ. ಎಲ್ಲಕ್ಕೂ ಮುಂದಾಗಿ ಸಂಘವು ವಿಜ್ಞಾನದ ಜೊತೆಯಲ್ಲಿ ನಿಂತಿತು. ಭೌತಿಕ ಮತ್ತು ಆಧ್ಯಾತ್ಮಿಕ ಪ್ರಗತಿಯ ಕೂಡ ಸಹಕಾರಿತೆಯನ್ನು ಬೆಳೆಯಿಸಿ, ಕಲೆಕೈಗಾರಿಕೆಗಳಿಗೆ ಉತ್ತೇಜನ ಕೊಡುವುದೂ ಸಂಘದ ಕಾರ್ಯವಾಯಿತು. ಆದರೆ ಸಂಘದ ನಿಜವಾದ ಉದ್ದೇಶವೆಂದರೆ ಸಾಮಾನ್ಯ ಜನತೆಯ ಕಲ್ಯಾಣ. ಭಿನ್ನ ಧರ್ಮಗಳ ಬಂಧುತ್ವವನ್ನು ಸ್ಥಾಪಿಸುವುದೇ ತನ್ನ ಮತದ ಮೂಲತತ್ವವೆಂದು ಮತ್ತು ಭಿನ್ನ ಧರ್ಮಗಳ ಸಮರಸತೆಯೇ ನಿತ್ಯಧರ್ಮವೆಂದು ಸಂಘ ಸಾರಿತು. ಮಾನವ ಕುಲವನ್ನೆಲ್ಲ ತಮ್ಮ ನಲ್ಮೆಯ ತೆಕ್ಕೆಯಲ್ಲಿ ಅಪ್ಪಿಕೊಂಡ ಶ್ರೀರಾಮಕೃಷ್ಣರೇ—ಅವರ ವಿಶಾಲ ಹೃದಯವೇ—ಸಂಘದ ಸ್ಫೂರ್ತಿ.

'ಪರಮಹಂಸ"ವು ಹಾರಿ ಹೋಗಿತ್ತು. ಮೊದಲನೆಯ ಹಾರಿಕೆ

ಯಲ್ಲಿಯೇ ಅವರ ರೆಕ್ಕೆ ವಿಶ್ವವನ್ನೆಲ್ಲ ಆವರಿಸಿತ್ತು. ಸಂಘಸ್ಥಾಪನೆಯಾಗುತ್ತಲೆ ಮೊದಲನೆಯ ಕೆಲಸವೆಂದರೆ ಸಂಘದ ಮುಖ್ಯಾಧಿಕಾರಿಗಳನ್ನು ಆರಿಸುವುದು. ಸಂಘದ ಸಾಧಾರಣ ಅಧ್ಯಕ್ಷರಾದ ವಿವೇಕಾನಂದರು ಕಲಕತ್ತಾ ಕೇಂದ್ರಕ್ಕೆ ಬ್ರಹ್ಮಾನಂದರನ್ನು ಅಧ್ಯಕ್ಷರನ್ನಾಗಿ ಮತ್ತು ಯೋಗಾನಂದರನ್ನು ಉಪಾಧ್ಯಕ್ಷರನ್ನಾಗಿ ಆರಿಸಿದರು. ಪ್ರತಿ ರವಿವಾರ ಅವರು ಬಲರಾಮನ ಮನೆಯಲ್ಲಿ ಕೂಡುವುದು.

ಆ ಮೇಲೆ ತಡವಿಲ್ಲದೆ ದ್ವಿವಿಧ—ಜನಸೇವೆ ಮತ್ತು ವೇದಾಂತ ಬೋಧೆ—ಕಾರ್ಯವನ್ನು ಆರಂಭಿಸಿದರು.

* * * * *

ಸಂಘದ ಸನ್ಯಾಸಿಗಳು ವಿವೇಕಾನಂದರ ಆಜ್ಞೆಗಳನ್ನು ಪಾಲಿಸುತ್ತಿದ್ದರೇನೋ ನಿಜ. ಆದರೆ ಅವರ ಬೆನ್ನು ಹತ್ತುವುದು ಸನ್ಯಾಸಿಗಳಿಗೆ ಕಠಿಣವಾಗಹತ್ತಿತು. ಆಗಾಗ ಒಳ್ಳೇ ಕಡುತರ ವಾದವಿವಾದಗಳಾಗುತ್ತಿದ್ದವು. ಆದರೆ ಅವು ಯಾವಾಗಲೂ ಬಂಧುಭಾವದಿಂದ ಮಾಡಿದ ವಾದವಿವಾದ. ವಿವೇಕಾನಂದರ ಆವೇಶ ಮತ್ತು ವಿನೋದ ಯಾವಾಗಲೂ ಅಂಕೆಯಲ್ಲಿ ಇರುತ್ತಿರಲಿಲ್ಲ. ಮೇಲಾಗಿ ಅವರಲ್ಲಿ ಹುದುಗಿಕೊಂಡ ರೋಗದಿಂದ ಈ ಆವೇಶವಿನೋದಗಳು ತೀವ್ರವೇ ಉದ್ದೀಪಿತವಾಗುತ್ತಿದ್ದವು. ಅವರನ್ನು ವಿರೋಧಿಸುವವರಿಗೆ ಒಮ್ಮೊಮ್ಮೆ ಅವರ 'ನಖಾಘಾತ'ದ ಅನುಭವವಾಗುತ್ತಿತ್ತು. ಆದರೆ ಅದೆಲ್ಲ ದೇವಲೀಲೆಯೆಂದು ತಿಳಿದು ಎಲ್ಲರೂ ಸದ್ಬುದ್ಧಿಯಿಂದ ಸುಮ್ಮನೆ ಸಹಿಸುತ್ತಿದ್ದರು. ಪರಸ್ಪರ ಪ್ರೀತಿಯಲ್ಲಿ ಎಲ್ಲರಿಗೂ ದೃಢವಾದ ನಂಬಿಗೆಯಿತ್ತು. ಒಮ್ಮೊಮ್ಮೆ ಧ್ಯಾನಮಗ್ನ ಏಕಾಂತಜೀವನದ ಕಡೆಗೆ, ತಮ್ಮ ಬ್ರಹ್ಮಾನಂದಸಮ್ರಾಟರಾದ ರಾಮಕೃಷ್ಣರ ಕಡೆಗೆ ಸಂಘದ ಸನ್ಯಾಸಿಗಳ ಮನಸ್ಸು ಹರಿಯುತ್ತಿತ್ತು. ರಾಮಕೃಷ್ಣಸೇವಾಸಂಘವನ್ನು ಅವರು ನೈಷ್ಕರ್ಮ್ಯಯೋಗಯುಕ್ತ ಉಪಾಸನೆಯ ಶಿವಾಯತನವನ್ನಾಗಿ ಮಾರ್ಪಡಿಸುವ ಸವಿಗನಸನ್ನು ಕಟ್ಟುತ್ತಿದ್ದರು. ಆದರೆ ವಿವೇಕಾನಂದರು ಅವರ ಕನಸನ್ನು

ಒಡೆದು ಚೂರು ಚೂರು ಮಾಡಿದರು.

"ನೀವು ಕಲ್ಪಿಸಿದ ಬಂಧನಗಳಲ್ಲಿ ಶ್ರೀರಾಮಕೃಷ್ಣರನ್ನು ಬಂಧಿಸಲೆಳಸುವಿರಾ?........ ಅವರ ಶಿಷ್ಯರು ತಿಳಿದುದಕ್ಕಿಂತಲೂ ಶ್ರೀರಾಮಕೃಷ್ಣರು ಅತಿದೊಡ್ಡವರು. ಅವರು ಅನಂತ ರೀತಿಗಳಲ್ಲಿ ವಿಕಾಸಹೊಂದಲು ಸಮರ್ಥವಾದ ಅನಂತ ಆಧ್ಯಾತ್ಮಿಕ ವಿಚಾರಗಳ ಮೂರ್ತಿಗಳಾಗಿದ್ದರು. ಅವರ ಕೃಪಾದೃಷ್ಟಿಯು ಒಂದು ನೋಟ ಲಕ್ಷಾಂತರ ವಿವೇಕಾನಂದರನ್ನು ನಿರ್ಮಿಸಬಲ್ಲದು. ಪ್ರಪಂಚದಲ್ಲೆಲ್ಲ ಅವರ ವಿಚಾರಗಳನ್ನು ದಟ್ಟವಾಗಿ ಹರಡಿ ಬಿಡುವೆನು."

ಶ್ರೀರಾಮಕೃಷ್ಣರ ವ್ಯಕ್ತಿತ್ವ ವಿವೇಕಾನಂದರಿಗೆ ಪ್ರೀತಿಯ ವಸ್ತು. ಆ ವ್ಯಕ್ತಿಯ ಶಬ್ದ ಅದಕ್ಕೂ ಅಮೌಲ್ಯವಾದುದು. ಪೂಜೆಗಾಗಿ ಹೊಸದೊಂದು ಮೂರ್ತಿಯನ್ನು ನಿರ್ಮಿಸುವುದು ವಿವೇಕಾನಂದರಿಗೆ ಬೇಕಾಗಿದ್ದಿಲ್ಲ. ಆದರೆ ಪರಮಹಂಸರ ತತ್ವದ ಬೆಳಕನ್ನು ಮಾನವರ ಮೇಲೆ ಹರಡುವುದಿತ್ತು. ಆ ತತ್ವ ಮೊಟ್ಟಮೊದಲು ಕಾರ್ಯರೂಪದಲ್ಲಿ ಬರಬೇಕಾಗಿತ್ತು. "ಧರ್ಮ—ಅದು ನಿಜವಾದ ಧರ್ಮವಿದ್ದರೆ—ವ್ಯಾವಹಾರಿಕವಾಗಿರಲೇ ಬೇಕು." ಮಾನವರಲ್ಲಿ—ವಿಶೇಷತಃ ಹೀನದೀನರಲ್ಲಿ—ದೇವವನನ್ನು, ಶಿವನನ್ನು ಕಾಣುವುದೇ ಪರಮೋಚ್ಚ ಧರ್ಮವೆಂದು ಅವರ ದೃಷ್ಟಿ. ಒಬ್ಬ ಹಸಿದ ನಾರಾಯಣನನ್ನು, ಒಬ್ಬ ಕುಂಟ ನಾರಾಯಣನನ್ನು ಅಥವಾ ತನಗೆ ಅನುಕೂಲವಿದ್ದರೆ ಐದಾರು ನಾರಾಯಣರನ್ನು ಮನೆಗೆ ಕರೆದೊಯ್ದು ಉಣ್ಣಿಸಿ ತಿನ್ನಿಸಿ, ದೇವಾಲಯದಲ್ಲಿ ಶಿವನಿಗೆ ಅಥವಾ ವಿಷ್ಣುವಿಗೆ ಸಲ್ಲುವ ಪೂಜೆಯನ್ನು ಅಂಥವರಿಗೆ ಪ್ರತಿಯೊಬ್ಬನು ಪ್ರತಿದಿನ ಸಲ್ಲಿಸುವುದು ಅವರಿಗೆ ಮೆಚ್ಚಿಗೆಯಾಗುತ್ತಿತ್ತು.

ಒಂದಿಲ್ಲೊಂದು ರೂಪದಲ್ಲಿ ಭಾವನಾವಶತೆ ಒಳಸೇರಬಾರದೆಂದು ಅವರು ಬಲು ದಕ್ಷತೆಯನ್ನು ವಹಿಸುತ್ತಿದ್ದರು. ಆದರ ಯಾವತ್ತೂ ರೂಪಗಳ ವಿಷಯದಲ್ಲಿ ಅವರಿಗೆ ಜುಗುಪ್ಸೆ. ಬಂಗಾಲದಲ್ಲಿ ಭಾವನಾವಶತೆಯ ಹಾವಳಿ ಹೆಚ್ಚಿ ತೇಜಸ್ವಿತೆ ಉಸಿರುಗಟ್ಟಿ ಹೋಗಿತ್ತು. ಈ

ವಿಷಯದಲ್ಲಿ ವಿವೇಕಾನಂದರು ವಜ್ರಾದಪಿ ಕಠೋರರಾಗಿದ್ದರು. ತಮ್ಮ ಕಾರ್ಯವನ್ನು ಪ್ರಾರಂಭಿಸುವುದಕ್ಕಿಂತ ಮುಂಚೆ ಭಾವನಾವಶತೆಯ ದೌರ್ಬಲ್ಯವನ್ನು ತಮ್ಮಲ್ಲಿಂದ ಮತ್ತು ಉಳಿದವರಲ್ಲಿಂದ ಅವರಿಗೆ ಹೊರಗೆ ಹಾಕಬೇಕಾಗಿತ್ತು.

'ಕರ್ಮ, ಸೇವಾ, ಸಂಘಟನೆ ಎಂಬ ವಿಷಯದಲ್ಲಿ ರಾಮಕೃಷ್ಣರಿಗೆ ಎಂದೂ ಸೇರಿಕೆಯಾಗದ ಪಾಶ್ಚಿಮಾತ್ಯ ಕಲ್ಪನೆಗಳನ್ನು ರಾಮಕೃಷ್ಣರ ಆಧ್ಯಾತ್ಮಿಕ ತತ್ತ್ವೋಪದೇಶದಲ್ಲಿ ನೀವು ತಂದು ಸೇರಿಸಿದಿರಿ' ಎಂದು ವಿವೇಕಾನಂದರಿಗೆ ಅವರ ಒಬ್ಬ ಸನ್ಯಾಸಿಬಂಧು ಉಪಹಾಸ ಮಾಡಿದರು. ಅವರಿಗೆ ಮತ್ತು ಅವರಾಡಿದ ಮಾತಿನ ವಿಷಯದಲ್ಲಿ ಸಮ್ಮತಿಯನ್ನು ತೋರಿದ ಉಳಿದ ಶ್ರೋತೃಗಳಿಗೆ ವ್ಯಂಗ್ಯೋಕ್ತಿಯಿಂದ ವಿರೋಧಿಸಿ ವಿವೇಕಾನಂದರು ಮೊದಮೊದಲು ಕಠೋರ ವಿನೋದದ ಬಿರುನುಡಿಗಳನ್ನು ಆಡಿದರು:

"ನಿನಗೇನು ಗೊತ್ತಿದೆ? ಮೂಢನೇ,........ಕ ಎಂಬ ಮೊದಲನೆಯ ಅಕ್ಷರ ಕಲಿಯುವಾಗ ಕೃಷ್ಣನ ನೆನಪಾಗಿ ಕಂಬನಿತುಂಬಿ ಮುಂದೆ ಕಲಿಯಲು ಅಸಮರ್ಥನಾದ ಪ್ರಲ್ಹಾದನಂತೆ ನಿಮ್ಮ ಅಭ್ಯಾಸದ ಇತಿಶ್ರೀಯಾಯಿತು........ಭಾವನಾವಶ ಮೂರ್ಖರು ನೀವು! ಧರ್ಮವೆಂದರೇನು ಗೊತ್ತಿದೆಯೇ ನಿಮಗೆ? 'ದೇವಾ, ನಿನ್ನ ಮೂಗಿನ ಅಂದವೆಷ್ಟು? ನಿನ್ನ ಕಣ್ಣಿನ ಚೆಂದವೆಷ್ಟು?' ಎಂದು ಕೈಮುಗಿದು ಹುಚ್ಚುಚ್ಚಾರ ಭಜನೆ ಮಾಡುವುದೊಂದು ಗೊತ್ತಿದೆ ನಿಮಗೆ! ಇಂಥ ಭಜನೆಯಿಂದ ಮುಕ್ತಿ ಸಿಕ್ಕೇ ಹೋಯಿತು! ಕೊನೆಯ ಕ್ಷಣದಲ್ಲಿ ಬಂದು ಶ್ರೀರಾಮಕೃಷ್ಣರು ನಿಮ್ಮ ಕೈಹಿಡಿದು ನಿಮ್ಮನ್ನು ಸದೇಹ ಸ್ವರ್ಗಕ್ಕೆ ಒಯ್ಯುವರೆಂದು ನೀವು ತಿಳಿಯುವಿರಲ್ಲವೇ? ಅಭ್ಯಾಸ, ಲೋಕಬೋಧೆ ಲೋಕಸೇವೆ ಇವೆಲ್ಲ ಮಾಯೆಯಲ್ಲವೇ? ಅದೇನೋ ಯಾರಿಗೋ ರಾಮಕೃಷ್ಣರು ಹೇಳಿರುವರಂತೆ: 'ಮೊಟ್ಟಮೊದಲು ದೇವನನ್ನು ಅರಸು, ದೊರಕಿಸು. ಈ ಲೋಕದಲ್ಲಿ ನಾನು ಸತ್ಕೃತ್ಯಗಳನ್ನು ಮಾಡುವೆನೆಂಬುದು

ಒಣ ಜಂಭಗಾರಿಕೆ ! '........ಇಷ್ಟು ಸುಲಭವಾಗಿ ಕೈಗೆ ಸಿಕ್ಕುವನೇ ದೇವನು ? ಹೇಡಿಗಳ ಕೈಯಲ್ಲಿ ಆಟಿಗೆಯ ವಸ್ತುವಾಗುವಷ್ಟು ಮೂರ್ಖನೇ ದೇವನು ?"

ಆ ಮೇಲೆ ಒಮ್ಮೆಲೆ ಗಂಭೀರವಾಗಿ ಉಸುರಿದರು:

" ಶ್ರೀರಾಮಕೃಷ್ಣರನ್ನು ನನಗಿಂತಲೂ ಹೆಚ್ಚಾಗಿ ನೀವು ಅರಿತಿರುವಿರೆಂದು ತಿಳಿದಿರುವಿರಿ ! ಹೃದಯದ ಕೋಮಲ ಭಾವಗಳನ್ನೆಲ್ಲ ಕೊಲ್ಲುತ್ತ ಮರುಭೂಮಿಯ ಹಾದಿ ಹಿಡಿದು ಗಳಿಸಿದ ನೀರಸ ವಿದ್ವತ್ತೆಯೇ ಜ್ಞಾನವೆಂದು ನೀವು ತಿಳಿದಿರುವಿರಿ ! ನಿಮ್ಮ ಭಕ್ತಿಯೆಂದರೆ ಜನರನ್ನು ಷಂಢರನ್ನಾಗಿ ಮಾಡುವ ಮೂಢ ಭಾವನಾವೇಗ ! ರಾಮಕೃಷ್ಣರ ವಿಷಯದಲ್ಲಿ ನಿಮ್ಮ ಜ್ಞಾನವೆಂದರೆ ಅದೊಂದು ಮಹಾ ತಿಲಮಾತ್ರ ! ಇಂಥ ಜ್ಞಾನದಿಂದ ನೀವು ಲೋಕೋಪದೇಶಕ್ಕೆ ನಿಂತಿರುವುದು ! ಸಾಕು ತೆಗೆಯಿರಿ ! ನೀವು ತಿಳಿದ ನಿಮ್ಮ ಆ ರಾಮಕೃಷ್ಣ ಯಾರಿಗೆ ಬೇಕು ? ಯಾರಿಗೆ ಬೇಕು ನಿಮ್ಮ ಭಕ್ತಿ ?—ನಿಮ್ಮ ಮುಕ್ತಿ? ಯಾರಿಗೆ ಬೇಕು ನಿಮ್ಮ ಪುರಾಣ ? ಕತ್ತಲೆಯಲ್ಲಿ ದಾರಿಗಾಣದೆ ಬಳಲುವ ನನ್ನ ದೇಶಬಾಂಧವರನ್ನು ಬಡಿದೆಬ್ಬಿಸಿ ಕರ್ಮಯೋಗದ ತೇಜದಿಂದ ಅವರನ್ನು ಮನುಷ್ಯರನ್ನಾಗಿ ಮಾಡಲು ನಾನು ಸಾವಿರಾರು ನರಕಗಳ ಯಾತನೆಗಳನ್ನು ಸಹ ಸಹಿಸಲು ಸಂತೋಷದಿಂದ ಸಿದ್ಧನಿರುವೆನು !........ನಾನು ನಿಮ್ಮ ರಾಮಕೃಷ್ಣರ ಗುಲಾಮನಲ್ಲ ! ಅಥವಾ ಇನ್ನಾರ ಗುಲಾಮನೂ ಅಲ್ಲ ! ತನ್ನ ಭಕ್ತಿ–ಮುಕ್ತಿಗಳ ಪರಿವೆಯಿಲ್ಲದೆ ಯಾವನು ಅನ್ಯರ ಸೇವೆಗೆ ಅನ್ಯರ ಕಲ್ಯಾಣಕ್ಕೆ ಬದ್ಧಕಂಕಣನಾಗಿರುವನೋ ಅಂಥವನ ಅಡಿಯಾಳು ನಾನು !"

ನೋಡಿದವರೊಬ್ಬರು ಹೇಳುತ್ತಾರೆ: ವಿವೇಕಾನಂದರ ಮುಖ ಕೆಂಪಗೆ ಕೆಂಡದಂತಾಗಿತ್ತು ! ಕಣ್ಣು ಕಿಡಿಕಿಡಿಯಾಗಿದ್ದವು ! ಮಾತು ಗಂಟಲಲ್ಲಿ ಸಿಕ್ಕಿಕೊಂಡಂತಾಗಿತ್ತು ! ಸರ್ವಾಂಗವೂ ನಡುಗಹತ್ತಿತು ! ಒಮ್ಮಿಂದೊಮ್ಮೆ ಅವರು ತಮ್ಮ ಕೋಣೆಗೆ ಹೋದರು. ಮಿಕ್ಕವರೆಲ್ಲ

ಸಂಪೂರ್ಣ ಸ್ತಂಭಿತರಾದರು. ನಿಶ್ಶಬ್ದರಾದರು. ಕೆಲ ನಿಮಿಷಗಳ ನಂತರ ಒಬ್ಬಿಬ್ಬರು ಹೋಗಿ ಕೋಣೆಯಲ್ಲಿ ಇಣಿಕಿ ನೋಡಿದರು. ವಿವೇಕಾನಂದರು ಸಮಾಧಿಮಗ್ನರಾಗಿದ್ದರು. ಎಲ್ಲರೂ ನಿಶ್ಶಬ್ದರಾಗಿ ನಿಂತುಕೊಂಡರು........ಒಂದು ಘಂಟೆಯ ನಂತರ ವಿವೇಕಾನಂದರು ಮರಳಿ ಬಂದರು. ಬೀಸಿ ಹೋದ ಬಿರುಗಾಳಿಯ ಹೆಜ್ಜೆ ಇನ್ನೂ ಮುಖದ ಮೇಲೆ ಮೂಡಿದಂತಿದ್ದವು. ಆದರೂ ಶಾಂತಿಯನ್ನು ತಂದುಕೊಂಡಿದ್ದರು. ಅವರು ಮೆಲ್ಲನೆ ನುಡಿದರು:

"ಭಕ್ತಿಯ ನೆಲೆಯನ್ನು ಕಂಡವರ ಹೃದಯ ಬಲು ಮಿದುವಾಗಿ ಬಿಡುತ್ತದೆ. ಹೂವಿನ ಸೋಂಕನ್ನು ಸಹ ಸಹಿಸರು ಅವರು ! ಇತ್ತೀಚಿಗೆ ಒಂದು ಕಾದಂಬರಿಯನ್ನು ಕೂಡ ಓದಲಾರೆ ನಾನು, ಗೊತ್ತಿದೆಯೇ ನಿಮಗೆ ? ಶ್ರೀರಾಮಕೃಷ್ಣರ ವಿಷಯದಲ್ಲಿ ಬಹಳ ಹೊತ್ತು ಕಂಬನಿದುಂಬದೆ ಮಾತನಾಡಲಾರೆ, ಅಥವಾ ವಿಚಾರ ಮಾಡಲಾರೆ. ನನ್ನ ಒಳಗಿನಿಂದ ಉಕ್ಕಿ ಪುಟಿಯುತ್ತಿರುವ ಈ ಭಕ್ತಿಯನ್ನು ಕುಗ್ಗಿಸಬೇಕೆಂದು ಹೆಣಗುತ್ತಿರುವೆನು. ಜ್ಞಾನದ ಸಂಕಲೆಗಳಿಂದ ಗಟ್ಟಿಗಟ್ಟಿಯಾಗಿ ಕಟ್ಟಿಕೊಳ್ಳುತ್ತಿರುವೆನು. ನನ್ನ ಮಾತೃಭೂಮಿಗಾಗಿ ನಾನು ಮಾಡಬೇಕಾದ ಕಾರ್ಯ ಕೊನೆಗಂಡಿಲ್ಲ. ಪ್ರಪಂಚಕ್ಕಾಗಿ ನಾನು ತಂದ ಸಂದೇಶ ಇನ್ನೂ ಪೂರ್ಣವಾಗಿಲ್ಲ. ಆದುದರಿಂದ ಭಕ್ತಿಭಾವ ಉಕ್ಕಿ ಬಂದು ನನ್ನನ್ನು ಕೊಚ್ಚಿಕೊಂಡು ಹೋಗಲು ಹವಣಿಸಿದಾಗೆಲ್ಲ ಅದನ್ನು ಹಠಾತ್ತಾಗಿ ತಡೆಹಿಡಿದು ಜ್ಞಾನದ ಕಠೋರತೆಯಿಂದ ಬಿಗಿದುಕೊಂಡು ವಜ್ರದ ಸ್ಥೈರ್ಯವನ್ನು ತಂದುಕೊಳ್ಳುವೆನು. ಅಯ್ಯೋ! ನಾನು ಮಾಡಬೇಕಾದ ಕಾರ್ಯ ಇನ್ನೂ ಎಷ್ಟಿದೆ ? ನಾನು ಶ್ರೀರಾಮಕೃಷ್ಣರ ದಾಸ. ಅವರು ತಮ್ಮ ಕಾರ್ಯವನ್ನು ನನಗೆ ಒಪ್ಪಿಸಿ ಹೋದರು. ಅದು ಮುಗಿಯುವವರೆಗೆ ಅವರು ನನಗೆ ವಿಶ್ರಾಂತಿಯನ್ನೇ ಕೊಡುವುದಿಲ್ಲ !........ಆಃ ! ನನ್ನ ವಿಷಯದಲ್ಲಿ ಅದೆಂಥ ಪ್ರೇಮ ಅವರದು !"

ಭಾವನಾಪರವಶರಾಗಿ ಮತ್ತೆ ಅವಾಕ್ಕಾದರು ! ಮತ್ತೊಮ್ಮೆ

ಭಾವೋದ್ರೇಕವಾದೀತೆಂಬ ಅಂಜಿಕೆಯಿಂದ ಯೋಗಾನಂದರು ವಿಷಯವನ್ನು ಬದಲಿಸಿದರು.

ಅಂದಿನಿಂದ ಮುಂದೆಂದೂ ವಿವೇಕಾನಂದರ ಕಾರ್ಯಪದ್ಧತಿಗೆ ವಿರೋಧವುಂಟಾಗಲಿಲ್ಲ. ಅವರು ಮಾಡಲಾರದ ಯಾವ ವಿಚಾರವನ್ನು ಮಾಡಿ ಮಿಕ್ಕವರು ಅದನ್ನು ಮುಂದೆ ತಂದು ವಾದ ಹೂಡಬೇಕು? ಅವರ ತಳಮಳಿಸುವ ಹೃದಯದ ಆಳವನ್ನೆಲ್ಲ ಹೊಕ್ಕು ನೋಡಿದ್ದರು ಅವರ ಸಹಕಾರಿಗಳೆಲ್ಲ!

ಒಂದೊಂದು ಜೀವನಕರ್ತವ್ಯ ಕೊನೆಗಾಣಬೇಕಾದರೆ ಆ ಕರ್ತವ್ಯವನ್ನು ವಹಿಸಿದವನ ಪ್ರಕೃತಿ, ವಿಶ್ರಾಂತಿ, ಆರೋಗ್ಯ, ಆಕಾಂಕ್ಷೆ ಇವೆಲ್ಲವುಗಳ ಬಲಿದಾನವೇ ಆಗಬೇಕಾಗುತ್ತದೆ. ಈಶಸಾಕ್ಷಾತ್ಕಾರದ ಲಾಲಸೆ, ಸಂಸಾರದಿಂದ ಜಾರಿ ಧ್ಯಾನಜ್ಞಾನಗಳಿಗಾಗಿ ಸುತ್ತೆಲ್ಲ ಅಲೆಯುವ ಸನ್ಯಾಸಿಗಳಾಗಿ ಬಾಳಬೇಕೆಂಬ ಹವಣಿಕೆ, ಎಂದಿಗೂ ಪರಮಾತ್ಮನ ಸಾನಿಧ್ಯ ತಪ್ಪಬಾರದೆಂದು ಭಕ್ತಿಯೋಗಿಯಾಗಿ ಮುಕ್ತಾತ್ಮನ ಅಧ್ಯಾತ್ಮಲೋಕದಲ್ಲಿ ಚಿರಕಾಲ ವಿಹರಿಸುವ ಆಕಾಂಕ್ಷೆ—ತಮ್ಮ ದೇಶಬಾಂಧವರ ಇವೆಲ್ಲ ಸ್ವಭಾವಧರ್ಮಗಳು ವಿವೇಕಾನಂದರಲ್ಲೂ ಇದ್ದವು. ಅವರ ಹೃದಯದ ಆಳದಿಂದ ಹೊರಹೊಮ್ಮುವ ದಣುವಿನ ನಿಟ್ಟುಸಿರು ಸೂಕ್ಷ್ಮನಿರೀಕ್ಷಕರ ಕಣ್ಣಿಗೆ ಕಾಣದೆ ಇರುತ್ತಿರಲಿಲ್ಲ.

ಆದರೆ ಅವರು ತಮ್ಮ ಬಾಳಿನ ಹಾದಿಯನ್ನು ಆರಿಸಿದ್ದಿಲ್ಲ. ಅವರ ಬಾಳಿನ ಕರ್ತವ್ಯ ಅವರನ್ನು ಆರಿಸಿತ್ತು.

"ನನಗಾಗಿ ವಿಶ್ರಾಂತಿಯಿಲ್ಲ. 'ಕಾಲೀ' ಎಂದು ಶ್ರೀರಾಮಕೃಷ್ಣರು ಅನ್ನುತ್ತಿದ್ದುದು ಅವರು ಈ ಪ್ರಪಂಚವನ್ನು ತೊರೆದು ಹೋಗುವ ಮುಂಚೆ ನನ್ನ ದೇಹಾತ್ಮಗಳನ್ನು ಹಿಡಿದುಕೊಂಡಿತು. ಅದೇ ನನ್ನನ್ನು ದುಡಿ ದುಡಿ ದುಡಿಯೆಂದು ದುಡಿಯಹಚ್ಚಿದೆ. ಮತ್ತು ನನಗೆ ಬೇಕಾದುದರ ಕಡೆಗೆ ಹಣಿಕೆ ಹಾಕಲು ಸಹ ಅದು ನನ್ನನ್ನು ಬಿಡುವುದಿಲ್ಲ"

ಇತರರ ಕಲ್ಯಾಣಕ್ಕಾಗಿ ತಮ್ಮನ್ನು, ತಮ್ಮ ಆಕಾಂಕ್ಷೆಗಳನ್ನು

ತಮ್ಮ ಸುಖವನ್ನು ತಮ್ಮ ಆರೋಗ್ಯವನ್ನು ಸಹ ಅದು ಮರೆಯು ಹಚ್ಚಿತು. "ನನ್ನ ದೇಶದ ಕಲ್ಯಾಣಕ್ಕಾಗಿ ನರಕಯಾತನೆಗಳನ್ನು ಅನುಭವಿಸುವುದು ಸಹ ನಾನು ಅತ್ಯುಚ್ಚ ಗೌರವವೆಂದು ತಿಳಿಯುತ್ತೇನೆ!" ಎಂದರು ಅವರೊಮ್ಮೆ.

"ಎರಡು ವ್ರತಗಳು ಸನ್ಯಾಸಿಗಳಿಗೆ — ಸತ್ಯಶೋಧ ಮತ್ತು ಲೋಕಸೇವೆ. ಮುಕ್ತಿಯ ಲಾಲಸೆಯನ್ನಂತೂ ಸನ್ಯಾಸಿ ಮೊದಲು ಬಿಟ್ಟು ಬಿಡಬೇಕು" ಎಂದು ಒಮ್ಮೆ ಭಗಿನೀ ನಿವೇದಿತಾದೇವಿಗೆ ಬರೆದಿರುವರು.

ತಮ್ಮ ಲೋಕಸೇವಾಪಥಕದವರಲ್ಲಿ ಇದೇ ಶ್ರದ್ಧೆಯನ್ನು ಅವರಿಗೆ ನೆಲೆಗೊಳಿಸಬೇಕಾಗಿತ್ತು. ಅವರಲ್ಲಿ ಕರ್ಮದ ಉತ್ಸಾಹವನ್ನು ಅಂಕುರಿಸುವುದರಿಂದಲೇ ಇದು ಸಾಧ್ಯ. ಜಾಗಟೆ ಬಡಿದು ತಾಳ ಕುಟ್ಟಿ ಭಕ್ತಿಗೀತಗಳ ಭಾವನಾವೇಗದಿಂದ ಮತ್ತವಾಗಿ 'ಮಂದಾಗ್ನಿಪೀಡಿತ'ವಾದ ರಾಷ್ಟ್ರ ಅವರ ಕಾರ್ಯಕ್ಷೇತ್ರವಾಗಿತ್ತು. ಅದರಲ್ಲಿ ಕಾಠಿಣ್ಯವನ್ನು ಹುಟ್ಟಿಸಲು ಒಮ್ಮೊಮ್ಮೆ ಅವರು ಕಠೋರರಾಗುತ್ತಿದ್ದರು. ಪ್ರತಿಯೊಂದು ಕಾರ್ಯಕ್ಷೇತ್ರದಲ್ಲಿ ಶೌರ್ಯಸಂಜೀವನಿಯಾದ ಉದಾತ್ತ ಆತ್ಮಶಕ್ತಿಯನ್ನು ಎಚ್ಚರಿಸುವುದು ಅವರ ಇಚ್ಛೆ.

ಶಾರೀರಿಕ ಮತ್ತು ಆತ್ಮಿಕ ಪರಿಶ್ರಮ, ವೈಜ್ಞಾನಿಕ ಶೋಧ, ಮತ್ತು ಮಾನವ ಕುಲದ ಸೇವೆ — ಇವೆಲ್ಲವುಗಳಿಂದ ಅದನ್ನು ಸಾಧಿಸಬೇಕು. ವೇದಘೋಷದ ಗರ್ಜನೆಯಿಂದ ರಾಷ್ಟ್ರದ ಪುನರ್ಜನ್ಮವನ್ನು ಸಾಧಿಸುವ ರಾಮಬಾಣಶಕ್ತಿ ಅದರಲ್ಲಿ ಇದ್ದುದರಿಂದಲೇ ಅವರು ವೇದಾಂತತತ್ವಕ್ಕೆ ಅಷ್ಟು ಮಹತ್ವ ಕೊಟ್ಟಿದ್ದರು.

ಇತರರ ಹೃದಯವನ್ನೇ ಏಕೆ ಅವರು ತಮ್ಮ ಹೃದಯವನ್ನು ಸಹ ಆಘಾತಿಸುತ್ತಿದ್ದರು. ಹೃದಯವೆಂದರೆ ದಿವ್ಯ ಚೈತನ್ಯದ ಉಗಮವೆಂಬುದನ್ನು ಮಾತ್ರ ಅವರು ಮರೆತಿರಲಿಲ್ಲ ನಿಜ. ಮಾನವರ ಮುಂದಾಳಾದ ಅವರು ಹೃದಯವನ್ನು ಹಿಚುಕಿ ಹಾಕಲು ಎಳಸಲಿಲ್ಲ. ಆದರೆ ಅದಕ್ಕೆ ತಕ್ಕ ಸ್ಥಾನವನ್ನು ಕೊಡಬೇಕಾಗಿತ್ತು ಅವರಿಗೆ. ಎಲ್ಲಿ ಅದರ

ಏರಾಟ ಹೆಚ್ಚಾಗಿದ್ದಿತೋ ಅಲ್ಲಿ ಅದನ್ನು ಕುಗ್ಗಿಸುತ್ತಿದ್ದರು. ಎಲ್ಲಿ ಅದು ಕೀಳ್ದಿಸೆಯಲ್ಲಿದ್ದಿತೋ ಅಲ್ಲಿ ಅದನ್ನು ಮೇಲಕ್ಕೆ ಎತ್ತುತ್ತಿದ್ದರು. ಸಾಮಾನ್ಯ ಜನತೆಯ ದುಃಖ, ಅಜ್ಞಾನ ಮತ್ತು ಕಷ್ಟ ಇವೆಲ್ಲ ತಡೆದು ನಿಲ್ಲವು. ಲೋಕಸೇವೆ ಅತ್ಯಂತ ಅವಸರದ ಕೆಲಸ. ಅದಕ್ಕಾಗಿ ಆಂತರ ಶಕ್ತಿಗಳ ಸರಿಯಾದ ಸಮತೂಕ ಬೇಕಾಗಿತ್ತು.

"ನಿಮ್ಮ ಬಾಳಿನಲ್ಲಿ ಅತ್ಯುಚ್ಚ ಆದರ್ಶ ಅತಿಕುಶಲ ವ್ಯಾವಹಾರಿಕತೆ ಯೊಂದಿಗೆ ಹೊಂದಿಕೊಳ್ಳಬೇಕು. ಈ ಕ್ಷಣದಲ್ಲಿ ಗಾಢ ಧ್ಯಾನಮಗ್ನ ರಾಗಿ ಮರುಕ್ಷಣದಲ್ಲಿಯೇ ಹೊಲಗಳನ್ನು ಹರಗಲು ನೀವು ಸಿದ್ಧರಿರ ಬೇಕು. ಈಗ ಶಾಸ್ತ್ರಗಳ ಸಮಸ್ಯೆಗಳನ್ನು ಬಿಡಿಸಲು ಸಿದ್ಧರಿದ್ದವರು ಮರುಕ್ಷಣದಲ್ಲಿಯೇ ಹೊಲದಿಂದ ಬಂದ ಬೆಳೆಯನ್ನು ಸಂತೆಯಲ್ಲಿ ಮಾರಹೋಗಲು ಸಜ್ಜಾಗಬೇಕು. ಯಾವನು ಶಕ್ತಿಯಷ್ಟೇ ಸಮರ್ಥ ನಾಗಿಯೂ ಹೆಣ್ಣಿನ ಕರುಳಿನವನೂ ಆಗಿರುವನೋ ಅವನೇ ನಿಜವಾದ ಮನುಷ್ಯ."

ಸಮತೂಕ ಎಂದಿಗೂ ಸ್ಥಿರವಲ್ಲವೆಂಬುದು ನಿಜ. ಅದನ್ನು ಸಾಧಿ ಸುವುದು ಕಠಿಣ. ಸಾಧಿಸಿ ಸ್ಥಿರೀಕರಿಸುವುದು ಇನ್ನೂ ಕಠಿಣ. ಉದಾ ತ್ತತೆಯ ಕುದಿಯಿಂದ ಕೂಡಲೆ ಕಾಮನೆಯ ಬೂದಿಗೆ ಹೋಗುವ ಭಾವನಾಪ್ರಧಾನ ಜನಾಂಗದಲ್ಲಂತೂ ಇನ್ನೂ ಕಠಿಣ. ಶ್ರದ್ಧೆ, ವಿಜ್ಞಾನ ಕಲೆ, ವಿಜಯೋತ್ಸಾಹ, ಕರ್ಮಶೀಲತೆ ಮುಂತಾದ ಹತ್ತಾರು ಪರಸ್ಪರ ವಿರೋಧಿಯಾದ ಆವೇಶಗಳಿಂದ ಭಿನ್ನ ಭಿನ್ನ ರಾದ ವಿವೇಕಾನಂದರಿಗಂತೂ ಇನ್ನಷ್ಟೂ ಕಠಿಣವಾಗಿತ್ತು. ಪ್ರಖರ ಅದ್ವೈತಲಾಲಸೆ, ದುಃಖಿಯಾದ ಮಾನವಕುಲದ ವಿಷಯದಲ್ಲಿ ತಡೆಯಲಾರದ ಕರುಣೆ — ಈ ಎರಡೂ ಧ್ರುವಗಳ ನಡುವೆ ಅವರು ಸಮತೂಕವನ್ನು ಕೊನೆಯ ವರೆಗೆ ಸಾಧಿ ಸಿದುದು ಚಮತ್ಕಾರವೇ ಸರಿ. ಸಮತೂಕ ಶಕ್ಯವಿಲ್ಲದಾಗ, ಎರಡರಲ್ಲಿ ಒಂದನ್ನು ಆರಿಸಬೇಕಾಗಿ ಬಂದಾಗ, ಎರಡನೆಯದಕ್ಕೆ ಗೆಲುವಾ ಯಿತು. ಹೀನ ದೀನ ಕಂಗಾಲ ಮಾನವಕುಲದ ಕರುಣೆಗಾಗಿ ಅವರು

ಸರ್ವಸ್ವವನ್ನು ಹೋಮಿಸಿದರು. ಇದರಿಂದಲೇ ಅವರ ವಿಷಯದಲ್ಲಿ ನಮ್ಮ ಪ್ರೀತಿ, ನಮ್ಮ ಭಕ್ತಿ. "ನಿಮ್ಮ ಬುದ್ಧಿಗೂ ಹೃದಯಕ್ಕೂ ಕದನ ಮಸಗಿದಾಗ, ಹೃದಯದ ಬೆನ್ನು ಹತ್ತಿರಿ" ಎಂದವರು ಒಮ್ಮೆ ಸನ್ಯಾಸಿಗಳಿಗೆ ಹೇಳಿದರು.

ಗಿರೀಶನ ಸುಂದರ ಉದಾಹರಣೆ ನಿಜವಾಗಿ ಮನ ಸೆಳೆಯುವಂಥದು.

ಪ್ರಖ್ಯಾತ ವಂಗೀಯ ನಾಟಕಕಾರ ಗಿರೀಶನು ಜೀವನದ ವಿಲಾಸ ಸಾಗರದಲ್ಲಿ ಭೋಗಲಾಲಸನಾಗಿ ಈಸುತ್ತಿರುವಾಗ ಆ ಸರ್ವಂಸಹನಾದ ಚತುರ ಮೀನಗಾರನ ಬಲೆಯಲ್ಲಿ ಸಿಕ್ಕು ಅವನ ಶಿಷ್ಯನಾದನು. ಶ್ರೀರಾಮಕೃಷ್ಣರ ಶಿಷ್ಯೋತ್ತಮರಲ್ಲಿ ಒಬ್ಬನಾದನು. ಸಂಸಾರವನ್ನು ತ್ಯಜಿಸದೆಯೂ, ತನ್ನ ದಿನಗಳನ್ನೆಲ್ಲ ಭಕ್ತಿಯೋಗದ ಪ್ರೀತಿಶ್ರದ್ಧೆಗಳ ಸತತ ಸಮಾಧಿಯಲ್ಲಿ ಕಳೆಯುತ್ತಿದ್ದನು. ಆದರೆ ಅವನು ತನ್ನ ವಾಕ್ ಸ್ವಾತಂತ್ರ್ಯವನ್ನು ಮಾತ್ರ ಕಳೆದುಕೊಂಡಿದ್ದಿಲ್ಲ. ಶ್ರೀರಾಮಕೃಷ್ಣರ ಶಿಷ್ಯರೆಲ್ಲರೂ ತಮ್ಮ ಗುರುವನ್ನು ನೆನೆದು ಗಿರೀಶನಿಗೆ ಬಲು ಆದರ ವನ್ನು ತೋರಿಸುತ್ತಿದ್ದರು.

ಒಂದು ದಿನ ಒಬ್ಬ ಶಿಷ್ಯನ ಕೂಡ ವಿವೇಕಾನಂದರು ಪ್ರಪಂಚದ ಅತಿ ಸೂಕ್ಷ್ಮಾಂಶಗಳನ್ನು ಚರ್ಚಿಸುತ್ತಿರುವಾಗ ಗಿರೀಶನು ಒಳಗೆ ಬಂದನು. ವಿವೇಕಾನಂದರು ಅವನನ್ನು ನೋಡಿ ಉಪಹಾಸ ಮಾಡಿ ಅಂದರು:

"ಒಳ್ಳೇದು, ಗಿರೀಶ, ಈ ವಿಷಯಗಳನ್ನೆಲ್ಲ ವಿಚಾರ ಮಾಡದೆ ನಿನ್ನ ಆ 'ಕೃಷ್ಣ ವಿಷ್ಣು'ಗಳಲ್ಲಿ ದಿನಗಳೆದೆಯಲ್ಲವೇ ?"

ಗಿರೀಶನಂದನು! "ಒಳ್ಳೇದು, ನರೇನ್, ನಾನೊಂದು ಮಾತು ಕೇಳಲಾ? ವೇದವೇದಾಂತಗಳನ್ನು ಬೇಕಾದಷ್ಟು ಓದಿರುವೆಯಲ್ಲವೇ? ಹಾಗಾದರೆ ಹೇಳು: ದಿನದಿನವೂ ಕಣ್ಣಿಗೆ ಬೀಳುವ ಈ ಗೋಳಾಟ, ಈ ನರಳಾಟ, ಹಸಿದ ಬಾಯಿಯ ಕಂಗಾಲ ಕೂಗು, ಈ ಅಸಹ್ಯ ಪಾಪರಾಶಿ, ಮತ್ತು ಈ ದುಃಖದೌರಾತ್ಮ್ಯಗಳಿಗೆ ಏನಾದರೂ ಉಪಾ

ಯಗಳುಂಟೇ ನಿನ್ನ ವೇದವೇದಾಂತಗಳಲ್ಲಿ? ಹಿಂದೊಮ್ಮೆ ಐವತ್ತು ಜನಕ್ಕೆ ದಿನಾಲು ಅನ್ನ ಹಾಕಿದ ಆ ಮಹಾತಾಯಿ ತನ್ನ ಮನೆಯಲ್ಲಿ ಮಕ್ಕಳಿಗಾಗಿ ಕೂಳಿಲ್ಲದೆ ಈಗ ಮೂರು ದಿನಗಳಿಂದ ಬಳಲುತ್ತಿರುವಳು! ಬೇರೊಂದು ಮನೆಯಲ್ಲಿ ದುಷ್ಟರಿಂದ ಭ್ರಷ್ಟಳಾದ ಆ ಹೆಣ್ಣುಮಗಳು ಪ್ರಾಣಾಂತಿಕ ಅತ್ಯಾಚಾರಕ್ಕೆ ಗುರಿಯಾಗಿ ಸತ್ತುಹೋದಳು! ಮತ್ತೋರ್ವ ತರುಣನ ಬಾಲವಿಧವೆ ತನ್ನ ಪಾಪವನ್ನು ಮರೆಮಾಜಲು ನಾಚಿಕೆಯಿಂದ ಗರ್ಭಪಾತ ಮಾಡಿಕೊಂಡು ಸಾವಿಗೀಡಾದಳು! ನರೇನ್, ನಾನು ಕೇಳುವುದಿಷ್ಟೇ: ಈ ದುಃಖ ದೌರ್ಜನ್ಯಗಳಿಗೆ ನಿವಾರಣೋಪಾಯಗಳು ಉಂಟೇ ನಿನ್ನ ವೇದಗಳಲ್ಲಿ?........"

ಈ ರೀತಿ ಸಮಾಜದ ದುಃಖಕಲಂಕಗಳನ್ನು ಚಿತ್ರಿಸುತ್ತ ಕಟೂಕ್ತಿಗಳ ಕಶಾಘಾತದಿಂದ ಸೆಳೆಯುತ್ತ ಹೋದಂತೆ ವಿವೇಕಾನಂದರು ನೀರವ ಗಂಭೀರರಾದರು. ಭಾವವಿಲೀನರಾಗಿ ಕುಳಿತರು. ಲೋಕದ ನೋವು ಸಾವು ನೆನೆದು ಕಂಬನಿ ಉಕ್ಕಿದವು. ಭಾವೋದ್ರೇಕವನ್ನು ಮರೆಮಾಜಲು ಕೋಣೆಯಿಂದ ಕಾಲ್ತೆಗೆದರು. ಗಿರೀಶ ಶಿಷ್ಯನಿಗೆ ಅಂದನು:

"ನಿನ್ನ ಗುರುವಿನ ಹೃದಯ ಎಷ್ಟು ವಿಶಾಲವಿರುವುದು ಕಣ್ಮುಟ್ಟಿ ನೋಡಿದೆಯಲ್ಲವೇ ? ವಿದ್ವಾಂಸನೆಂದು ಮಹಾಪ್ರಚಂಡ ಪಂಡಿತನೆಂದು ಅವನನ್ನು ನಾನು ಮನ್ನಿಸುವುದಿಲ್ಲ. ಮಾನವನ ಕಷ್ಟಕ್ಕೆ ಕರಗಿ ಕಂಬನಿ ಸುರಿಸುವ ಆ ವಿಶಾಲ ಉದಾರ ಹೃದಯಕ್ಕಾಗಿ ಅವನನ್ನು ಮನ್ನಿಸುತ್ತೇನೆ. ಅದನ್ನೆಲ್ಲ ಕಿವಿಯಾರೆ ಕೇಳುತ್ತಲೆ, ನೋಡಿದೆಯಾ, ವೇದವೇದಾಂತಗಳೆಲ್ಲ ಅವನ ಕಣ್ಣೆದುರಿನಿಂದ ಮರೆಯಾದವು. ಕ್ಷಣದ ಹಿಂದೆ ಚರ್ಚಿಸುತ್ತಿದ್ದ ತತ್ವತರ್ಕಗಳೆಲ್ಲ ಬದಿಗೆ ಜಾರಿ ಹೋದವು. ಕ್ಷಣಮಾತ್ರದಲ್ಲಿ ಪ್ರೀತಿಕರುಣೆಗಳ ಹಾಲಿನ ಹೊನಲಿನಿಂದ ಅವನ ಹೃದಯವೆಲ್ಲ ಹೊರಸೂಸಹತ್ತಿತು. ನಿನ್ನ ಸ್ವಾಮಿ ಜ್ಞಾನಿಯಹುದು, ಪಂಡಿತನಹುದು, ಅಷ್ಟೆ ಈಶಪ್ರೇಮಿಯಹುದು. ಮಾನವಪ್ರೇಮಿಯೂ ಅಹುದು."

ವಿವೇಕಾನಂದರು ಮರಳಿ ಬಂದರು. ತಮ್ಮ ದೇಶಬಾಂಧವರ ದುಃಖದಾರಿದ್ರ್ಯಕ್ಕಾಗಿ ತಮ್ಮ ಎದೆ ಕುದಿಯುತ್ತಿರುವುದೆಂದೂ ಮತ್ತು ಸಣ್ಣದೊಂದು ದುಃಖನಿವಾರಕ ಸಂಸ್ಥೆಯನ್ನು ನಿರ್ಮಿಸಿ ಕೈಲಾದಷ್ಟು ಮಟ್ಟಿಗಾದರೂ ಸಮಾಜಸೇವೆಯನ್ನು ಮಾಡಬೇಕೆಂದೂ ತಮ್ಮ ಶಿಷ್ಯ ಸದಾನಂದರಿಗೆ ಹೇಳಿದರು. ಗಿರೀಶನತ್ತ ತಿರುಗಿ ಮತ್ತೆ ಅಂದರು:

"ಗಿರೀಶ್, ಲೋಕದ ದುಃಖವನ್ನು ದೂರೀಕರಿಸಲು, ಅಥವಾ ಅಷ್ಟೇಕೆ ಒಬ್ಬನದಾದರೂ ಕಿಂಚಿತ್ತಾದರೂ ಕಷ್ಟವನ್ನು ನಿವಾರಿಸಲು ಸಾವಿರಾರು ಜನ್ಮಜನ್ಮಾಂತರಗಳ ಬಾಧೆ ತಾಳಬೇಕಾದರೂ ಸಂಪೂರ್ಣ ಸಂತೋಷದಿಂದ ನಾನು ತಾಳುವೆನು !"

ಅವರ ಸದಯ ಹೃದಯದ ಉದಾರ ಭಾವೋದ್ರೇಕದ ಎದುರಿನಲ್ಲಿ ಬಂಧುಗಳೂ ಶಿಷ್ಯರೂ ಮಣಿದರು. ಅವರು ತೋರಿಸಿದ ವಿವಿಧ ರೀತಿಯ ಮಾನವ ಸೇವೆಯ ಸಲುವಾಗಿ ಸ್ವಾತ್ಮಾರ್ಪಣ ಮಾಡಿದರು. ೧೮೯೭ರ ಬೇಸಗೆಯಲ್ಲಿ ಬಂಗಾಲದ ಮುರ್ಶಿದಾಬಾದ ಜಿಲ್ಲೆಯಲ್ಲಿ ಬರಗಾಲದಿಂದ ಬಳಲುತ್ತಿದ್ದ ಸಾವಿರಾರು ಜನರಿಗೆ ವಿವೇಕಾನಂದರು ಕಳಿಸಿದ ಶಿಷ್ಯರಿಬ್ಬರ ಜೊತೆಯಲ್ಲಿ ಅಖಂಡಾನಂದರು ನಾಲ್ಕೈದು ತಿಂಗಳ ವರೆಗೆ ಅನ್ನ ಹಾಕಿ ಉಪಚರಿಸಿದರು. ತಾಯಿತಂದೆ ತೊರೆದ ದಿಕ್ಕಿಲ್ಲದ ಚಿಕ್ಕಮಕ್ಕಳನ್ನು ಕೂಡಿಸಿ ಮೋಹುಲಾ ಎಂಬಲ್ಲಿ ಒಂದು ಅನಾಥಾಶ್ರಮವನ್ನು ಸ್ಥಾಪಿಸಿದರು. ಅದನ್ನು ಮುಂದೆ ಸಾರಗಾಚಿಗೆ ಒಯ್ದರು. ಜಾತಿಮತಗಳೆನ್ನದೆ ಈ ಅನಾಥಮಕ್ಕಳ ಶಿಕ್ಷಣಕ್ಕಾಗಿ ಅಖಂಡಾನಂದರು ಭಗವಾನ್ ಬುದ್ಧನ ಶಾಂತಿಪ್ರೀತಿಗಳಿಂದ ಹೆಣಗಿದರು. ೧೮೯೯ರಲ್ಲಿ ಅವರಿಗೆ ನೇಕಾರಿಕೆ, ಹೊಲಿಗೆ, ಬಡಿಗತನ, ರೇಶಿಮೆ ತೆಗೆಯುವುದು, ಓದು, ಬರೆ, ಇಂಗ್ಲೀಷ್, ಗಣಿತ ಇವನ್ನೆಲ್ಲ ಕಲಿಸಿದರು.

ಅದೇ ೧೮೯೭ರಲ್ಲಿ ತ್ರಿಗುಣಾತೀತರು ದಿನಾಜಪುರದಲ್ಲಿ ದುರ್ಭಿಕ್ಷ ದುಃಖನಿವಾರಕಕೇಂದ್ರವನ್ನು ಸ್ಥಾಪಿಸಿದರು. ಎರಡು ತಿಂಗಳಲ್ಲಿ ಎಂಭ

ತ್ತಾರು ಹಳ್ಳಿಗಳಿಗೆ ನೆರವಾದರು. ಇಂಥ ಕೇಂದ್ರಗಳನ್ನು ದೇವಘರ್, ದಕ್ಷಿಣೇಶ್ವರ್, ಕಲಕತ್ತಾ ಮುಂತಾದ ಸ್ಥಳಗಳಲ್ಲಿಯೂ ಸ್ಥಾಪಿಸಿದರು.

ಮರುವರ್ಷ ೧೮೯೮ರಲ್ಲಿ ಕಲಕತ್ತೆಯಲ್ಲಿ ಪ್ಲೇಗಿನ ಹಾವಳಿ ಯಾದಾಗ ಇಡೀ ರಾಮಕೃಷ್ಣಸೇವಾಸಂಘವೆಲ್ಲ ಜನರ ನೆರವಿಗಾಗಿ ನಿಂತಿತು. ಹಿಮಾಲಯದಲ್ಲಿ ಆರೋಗ್ಯಸುಧಾರಣೆಗಾಗಿ ನಿಂತ ವಿವೇ ಕಾನಂದರು ಪ್ಲೇಗಿನ ಸಮಾಚಾರ ಕೇಳಿದ ಕ್ಷಣವೇ ಅವಸರದಿಂದ ಧಾವಿಸಿ ಬಂದು ಸೇವಾಕೇಂದ್ರದ ನೇತೃತ್ವವನ್ನು ವಹಿಸಿದರು. ಹಣದ ಕೊರತೆಯಾಯಿತು. ಹೊಸದೊಂದು ಮಠವನ್ನು ಕಟ್ಟಿಸುವುದಕ್ಕೆಂದು ಒಂದು ಬಯಲನ್ನು ಕೊಂಡುಕೊಳ್ಳುವುದರಲ್ಲಿ ಹತ್ತಿರಿದ್ದ ಹಣವೆಲ್ಲ ಹೋಗಿಬಿಟ್ಟಿತ್ತು. ವಿವೇಕಾನಂದರು ಕ್ಷಣಮಾತ್ರವೂ ಹಿಂದುಮುಂದೆ ನೋಡಲಿಲ್ಲ.

"ಪ್ರಸಂಗ ಬಂದರೆ ಅದನ್ನು ಮಾರಿ ಬಿಡಿರಿ. ನಾವು ಸನ್ಯಾಸಿ ಗಳು. ತಿರಿದು ತಂದುದನ್ನು ತಿಂದು ಮರದಡಿಯಲ್ಲಿ ಮಲಗಲು ಸಿದ್ಧ ರಿರಬೇಕು."

ವಿಸ್ತಾರವಾದ ಒಂದು ಬಯಲನ್ನು ಬಾಡಿಗೆಯಿಂದ ಹಿಡಿದು ಅಲ್ಲಿ ಆರೋಗ್ಯಬಿಡಾರಗಳನ್ನು ಏರ್ಪಡಿಸಿದರು. ಜನರಿಗೆ ಧೈರ್ಯ ಕೊಡಲು ಮತ್ತು ಕೆಲಸಗಾರರಿಗೆ ಹುರುಪು ಕೊಡಲು ವಿವೇಕಾನಂದರು ದರಿದ್ರವಾದ ಒಂದು ಓಣಿಯಲ್ಲಿ ಬಂದು ಇರಹತ್ತಿದರು. ಸ್ವಾಮಿ ಸದಾನಂದ, ಸ್ವಾಮಿ ಶಿವಾನಂದ, ಹಲವರು ಸಹಾಯಕರು ಮತ್ತು ಕೆಲ ದಿನಗಳ ಹಿಂದೆಯೇ ಯುರೋಪದಿಂದ ಬಂದ ಭಗಿನೀ ನಿವೇದಿತಾ— ಇವರಿಗೆ ಎಲ್ಲ ಕೆಲಸದ ವ್ಯವಸ್ಥೆಯನ್ನು ಒಪ್ಪಿಸಲಾಗಿತ್ತು. ದೀನದರಿದ್ರರು ವಾಸಮಾಡಿದ ಓಣಿಗಳನ್ನು ಕೃಮಿನಾಶಕ ತೈಲಗಳಿಂದ ತೊಳೆಯಿಸಿ ಹಸನು ಮಾಡಿದರು. ವಿದ್ಯಾರ್ಥಿಗಳ ಸಭೆಯನ್ನು ಕರೆದು (ಎಪ್ರಿಲ್ ೧೮೯೯) ಆ ಅನಾಹುತದ ಸಮಯದಲ್ಲಿ ಅವರ ಕರ್ತವ್ಯದ ಅರಿವನ್ನು ಮಾಡಿಕೊಟ್ಟರು. ವಿದ್ಯಾರ್ಥಿಗಳು ತಂಡತಂಡವಾಗಿ ಬಂದು ಬಡಜನರ

ವಸತಿಗಳನ್ನು ನಿರೀಕ್ಷಿಸಿ, ಅಲ್ಲಿಯ ಹೊಲಸನ್ನೆಲ್ಲ ತಾವೇ ಗುಡಿಸಿ ಜನರಿಗೆ ಆರೋಗ್ಯದಿಂದ ಇರಲು ಉಪದೇಶಿಸಿದರು. ಪ್ರತಿ ರವಿವಾರ ರಾಮಕೃಷ್ಣಸೇವಾಸಂಘಕ್ಕೆ ಬಂದು ಭಗಿನೀ ನಿವೇದಿತಾದೇವಿಗೆ ತಾವು ಮಾಡಿದ ಕೆಲಸವನ್ನು ಒಪ್ಪಿಸಿ ಮುಂದೆ ಮತ್ತೆ ಮಾಡುವುದನ್ನು ಕೇಳಿಕೊಂಡು ಹೋಗುತ್ತಿದ್ದರು.

ಶ್ರೀರಾಮಕೃಷ್ಣರ ಪುಣ್ಯತಿಥಿಯನ್ನು ಬಡವರ ಹಬ್ಬವನ್ನಾಗಿ ಮಾಡಿ ಅಂದು ಸಂಘದ ಎಲ್ಲ ಕೇಂದ್ರಗಳಲ್ಲಿ ಸಾವಿರಾರು ಬಡಜನರಿಗೆ ಅನ್ನಸಂತರ್ಪಣೆ ಮಾಡುವ ಪವಿತ್ರ ಸಂಪ್ರದಾಯವನ್ನು ಸಂಘದವರು ಕೈಕೊಂಡರು.

ಈ ರೀತಿ ಸಮಾಜದ ಎಲ್ಲ ವರ್ಗಗಳಲ್ಲಿ ಹೊಸದೊಂದು ಐಕ್ಯದ ಮತ್ತು ಬಾಂಧವ್ಯದ ಭಾವನೆ ಹುಟ್ಟಿ ಬೆಳೆಯಹತ್ತಿತು.

ಪರಸ್ಪರ ಸಹಾಯದ ಈ ಸಾಮಾಜಿಕ ಕಾರ್ಯಗಳ ಜೊತೆಯಲ್ಲಿ ವೇದಾಂತಪ್ರಚಾರವನ್ನು ಸಹ ಕೈಕೊಂಡಿದ್ದರು. ಭಾರತಕ್ಕೆ 'ಇಸ್ಲಾಮೀ ದೇಹ ಬೇಕು, ವೇದಾಂತದ ಹೃದಯ ಬೇಕು' ಎಂದು ವಿವೇಕಾನಂದರು ಅನ್ನುತ್ತಿದ್ದರು. ೧೮೯೭ರಲ್ಲಿ ಮದ್ರಾಸದಲ್ಲಿ ಮತ್ತು ಸುತ್ತುಮುತ್ತು ಉಪನ್ಯಾಸಗಳನ್ನು ಕೊಡುತ್ತಿದ್ದ ರಾಮಕೃಷ್ಣಾನಂದರು ಪಟ್ಟಣದ ಬೇರೆ ಬೇರೆ ಭಾಗಗಳಲ್ಲಿ ಹನ್ನೊಂದು ವರ್ಗಗಳನ್ನು ಪ್ರಾರಂಭಿಸಿದರು. ಇದರ ಜೊತೆಯಲ್ಲಿ ಬಡವರಿಗೆ ಬೇಸಾಯವನ್ನು ಕಲಿಸುವುದು, ಮತ್ತು ಉಪವಾಸ ಬಿದ್ದವರಿಗೆ ಅನ್ನ ಹಾಕಿ ಸಂರಕ್ಷಿಸುವುದು ಇದೆಲ್ಲ ಸಾಗಿಯೇ ಇತ್ತು. ಅದೇ ವರ್ಷದ ಮಧ್ಯದಲ್ಲಿ ಸಿಂಹಲದ್ವೀಪದಲ್ಲಿ ವೇದಾಂತ ಪ್ರಚಾರ ಮಾಡಲು ವಿವೇಕಾನಂದರು ಶಿವಾನಂದರನ್ನು ಕಳಿಸಿದರು. ಶಿಕ್ಷಣತತ್ಪರರು ಪಾವನಸ್ಫೂರ್ತಿಯಿಂದ ಹುರಿದುಂಬಿದರು.

"ಈ ಚಿಕ್ಕ ಬಾಲಿಕೆಯರು ನನ್ನ ಭಗವತೀ ಲೋಕಮಾತೆ· ನಾನು ಬೇರೆ ಪೂಜೆಯನ್ನರಿಯೆ" ಎಂದು ಬಾಲಿಕಾಶಾಲೆಯ ಓರ್ವ ಮುಖ್ಯಾಧ್ಯಾಪಿಕೆ ಅಂದುದನ್ನು ಕೇಳಿ ವಿವೇಕಾನಂದರಿಗೆ ಹರ್ಷ

ವಾಯಿತು.

ರಾಮಕೃಷ್ಣಸೇವಾಸಂಘವನ್ನು ಸ್ಥಾಪಿಸಿದ ಕೆಲ ದಿನಗಳಲ್ಲಿಯೇ ಎಲ್ಲ ಕಾರ್ಯಭಾರವನ್ನು ನಿಲ್ಲಿಸಿ ವಿವೇಕಾನಂದರು ತಮ್ಮ ಕಾಯಿಲೆಯ ಉಪಚಾರಕ್ಕಾಗಿ ಹಲವು ವಾರ ಆಲ್ಮೋರಾಕ್ಕೆ ಹೋಗಬೇಕಾಯಿತು. ಆದಾಗ್ಯೂ ಅವರು ಬರೆದಿರುವರು:

"ಆಂದೋಲನ ಆರಂಭವಾಗಿದೆ. ಅದು ಇನ್ನೆಂದಿಗೂ ನಿಲ್ಲದು" (೯ನೇ ಜುಲೈ ೧೮೯೭).

"ಒಂದೇ ಒಂದು ಕಲ್ಪನೆ ನನ್ನ ತಲೆಯಲ್ಲಿ ಸುಳಿಯುತ್ತಿತ್ತು—ಭಾರತೀಯ ಜನತೆಯ ಉದ್ಧಾರಕ್ಕಾಗಿ ಒಂದು ಸಂಘಟನೆ. ಇದರಲ್ಲಿ ಕೆಲಮಟ್ಟಿಗೆ ಯಶಸ್ಸು ಬಂದಿದೆ. ಕಾಲರಾದಿಂದ ಬಳಲುವ ಹೊಲೆಯನ ಹರಕುಚಾಪೆಯ ಹತ್ತರ ಕುಳಿತು ಉಪಚರಿಸುವುದು, ಉಪವಾಸದಿಂದ ಚಡಪಡಿಸುವ ಚಂಡಾಲನಿಗೆ ಅನ್ನ ಹಾಕುವುದು—ಹೀಗೆ ದುರ್ಭಿಕ್ಷ, ದುರ್ದೆಸೆ, ರೋಗರುಜಿನಗಳ ಮಧ್ಯದಲ್ಲಿ ನನ್ನ ಹುಡುಗರು ಕೆಲಸ ಮಾಡುವುದನ್ನು ನೋಡಿದೆಯಾದರೆ ನಿನಗೆ ಅದೆಂಥ ಹರ್ಷವಾಗುವುದು ? ನನಗೂ ಅವರೆಲ್ಲರಿಗೂ ಭಗವಂತನು ನೆರವಾಗಿಹನು.... ಆ ಪ್ರಿಯತಮ ನನ್ನ ಜೊತೆಗಿರುವನು. ಅಮೇರಿಕೆಯಲ್ಲಿ ಇಂಗ್ಲಂಡದಲ್ಲಿ ಹಿಂದುಸ್ತಾನದಲ್ಲಿ ಅತ್ತಿಂದಿತ್ತ ಹೆಸರುದೆಸೆಗಳಿಲ್ಲದೆ ಅಲೆಯುತ್ತಿರುವಾಗ ಎಲ್ಲೆಲ್ಲಿಯೂ ಯಾವಾಗಲೂ ಅವನೇ ನನ್ನ ಜೊತೆಗಾರ!........ ನನ್ನ ಕಾರ್ಯ ಕೊನೆಗಂಡಂತೆ ಕಾಣುತ್ತದೆ........ಬಹಳಾದರೆ ನಾನು ಮೂರು ನಾಲ್ಕು ವರ್ಷ ಬಾಳಬಹುದು. ನನ್ನ ಮುಕ್ತಿಯ ಆಶೆ ನನಗೆ ಉಳಿದಿಲ್ಲ. ಐಹಿಕ ಭೋಗ ನನಗೆ ಎಂದಿಗೂ ಬೇಕಿದ್ದಿಲ್ಲ. ಲೋಕಕಲ್ಯಾಣದ ನನ್ನ ಸಂಘಟನೆ ಒಳ್ಳೇ ಬಲಿಷ್ಠವಾದರೆ ಸಾಕು, ಕಾರ್ಯಕ್ಷಮವಾದರೆ ಸಾಕು. ಹಿಂದುಸ್ತಾನದಲ್ಲಾದರೂ ಆಗಲಿ ಮಾನವ ಕಲ್ಯಾಣಕ್ಕಾಗಿ ನಾನು ಸಜ್ಜುಗೊಳಿಸಿದ ಸಂಘಟನೆ ಯಾರಿಗೂ ಹಣಿಯದಂತೆ ಸಾಗಿದರೆ ಸಾಕು. ಮುಂದಿನ ಚಿಂತೆಯಿಲ್ಲದೆ ಬಿದ್ದು ಹೋಗುವೆ.

ಭೂತಮಾತ್ರವೆಲ್ಲ ನನ್ನ ದೇವರು. ಆ ಏಕಮಾತ್ರ ದೇವರಲ್ಲಿಯೇ ನನ್ನ ನಂಬಿಗೆ. ಆ ದೇವರನ್ನೇ ಪೂಜಿಸಲು ನನಗೆ ಮತ್ತೆ ಜನ್ಮ ಬರಲಿ! ಜನ್ಮಜನ್ಮಾಂತರಗಳ ಸಾವಿರಾರು ಯಾತನೆ ಬರಲಿ! ಇದೇ ನನ್ನ ಹಂಬಲ!"

ಕಾಯಿಲೆ ಕೊಂಚ ಗುಣವಾದರೆ ಸಾಕು ಅವರು ಮೊದಲಿನ ಹತ್ತರಷ್ಟು ಕೆಲಸವನ್ನು ಕೈಕೊಂಡರೇ! ೧೮೯೭ರ ಅಗಸ್ಟದಿಂದ ಡಿಸೆಂಬರ್‌ವರೆಗೆ ಉತ್ತರ ಹಿಂದುಸ್ತಾನದಲ್ಲಿ ಪಂಜಾಬ ಕಾಶ್ಮೀರಗಳ ವರೆಗೆ ಬಿರುಗಾಳಿಯಂತೆ ಬೀಸಿ, ಹೋದಹೋದಲ್ಲೆಲ್ಲ ತಮ್ಮ ಕಾರ್ಯದ ಬೀಜ ಬಿತ್ತಿದರು. ಕಾಶ್ಮೀರದಲ್ಲಿ ದೊಡ್ಡದೊಂದು ಅದ್ವೈತಾಶ್ರಮವನ್ನು ಸ್ಥಾಪಿಸುವ ವಿಷಯವನ್ನು ಮಹಾರಾಜರ ಕೂಡ ಚರ್ಚಿಸಿದರು. ಲಾಹೋರ ಕಾಲೇಜ್ ವಿದ್ಯಾರ್ಥಿಗಳನ್ನು ಕರೆದು, ಮಾನವನಲ್ಲಿಯ ಶಕ್ತಿ ಮತ್ತು ಶ್ರದ್ಧೆ ಭಗವಂತನಲ್ಲಿಯ ಶ್ರದ್ಧೆಯ ಪೂರ್ವಸಿದ್ಧತೆಯೆಂದು ಅವರಿಗೆ ಉಪದೇಶ ಮಾಡಿದರು. ಜನತೆಯ ನೆರವಿಗಾಗಿ, ಆರೋಗ್ಯ ರಕ್ಷಣ ಮತ್ತು ಶಿಕ್ಷಣಗಳಿಗಾಗಿ ಜಾತಿಧರ್ಮಾತೀತವಾದ ವಿದ್ಯಾರ್ಥಿ ಮಂಡಲವನ್ನು ಸ್ಥಾಪಿಸಿದರು. ಪ್ರತಿಯೊಬ್ಬ ಜೀವನಲ್ಲಿಯ ಶಿವನು ಹೊರಗೆ ಬರುವಂತೆ ಮಾಡಿ, ಪ್ರತಿಯೊಬ್ಬನ ವ್ಯಕ್ತಿತ್ವದ ಶಕ್ತಿಯ ಪುನರ್ರಚನೆಯ ಪ್ರಯತ್ನದಲ್ಲಿ ಅವರು ಹೋದಹೋದಲ್ಲೆಲ್ಲ ಎಂದೂ ಬೇಸರಿಯುತ್ತಿದ್ದಿಲ್ಲ. ಶ್ರದ್ಧೆಯನ್ನು ಯಾವಾಗಲೂ ಕಾರ್ಯದ ಒರೆಗಲ್ಲಿಗೆ ಹಚ್ಚುತ್ತಿದ್ದರು. ಜಾತಿಜಾತಿಗಳಲ್ಲಿ ಒಳಜಾತಿಗಳಲ್ಲಿ ವಿವಾಹಸಂಬಂಧಗಳು ಬೆಳೆದು ಜನರಲ್ಲಿ ಪರಸ್ಪರ ಸಾಮೀಪ್ಯಸಹಾನುಭೂತಿಗಳು ನೆಲೆಗೊಳ್ಳಬೇಕು. ಅಸ್ಪೃಷ್ಟರ ಪರಿಸ್ಥಿತಿ ಸುಧಾರಿಸಬೇಕು. ಅವಿವಾಹಿತ ಸ್ತ್ರೀಯರ ಮತ್ತು ಹಿಂದೂ ವಿಧವೆಯರ ಸಮಸ್ಯೆಯನ್ನು ಬಿಡಿಸಬೇಕು. ಜಾತ್ಯಂಧತೆಯನ್ನು, ನಿರ್ಜೀವ ನೀರಸ ಸಂಪ್ರದಾಯಗಳನ್ನು ಮತ್ತು 'ಮುಟ್ಟೇ ಮುಟ್ಟೇ' ಎಂಬ ಮೂಢ ಮಡಿವಂತಿಕೆಯನ್ನು ಸಿಕ್ಕಸಿಕ್ಕಲ್ಲಿ ಮುಗ್ಗಿಸಬೇಕು. ಹೀಗೆ ಸಮಾಜದಲ್ಲಿಯ ಅನ್ಯಾಯಗಳನ್ನು ಬೈಲಿಗೆ

ಳಿದು ಬಗ್ಗಿಸಬೇಕೆಂದು ಅವರು ಹೆಣಗುತ್ತಿದ್ದರು. ಇದರ ಜೊತೆಯಲ್ಲಿಯೇ ಸಂಸ್ಕೃತದ ನಿಜವಾದ ಜ್ಞಾನವನ್ನು ಪಸರಿಸಿ ಹಿಂದೂ ಬುದ್ಧಿ ವೈಭವದ ಪುನರ್ರಚನೆಯನ್ನು ಮಾಡಿ ಅದರಲ್ಲಿ ಪಾಶ್ಚಿಮಾತ್ಯ ವಿಜ್ಞಾನವನ್ನು ಹೆಣೆಯಬೇಕು. ಮತ್ತು ಈ ಉಪಾಯದಿಂದ ಹಿಂದುಸ್ತಾನದ ವಿದ್ಯಾಪೀಠಗಳಲ್ಲಿ ಪದವೀಧರರ ಮತ್ತು ಅಧಿಕಾರಿಗಳ ನಿರ್ಮಾಣವಾಗುವುದು ನಿಂತು ಮನುಷ್ಯರ ನಿರ್ಮಾಣವಾಗಬೇಕು ಎಂದು ಅವರು ಹೋರಾಡುತ್ತಿದ್ದರು. ಈ ಎರಡೂ ಕಾರ್ಯಗಳು ಪರಸ್ಪರ ಪೂರಕವಾಗಿದ್ದವು.

ಆಗ ಇಂಗ್ಲಂಡಿನ ವಿರುದ್ಧ ಎದ್ದು ನಿಂತು ರಾಜಕೀಯ ಸ್ವಾತಂತ್ರ್ಯ—ಹಿಂದಿ ಸ್ವರಾಜ್ಯ—ವನ್ನು ಬೇಡುವ ವಿಚಾರ ಅಷ್ಟು ಬಲಪಟ್ಟಿದ್ದಿಲ್ಲ. ಆದರೆ ಭಾರತದ ಸ್ವಾತಂತ್ರ್ಯ ಸ್ವಾಮಿಯವರಿಗೆ ಬೇಕಾದ ವಿಷಯವಾಗಿತ್ತು. ತಮ್ಮ ಕಾರ್ಯಕ್ಕೆ ಪ್ರಪಂಚದ ಸಹಕಾರದಂತೆ ಬ್ರಿಟಿಶರ ಸಹಕಾರವೂ ಕೂಡ ಬೇಕೆಂಬ ಭಾವನೆ ವಿವೇಕಾನಂದರಲ್ಲಿ ಇತ್ತು. ನಿಜವಾಗಿಯೂ ಅವರ ಕಾರ್ಯಕ್ಕೆ ಇಂಗ್ಲಂಡ ನೆರವಾಗಿತ್ತು. ರಾಜಾಶ್ರಯ ದೊರೆಯದಿದ್ದರೂ ಲಂಡನ್ ಮತ್ತು ನ್ಯೂಯಾರ್ಕದ ಅವರ ಆಂಗ್ಲೋಸ್ಯಾಕ್ಸನ್ ಶಿಷ್ಯರು ತಮ್ಮ ಭಕ್ತಿಯನ್ನು ಸ್ವಾಮಿಯವರಿಗೆ ಅರ್ಪಿಸಿದರು. ಅವರು ಅರ್ಪಿಸಿದ ನಿಧಿಯಿಂದ ಭೂಮಿಸೀಮೆಯನ್ನು ಕೊಂಡು ಬೇಲೂರಲ್ಲಿಯ ಆ ದೊಡ್ಡ ಮಠವನ್ನು ಕಟ್ಟಲಾಯಿತು.

ರಾಮಕೃಷ್ಣಮಠದ ಹೊಸ ಕಾರ್ಯದ ಏರ್ಪಾಟಿಗಾಗಿ ಮತ್ತು ಮುಂದೆ ಸಂಘದ ಬೌದ್ಧಿಕ ಮುಖಪತ್ರಗಳಾದ ಮತ್ತು ಹಿಂದುಸ್ತಾನದ ಶಿಕ್ಷಣಕ್ಕೆ ಸಹಾಯಕಾರಿಗಳಾದ ಪತ್ರಿಕೆಗಳನ್ನು ಪ್ರಾರಂಭಿಸಲು ೧೮೯೮ನೆಯ ಹೊಸ ವರ್ಷ ಮೀಸಲಾಯಿತು. ಆದರೆ ೧೮೯೮ನೇ ವರ್ಷದ ಮುಖ್ಯ ಮಹತ್ವದ ಕಾರ್ಯವೆಂದರೆ ವಿವೇಕಾನಂದರು ತಮ್ಮ ಪಾಶ್ಚಾತ್ಯ ಶಿಷ್ಯರನ್ನು ತರಬೇತು ಮಾಡಿದರು.

ವಿವೇಕಾನಂದರ ಕರೆ ಕೇಳಿ ಅವರು ಬಂದಿದ್ದರು — ಕುಮಾರಿ ಮಾರ್ಗರೆಟ್ ನೋಬಲ್, ಜಾನೇವಾರಿಯ ಕೊನೆಯಲ್ಲಿ—ಕುಮಾರಿ ಮುಲ್ಲರಳ ಸಹಕಾರಿತೆಯಿಂದ ಭಾರತೀಯ ಸ್ತ್ರೀಯರ ಶಿಕ್ಷಣಕ್ಕಾಗಿ ಅನುಕರಣೀಯ ಸಂಸ್ಥೆಗಳನ್ನು ಸ್ಥಾಪಿಸುವುದಕ್ಕಾಗಿ — ಶ್ರೀಮತಿ ಓಲೆ ಬುಲ್ ಮತ್ತು ಕುಮಾರಿ ಜೊಸೆಫಿನ್ ಮಾಕ್ಲಿಯೊಡ್ ಫೆಬ್ರುವರಿಯಲ್ಲಿ. ಮಾರ್ಚ ತಿಂಗಳಲ್ಲಿ ಮಾರ್ಗರೆಟ್ ಬ್ರಹ್ಮಚರ್ಯವ್ರತವನ್ನು ಸ್ವೀಕರಿಸಿ 'ನಿವೇದಿತಾ' ಎಂಬ ದೀಕ್ಷಾನಾಮ ಧರಿಸಿದಳು. 'ಹಿಂದುಸ್ತಾನಕ್ಕೆ ಇಂಗ್ಲಂಡ್ ಕೊಟ್ಟ ಕಾಣಿಕೆ' ಎಂದು ಅವಳ ಪರಿಚಯವನ್ನು ವಿವೇಕಾನಂದರು ಕಲಕತ್ತೆಗೆ ಮಾಡಿಕೊಟ್ಟರು. ಅವಳ ದೇಶದ ಸ್ಮೃತಿ, ಸಂಪ್ರದಾಯ ಮತ್ತು ಪೂರ್ವಗ್ರಹಗಳನ್ನು ಅವಳ ಮನಸಿನಿಂದ ಬೇರುಸಹಿತ ತೊಡೆದು ಹಾಕುವುದಕ್ಕಾಗಿ ವಿವೇಕಾನಂದರು ಅವಳನ್ನು ಕೆಲ ಶಿಷ್ಯರೊಂದಿಗೆ ಇತಿಹಾಸಪ್ರಸಿದ್ಧವಾದ ಸಂಚಾರಕ್ಕಾಗಿ ಕರೆದೊಯ್ದರು.

ಆದರೆ ತಮ್ಮ ಸಂಗಡಿಗರ ಆತ್ಮಗಳನ್ನು ತಮ್ಮ ಜನಾಂಗದ ಧಾರ್ಮಿಕ ಮಹಾಸಾಗರದಲ್ಲಿ ಅದ್ದಿ ತೆಗೆಯುವಾಗ ವಿವೇಕಾನಂದರು ತಾವು ಸ್ವತಃ ಸಹ ಅವರ ಕೂಡ ಮುಳುಗಿ ಹೋದರು. ನಾಮರೂಪಾತೀತನಾದ ಕೇವಲ ಪರಾತ್ಪರನನ್ನು ಉಪಾಸಿಸುವ ಮಹಾ ಅದ್ವೈತಿಗಳಾದ ಸ್ವಾಮಿಯವರು ಪರಶಿವ ಮತ್ತು ಲೋಕಮಾತೆ ಈ ಪೌರಾಣಿಕ ದೇವದಂಪತಿಗಳ ವಿಷಯದಲ್ಲಿ ಭಕ್ತಿನಿರ್ಭರರಾಗಿ ಹೋದರು. ನಿರಾಕಾರ ಶಿವನ ಜೊತೆಯಲ್ಲಿ ದೇವನ ಎಲ್ಲ ಆಕಾರಗಳು ಶ್ರೀರಾಮಕೃಷ್ಣರ ಹೃದಯದಲ್ಲಿ ನೆಲಸಿದ್ದವು. ಅವರು ಹಲವು ವರ್ಷ ಭಗವತೀ ಲೋಕಮಾತೆಯ ಉಪಾಸನೆಯಲ್ಲಿ ಪರಮಾನಂದಲೀಲಾಲೋಲರಾಗಿದ್ದರು. ಅವರ ಹಾದಿಯನ್ನೇ ವಿವೇಕಾನಂದರು ತುಳಿದರು. ಆದರೆ ಕೇವಲಜ್ಞಾನವಾದ ನಂತರ ವಿವೇಕಾನಂದರು ಈ ರೀತಿ ಸಗುಣೋಪಾಸನೆಯಲ್ಲಿ ಮೈಮರೆತರು. ಶ್ರೀರಾಮಕೃಷ್ಣರು ದೇವದೇವತೆಗಳ ಉಪಾಸನೆಯನ್ನು ಮಧುರ ಆನಂದದ ವಾತಾ

ವರಣದಲ್ಲಿ ಮಾಡಿದರು. ಆದರೆ ವಿವೇಕಾನಂದರು ಮಾಡಿದ ದೇವ ದೇವತೆಗಳ ಉಪಾಸನೆ — ವಿಶೇಷತಃ ಕಾಲೀಮಾತೆಯ ಉಪಾಸನೆ— ಪ್ರಕೃತಿಯ ರುದ್ರರಮಣೀಯ ಭಕ್ತಿವಲಯದಲ್ಲಿ ಬೆಳಗಿತು.

ಸೇವ್ಹಿಯರ್ಸ್ ದಂಪತಿಗಳು ಆಲ್ಮೋರಾದಲ್ಲಿ ನಿಂತರು. ಅಲ್ಲಿ ಇನ್ನು ಮೇಲೆ ಅದ್ವೈತಾಶ್ರಮವನ್ನು ಕಟ್ಟುವವರಿದ್ದರು. ಅಲ್ಲಿ ಕೆಲ ದಿನ ನಿಂತು ವಿವೇಕಾನಂದರು ತಮ್ಮ ಜೊತೆಗಾರರೊಂದಿಗೆ ಶ್ರೀನಗರದ ದರಿಯಲ್ಲಿ ನದಿಯ ಜೊತೆಯಲ್ಲಿ ಮೂರು ಹರಿಗೋಲುಗಳಲ್ಲಿ ಸಾಗಿ ಕಾಶ್ಮೀರ ಪ್ರವಾಸ ಮಾಡಿದರು. ಆ ಮೇಲೆ ೧೮೯೮ರ ಜುಲೈ ತಿಂಗಳ ಕೊನೆಗೆ ಪಶ್ಚಿಮ ಹಿಮಾಲಯದ ಹಿಮಾಚ್ಛಾದಿತ ದರಿಯಲ್ಲಿ ಅಮರನಾಥ ಗುಹೆಗೆ ನಿವೇದಿತೆಯ ಜೊತೆಯಲ್ಲಿ ವಿವೇಕಾನಂದರು ಮಹಾಯಾತ್ರೆ ಯನ್ನು ಕೈಕೊಂಡರು. ಆಗ ಹೊರಟ ಎರಡು ಮೂರು ಸಾವಿರ ಯಾತ್ರಿಕರು ಅಲ್ಲಲ್ಲಿಗೆ ಬಿಡಾರ ಬಿಟ್ಟಲ್ಲೆಲ್ಲ ರಾಹುಟಿಗಳ ಒಂದು ಪಟ್ಟ ಣವೇ ನೆಲಸುತ್ತಿತ್ತು. ತನ್ನ ಗುರುವಿನಲ್ಲಿ ಏನೋ ಒಂದು ಪರಿವರ್ತನ ವಾದಂತೆ ನಿವೇದಿತೆಗೆ ಅನಿಸಹತ್ತಿತು. ಆ ಸಾವಿರಾರು ಜನರೊಂದಿಗೆ ಅವರೂ ಸಣ್ಣ ಸಣ್ಣ ಸಾಂಪ್ರದಾಯಿಕ ಧರ್ಮವಿಧಿಗಳನ್ನು ಚಾಚೂ ಬಿಡದೆ ಆಚರಿಸಿದರು. ತಮ್ಮ ಗುರಿಯನ್ನು ಮುಟ್ಟಬೇಕಾದರೆ ಅವರು ಹಲವು ದಿನ ಬಿಕ್ಕಟ್ಟಿನ ಹಾದಿಗಳನ್ನು ತುಳಿದರು. ಕಡಿದಾದ ಗುಡ್ಡ ಗಳನ್ನು ಹತ್ತಿದರು. ಹಿಮ ಹಬ್ಬಿದ ದರಿಯಲ್ಲಿ ಹಲವು ಮೈಲು ನಡೆ ದರು. ಆ ಚಳಿಯಲ್ಲಿಯೂ ಅಲ್ಲಲ್ಲಿ ಅರೆಹೆಪ್ಪುಗಟ್ಟಿ ಹರಿಯುವ ಪಾವನ ತೀರ್ಥಗಳಲ್ಲಿ ಮಿಂದರು. ವಾರ್ಷಿಕ ಉತ್ಸವದ ದಿನ ( ಆ ವರ್ಷದ ಆಗಷ್ಟ್ ೨ನೇ ದಿನ ) ಅವರು ಆ ಮಹಾವಿಶಾಲವಾದ ಗುಹೆಗೆ ಬಂದರು. ಹಿಂದೆ ದೂರದಲ್ಲಿ ಪರಶಿವನು ಕಾಣಿಸಿದನು. ಆ ಮಹಾಲಿಂಗದ ದರ್ಶ ನಕ್ಕಾಗಿ ಪ್ರತಿಯೊಬ್ಬರು ದಿಗಂಬರರಾಗಿ ಭಸ್ಮಲೇಪಿತರಾಗಿ ಹೋಗಬೇಕಾ ಗಿದ್ದಿತು. ಮುಂದೆ ಕೆಲವರು ಹೋದರು. ಹಿಂದೆ ವಿವೇಕಾನಂದರು ಪ್ರವೇಶಿಸಿದರು. ಮೈಮೇಲೆ ಸಂಪೂರ್ಣ ಸ್ಮೃತಿಯೇ ಇರಲಿಲ್ಲ. ಆ

ಗುಹೆಯ ಕತ್ತಲೆಯಲ್ಲಿ, ಆ ಮಹಾಹಿಮಲಿಂಗದ ಧವಲಿಮೆಯ ಎದುರಿನಲ್ಲಿ ಸಾವಿರಾರು ಜನರ ಭಜನಗೀತಗಳ ನಾದವಲಯದಲ್ಲಿ, ಅವರು ಸಾಷ್ಟಾಂಗ ಹಾಕಿದಾಗ ಅವರಿಗೆ ಝಗ್ಗನೆ ಬೆಳಕೊಂದು ಕಾಣಿಸಿತು.... ಪರಶಿವನ ದರ್ಶನವಾಯಿತು ! ಏನು ಕಂಡರು ಏನು ಕೇಳಿದರು ಎಂಬುದನ್ನು ಅವರು ಯಾರ ಮುಂದೂ ಹೇಳುತ್ತಿರಲಿಲ್ಲ ........ ಆದರೆ ಆ ದಿವ್ಯದರ್ಶನದ ಆಘಾತದಿಂದ ಅವರು ಮೃತಪ್ರಾಯರಾದರು. ಆ ದಿವ್ಯ ಸಮ್ಮುಖದಿಂದ ಹೊರಗೆ ಬಂದಾಗ ಎಡಗಣ್ಣಿನಲ್ಲಿ ರಕ್ತ ಚಿಮ್ಮುತ್ತಿತ್ತು. ಹೃದಯಕ್ರಿಯೆಯ ಮೇಲೆ ಪರಿಣಾಮವಾಗಿತ್ತು. ಹೃದಯಕ್ರಿಯೆ ಮುಂಚಿನಂತೆ ಮುಂದೆ ಎಂದಿಗೂ ಸರಿಯಾಗಿರಲಿಲ್ಲ. ಹಲವು ದಿನ ಅವರ ಮಾತಿನ ವಿಷಯ ' ಶಿವ 'ನ ಹೊರತು ಬೇರೆ ಯಾವುದೂ ಇರಲಿಲ್ಲ. ಎಲ್ಲೆಲ್ಲೂ ಶಿವನನ್ನೇ ಕಂಡರು. ಶಿವನಿಂದ ತುಂಬಿ ಸೂಸುತ್ತಿದ್ದರು. ಹಿಮಾಚ್ಛಾದಿತ ಹಿಮಾಲಯವು ತನ್ನ ಸಿಂಹಾಸನದ ಮೇಲೆ ಕುಳಿತ ಶಿವನಂತೆ ಅವರಿಗೆ ಕಂಡಿತು.

ಒಂದು ತಿಂಗಳ ನಂತರ ಅವರು ಕಾಲೀಮಾತೆಯಿಂದ ಆವಿಷ್ಟರಾದರು. ಎಲ್ಲೆಲ್ಲೂ ಕಾಲೀಮಾತೆಯೇ ಕಣ್ಣಿಗೆ ಕಂಡಳು. ನಾಲ್ಕು ವರ್ಷ ವಯಸ್ಸಿನ ಚಿಕ್ಕ ಬಾಲಿಕೆಯಲ್ಲಿಯೂ ಕಾಲೀಮಾತೆಯನ್ನು ಪೂಜಿಸಿದರು. ಈ ರೀತಿ ಶಾಂತರೂಪಗಳಲ್ಲಿ ಮಾತ್ರವೇ ಅವರಿಗೆ ಕಾಲೀಮಾತೆ ಕಾಣಲಿಲ್ಲ. ಅವರ ಆಳವಾದ ಸಮಾಧಿಯಲ್ಲಿ ಕಾಲೀಮಾತೆಯ ಕರಾಲರೂಪ ಅವರ ಕಣ್ಮುಂದೆ ಕಟ್ಟಿತು. ಬಾಳಿನ ತೆರೆಯ ಹಿಂದೆ ಅವಿತುಕೊಂಡ ಮಹಾಮಾರಿಣಿಯ, ಹಾದಿ ಹಿಡಿದು ಸಾಗಿದ ಜೀವರಾಶಿಗಳ ಪಾದಾಘಾತದಿಂದ ಮೇಲೆದ್ದು ಅಡರಿದ ಹುಡಿಯ ಮೋಡದ ಹಿಂದೆ ಮರೆಯಾದ ಕಾಲೀಮಾತೆಯ ರುದ್ರರೂಪದ ದರ್ಶನವಾಯಿತು ಅವರಿಗೆ. ಸಂಜೆಯ ಮಬ್ಬಿನಲ್ಲಿ ಕೈಯಾಡಿಸಿ ಕಾಗದ ಮತ್ತು ಲೇಖನಿಯನ್ನು ತೆಗೆದುಕೊಂಡು ಕಾಲಿಯ ಕರಾಲದರ್ಶನದ ರುದ್ರಾವೇಗದಲ್ಲಿ 'ಕಾಲೀಮಾತೆ' ಎಂಬ ವಿಖ್ಯಾತ ಕವಿತೆಯನ್ನು ಬರೆದರು —

ಬರೆಬರೆಯುತ್ತಲೆ, ಬರೆಯುವುದು ಮುಗಿಮುಗಿಯುತ್ತಲೆ ಆ ಬಲವಾದ ಭಾವಾವೇಗದಿಂದ ಬಿದ್ದುಬಿಟ್ಟರು!

## ಕಾಲೀ ಮಾತೆ

ಚುಕ್ಕೆ ಬಾನೊಳಿಂಗಿವೆ
ಮೋಡ ಮುಗಿಲ ನುಂಗಿವೆ
ಜಿರಗುಟ್ಟುವ ದುರಗುಟ್ಟುವ
ಕತ್ತಲೋ ಕತ್ತಲೇ
ಸುಟ್ಟರೆಯೋ ಬಿರುಗಾಳಿಯೆ
ಲೋಕದತ್ತಲಿತ್ತಲೆ,
ಮುರಿದು ಸೆರೆ, ಬಂತೊ ನೆರೆ
ಮರುಳ ಪಡೆಯೆ ಬೆತ್ತಲೆ
ಮರ ಕಿತ್ತಿವೆ ಬುಡತಳೞ
ಹಾದಿ ಉಡುಗೆ ಝುಳ ಝುಳೞ
ಕಡಲು ಕುಣಿಯೆ ಗೊಂದಣೞ
ತೆರೆ-ಮುರಿ-ನೊರೆ ಧಂಧಣೞ
ಮುಚ್ಚಿ ಮಳೆಯು ನಾಡಿಗೆ
ಮುಗಿಲಿನಂಚು ಕಾಡಿಗೆ
ಸಾವು ಹೊಂಚು, ಅಯ್ಯೋ ಮಿಂಚು
ಕಣ್ತೆರೆದೆಡೆ ಸುತ್ತಿಕೊಂಡ
ಲಕ್ಷಕೋಟಿ ರೂಪಗೊಂಡ
ಸಾವಿನಿಂದ ಮುತ್ತುತೞ
ಕಷ್ಟನಷ್ಟ ಸುತ್ತುತೞ
ಹಿಗ್ಗುಗೊಂಡು ಹುಚ್ಚೆದ್ದು
ಕುಣಿವ ತಾಯಿ, ಬಾ.

'ರೌದ್ರಿ' ನಿನ್ನ ಹೆಸರು॥
ಮೃತ್ಯು ನಿನ್ನ ಉಸಿರು॥
ನಿನ್ನ ಒಂದು ನಡೆ ಅಡಿ
ಜಗವ ಮಾಡೆ ಪುಡಿ ಪುಡಿ
ಪ್ರಳಯಂಕರ ಓ ಕಾಳೀ
ಬಾ, ತಾಯಿಯೇ, ಬಾ,
ತಾಪತ್ರಯ ಒಪ್ಪಿರೆ॥
ಯಮಯಾತನೆ ಅಪ್ಪಿರೇ॥
ಪ್ರಳಯನೃತ್ಯ ಕುಣಿ, ನಡೆ
ತಾಯಿ ಬರುವಳವನೆಡೆ.

ಅವರು ನಿವೇದಿತೆಗೆ ಅಂದರು:

"ಸವಿಸೊಗಸಿನಲ್ಲಿ ಆನಂದಲೀಲೆಯಲ್ಲಿ ಹೇಗೋ ಹಾಗೆ ತಾಮಸ ವಲ್ಲಿ ರೌದ್ರದಲ್ಲಿ ದುಃಖದಲ್ಲಿ ಮತ್ತು ಪ್ರಲಯದಲ್ಲಿ ಸಹಜವಾಗಿ ಜಗನ್ಮಾತೆಯನ್ನು ಕಾಣಲು ಕಲಿ........ 'ತಾಯೇ, ನಿನ್ನ ಕೊರಳಿನಲ್ಲಿ ಹೂವಿನ ಹಾರ ಹಾಕುತ್ತಲೆ ಹೆದರಿ ಹಿಂದೆಗೆದು ನಿನ್ನನ್ನು 'ದಯಾ ಮಯಿ!' ಎಂದು ಕರೆಯುವರು' ........ ಮೃತ್ಯುವನ್ನು ಧ್ಯಾನಿಸು. ರುದ್ರನನ್ನು ಪೂಜಿಸು. ರುದ್ರೋಪಾಸನೆಯಿಂದಲೇ ರುದ್ರದ ಭಯ ತೊಲಗಿ ಅಮರತೆ ದೊರಕುವುದು. ದುಃಖದಲ್ಲೂ ಸುಖವುಂಟು........ ತಾಯಿ ಬ್ರಹ್ಮಸ್ವರೂಪಳು. ಅವಳ ಶಾಪ ಸಹ ಆಶೀರ್ವಾದವೇ ಸರಿ. ಹೃದಯವು ಸ್ಮಶಾನವಾಗಿ ಅದರಲ್ಲಿ ಅಹಂಕಾರ, ಗರ್ವ, ಸ್ವಾರ್ಥ ಕಾಮನೆ ಇವೆಲ್ಲ ಸುಟ್ಟು ಬೂದಿಯಾಗಬೇಕು. ಆಗಲೇ, ಆಗ ಮಾತ್ರವೇ, ಮಾತೆ ಮೈದೋರುವಳು."

ಆ ಭಾರತೀಯನ ದಿವ್ಯ ರುದ್ರ ವಿಶ್ವರೂಪದರ್ಶನದ ಬಿರುಗಾಳಿ ಯಲ್ಲಿ ಆ ಆಂಗ್ಲವನಿತೆ ನಡುಗಿದಳು ! ದಿಗ್ಭ್ರಾಂತಳಾಗಿ ನಿಂತಳು ! "ದೇವರು ದಯಾಮಯನು. ಈ ವಿಶ್ವದ ಅಚ್ಚುಕಟ್ಟೆಲ್ಲ ಅವನ ಕೈವಾಡ"

ಎಂಬ ಪಾಶ್ಚಾತ್ಯ ತತ್ವದರ್ಶನಗಳ ಶ್ರದ್ಧೆ ಆ ಬಿರುಗಾಳಿಯಲ್ಲಿ ಹಿಂಜಿದ ಅರಳೆಯಂತೆ ತೂರಿ ಹೋದುದನ್ನು ಅವಳು ಶೂನ್ಯದೃಷ್ಟಿಯಿಂದ ನೋಡಿದಳು. ಅವಳು ಬರೆದಿರುವಳು:

"ಭೂಕಂಪದ ಅನಾಹುತದಲ್ಲಿ, ಜ್ವಾಲಾಮುಖಿಯ ಪ್ರಲಯದಲ್ಲಿ ದೇವನನ್ನು ಕಾಣಲೊಪ್ಪದ, ಆದರೆ ದುಃಖವನ್ನು ದೂರೀಕರಿಸುವ ದಯಾಮಯ ದೇವನನ್ನು ಮೆಚ್ಚುವ ಉಪಾಸನೆಯಲ್ಲಿ ಅಡಕವಾದ ಅಹಂಭಾವ ಅವರ ಮಾತನ್ನು ಕೇಳುತ್ತಿರುವಾಗ ನಿಚ್ಚಳವಾಗಿ ತಿಳಿಯಿತು. ಹಿಂದೂ ಜನರು ಅನ್ನುವಂತೆ ಇಂಥ ಉಪಾಸನೆಯೆಂದರೆ ವ್ಯಾಪಾರದ ವ್ಯವಹಾರವೆಂದೆನಿಸಿತು. ಸತ್ವದಲ್ಲಿ ಅದರಂತೆ ತಮಸ್ಸಿನಲ್ಲಿ ಸಹ ಭಗವಂತನ ಸಾಕ್ಷಾತ್ಕಾರವಾಗುವುದು ಎಂಬ ತತ್ವದಲ್ಲಿ ಅದೆಂಥ ಸತ್ಯವಿದೆ ಅದೆಂಥ ನಿಸ್ಸೀಮ ಧೀರೋದಾತ್ತ ಭಾವವಿದೆ ಎಂದು ಹೊಳೆಯಿತು. ಸ್ವಾಮಿ ವಿವೇಕಾನಂದರ ಮಾತಿನಲ್ಲಿ ಹೇಳಬೇಕಾದರೆ 'ಬಾಳನ್ನಲ್ಲ, ಆದರೆ ಸಾವನ್ನು ಅರಸುವುದು, ಅಸಿಧಾರೆಯ ಮೇಲೆ ಎರಗುವುದು, ಪರಮ-ಪುರುಷನ ರುದ್ರರೂಪದಲ್ಲಿ ಬೆರೆತು ಹೋಗುವುದು.' ಇಂಥ ದೃಢ ನಿಶ್ಚಯದಲ್ಲಿಯೇ ನಿಜವಾಗಿಯೂ ಅಹಂಕಾರಕ್ಕೆ ಮಣಿಯದ ಮನೋವೃತ್ತಿಯಿದೆ, ಸೋಲದ ಇಚ್ಛಾಶಕ್ತಿಯಿದೆ."

ವಿವೇಕಾನಂದರ ಈ ಭಾವೋದ್ರೇಕದಲ್ಲಿ ಮತ್ತೊ ಒಮ್ಮೆ ಎದ್ದು ಕಾಣುವ ಧೀರೋದಾತ್ತ ಇಚ್ಛಾಶಕ್ತಿಯಲ್ಲಿಯೇ ಗೋಚರವಾಗುವುದು ಕರ್ಮಯೋಗದ ರಹಸ್ಯ—ಮಾರ್ದವದಲ್ಲಿ ಮೂಡಲೊಪ್ಪದ ಆದರೆ ಕರಾಲ ರುದ್ರರೂಪದಲ್ಲಿ ಪ್ರಖರವಾಗಿ ಹೊಳೆಯುವ ನಿತ್ಯ ಸತ್ಯ—ನಿಷ್ಕಾಮ ಭಕ್ತಿ— ಪ್ರತಿಫಲವನ್ನು ಆಶಿಸದ ಮತ್ತು ಮುಕ್ತಿಯ ಆಶ್ವಾಸನವನ್ನು ಸಹ ಅಪೇಕ್ಷಿಸದ ಅಚಲ ಅಮರ ಶ್ರದ್ಧೆ. ಕ್ರಿಸ್ತೀ ಧರ್ಮದ ಮಹಾ ತಪಸ್ವಿಗಳು ಸಹ ಇಂಥ ಸತ್ವಶಾಲಿಯಾದ ಆತ್ಮತೃಪ್ತಿಯನ್ನು ಬಲ್ಲರು ಮತ್ತು ಇನ್ನೂ ಅನುಭವಿಸುತ್ತಿರುವರು. ಆದರೆ ಈ ಆತ್ಮತೃಪ್ತಿಯು ವಿವೇಕಾನಂದರಲ್ಲಿ ಕರ್ತವ್ಯಪರಾಙ್ಮುಖತೆಗೆ ಆಸ್ಪದವನ್ನೀ

ಯಲಿಲ್ಲ. ಅದರ ಸ್ಫೂರ್ತಿಯಿಂದ ಅವರು ಉರಿದುರಿದು ಹುರಿದುಂಬಿ ಹತ್ತು ಪಾಲು ಹೊಸ ಹುರುಪಿನಿಂದ ಹುರಿಕಟ್ಟಾದ ಇಚ್ಛಾಸಾಮರ್ಥ್ಯ ದಿಂದ ಹೋರಾಟದ ಮಧ್ಯದಲ್ಲಿ ಧುಮುಕಿದರು.

ಪ್ರಪಂಚದ ಕಷ್ಟಗಳ ಭಾರವನ್ನೆಲ್ಲ ಹೊತ್ತರು ವಿವೇಕಾನಂದರು. "ಪ್ರಪಂಚದಲ್ಲಿ ಯಾರಿಗೆ ಯಾವುದೇ ಆದ ಆಘಾತದಿಂದ ನಮ್ಮ ಗುರು ವಿನ ಹೃದಯ ನೋಯದೆ ಇರಲಿಲ್ಲ. ಅವರಿಗೆ ಎಂಥ ಕಷ್ಟ ಕೊಟ್ಟರೂ, ಸಾವು ತಂದರೂ, ಪ್ರತಿಯಾಗಿ ಅವರು ನಲ್ಮೆಯನ್ನೂ ಆಶೀರ್ವಾದವನ್ನೂ ಸಲ್ಲಿಸದೆ ಇರಲಾರರು, ಎಂದು ನಮ್ಮ ನಂಬಿಕೆ" ಎಂದು ನಿವೇದಿತಾ ಬರೆದಿರುವಳು.

"ಸಾವಿನ ರೂಪವನ್ನೇ ನಾನು ಅಪ್ಪಿಕೊಂಡಿರುವೆನು" ಎಂದರೊಮ್ಮೆ ವಿವೇಕಾನಂದರು. ಹಲವು ತಿಂಗಳು ಅವರು ಅದರಿಂದ ಆವಿಷ್ಟರಾಗಿ ದ್ದರು. ಕಾಳೀಮಾತೆಯ ಹೊರತು ಇನ್ನಾವ ದನಿ ಅವರಿಗೆ ಕೇಳಿ ಸುತ್ತಿರಲಿಲ್ಲ. ಇದರಿಂದ ಅವರ ಆರೋಗ್ಯದ ಮೇಲೆ ಭಯಂಕರ ಪರಿ ಣಾಮವಾಯಿತು. ಅವರು ಮರಳಿ ಬಂದಾಗ ಅವರಲ್ಲಾದ ಪರಿವರ್ತನ ವನ್ನು ಕಂಡು ಸನ್ಯಾಸಿ ಬಂಧುಗಳು ಭಯಭೀತರಾದರು. ಒಂದೊಂದು ಪ್ರಶ್ನೆಯನ್ನು ಹತ್ತು ಹತ್ತು ಸಲ ಕೇಳಿದರೂ ಉತ್ತರವಿಲ್ಲ. ಅಷ್ಟು ಗಾಢ ಧ್ಯಾನದಲ್ಲಿ ಮಗ್ನರಾಗಿ ಹೋಗುತ್ತಿದ್ದರು. ಉಗ್ರ ತಪಸ್ಯೆಯೇ ಇದಕ್ಕೆ ಕಾರಣವೆಂದು ಅವರು ಅರಿತರು.

"ಶಿವನೇ ನನ್ನ ಮೆದುಳಿನಲ್ಲಿ ಸೇರಿರುವನು! ಅವನು ಅಲ್ಲಿಂದ ಹೋಗಲಾರನು!"

ಇಂಥ ವೈಯಕ್ತಿಕ ದೇವದೇವತೆಗಳಿಂದ ಆವಿಷ್ಟರಾಗುವುದೆಂದರೆ ಯುರೋಪದ ಬುದ್ಧಿಪ್ರಧಾನ ಪಂಡಿತರಿಗೆ ಅಸಹ್ಯವೆನಿಸುತ್ತದೆ. ಮುಂದೆ ಒಂದು ವರ್ಷದ ನಂತರ ಈ ವಿಷಯದಲ್ಲಿ ಸ್ವಾಮಿಯವರು ಮಾಡಿದ ಸ್ಪಷ್ಟೀಕರಣವನ್ನು ಇಂಥವರು ಗಮನಿಸಬೇಕು:—

"ಮಾನವಮಾತ್ರವಲ್ಲದೆ ಸಕಲ ಜೀವಾತ್ಮಗಳ ಸಮುಚ್ಚಯವೇ

ಸಗುಣ ಪರಮಾತ್ಮ. ಇಂಥ ಭಗವಂತನ ಸಂಕಲ್ಪವನ್ನು ಯಾರೂ ಎದುರಿಸಲಾರರು. ಅದೇ ಧರ್ಮ. ಅದೇ ನಮ್ಮ ಶಿವ. ಅದೇ ನಮ್ಮ ಕಾಲಿ........"

ಯುರೋಪೀಯರ ಮೆದುಳಿನಲ್ಲಿ, ಬುದ್ಧಿಯ ಸೀಮೆಯಲ್ಲಿ ಮಾತ್ರ ಸುಳಿಯುವುದನ್ನು ಸ್ವಾಮಿಯವರ ಆ ಪ್ರಭಾವಶಾಲಿಯಾದ ಭಾವನೆಯ ಪ್ರತಿಭೆ ಜ್ವಲನ್ಮೂರ್ತಿಗಳಲ್ಲಿ ರೂಪಿಸಿತು. ಅದ್ವೈತದಲ್ಲಿಯ ಅವರ ಗಾಢ ಶ್ರದ್ಧೆ ಎಂದೆಂದಿಗೂ ಅಲುಗಲಿಲ್ಲ. ಆದರೆ ಶ್ರೀ ರಾಮಕೃಷ್ಣರ ಆದರ್ಶದ ಹಾದಿಯಿಂದ ಅವರಾದರೂ ಅದೇ ಸರ್ವಜ್ಞತ್ವದ ಮಟ್ಟನ್ನು ಮುಟ್ಟಿದರು. ಎಲ್ಲಿ ಮಾನವನು ಏಕಕಾಲಕ್ಕೆ ಪರಿಧಿವೂ ಅವನೇ ಮಧ್ಯಬಿಂದುವೂ ಅವನೇ, ಪರಮಾತ್ಮನೂ ಅವನೇ ಮತ್ತು ಮೊದಲು ಓಂರೂಪನಾಗಿ ಆ ಮೇಲೆ ಅನಂತ ನಾದದಲ್ಲಿ ಲೀನನಾಗುವ ಜೀವಾತ್ಮನೂ ಅವನೇ, ಅನಂತವಾದ ದ್ವಂದ್ವಮಯ ಪ್ರಕೃತಿಯ ಆರಂಭವೂ ಅವನೇ, ಅಂತವೂ ಅವನೇ — ಅಂಥ ವಿಚಾರದ ಮಟ್ಟನ್ನು ಮುಟ್ಟಿದರು ವಿವೇಕಾನಂದರು. ಆ ಕಾಲದಿಂದ ಅವರ ಮತ್ತು ಶ್ರೀರಾಮಕೃಷ್ಣರ ಏಕತ್ವದ ಗೂಢ ಅರಿವು ಅವರ ಶಿಷ್ಯ ಬಂಧುಗಳಲ್ಲಿ ಮೂಡಿತು. ಅವರಿಗೆ ಪ್ರೇಮಾನಂದರು ಒಮ್ಮೆ ಕೇಳಿದರು:

"ನಿಮಗೂ ಶ್ರೀರಾಮಕೃಷ್ಣರಿಗೂ ಭೇದವೇನಾದರೂ ಇದೆಯೇ?"

ಅವರು ಮರಳಿ ಸಂಘಕ್ಕೆ ಬಂದರು. ಬೇಲೂರಲ್ಲಿಯ ಹೊಸ ಮಠದ ಸಮರ್ಪಣಸಮಾರಂಭವನ್ನು ಮಾಡಿದರು. ಕೆಲ ದಿನಗಳ ಮುಂಚೆ ಕಲಕತ್ತೆಯಲ್ಲಿ ನವ್ಹಂಬರ್ ೧೨ನೇ ದಿನ — ಕಾಲೀಮಾತೆಯ ಉತ್ಸವದ ದಿನ — ನಿವೇದಿತಾದೇವಿಯ ಕನ್ಯಾಶಾಲೆ ಆರಂಭವಾಯಿತು. ಉಬ್ಬಸ ಬಡಿಸುವ ಆಘಾತಗಳು ಬಂದು ಹೋಗುತ್ತಲೆ ನೀರಲ್ಲಿ ಮುಳುಗಿ ಸಾಯುವವನ ಮುಖದಂತೆ ಅವರ ಮುಖ ನೀಲ ನೀಲವಾಗಿ ಹೋಗುತ್ತಿತ್ತು. ಇಂಥ ಕಾಯಿಲೆಯಲ್ಲಿಯೂ ಅವರು ಶಾರದಾನಂದರ ನೆರವಿನಿಂದ ಸಂಘದ ಘಟನೆಯನ್ನು ಮುಂದರಿಸಿದರು.

ಮಂಡಲವು ಕಾರ್ಯಪ್ರವೃತ್ತವಾಯಿತು. ಅಲ್ಲಿ ಸಂಸ್ಕೃತ, ಪೌರ್ವಾತ್ಯ ಪಾಶ್ಚಾತ್ಯ ದರ್ಶನಗಳು, ಶಾರೀರಿಕ ಕರ್ಮ, ಧ್ಯಾನ — ಎಲ್ಲವನ್ನೂ ಹೇಳಿಕೊಡಲಾಗುತ್ತಿತ್ತು. ಅವರೇ ಮೇಲ್ಪಂಕ್ತಿಯನ್ನು ಹಾಕಿಕೊಟ್ಟರು. ತತ್ವಜ್ಞಾನದ ಪಾಠವನ್ನು ಹೇಳಿ ಕೊಟ್ಟ ನಂತರ ತೋಟದಲ್ಲಿ ನೇಗಿಲ ಹೊಡೆಯುತ್ತಿದ್ದರು. ಬಾವಿಯನ್ನು ತೋಡುತ್ತಿದ್ದರು. ರೊಟ್ಟಿಯನ್ನು ಬಡಿಯುತ್ತಿದ್ದರು. ಅವರು ಕರ್ಮಯೋಗದ ಜೀವಂತ ಮೂರ್ತಿಮಂತ ಮಂಗಲ ಗೀತೆಯಾಗಿದ್ದರು.

"ಮಹಾನ್ ಸನ್ಯಾಸಿಯೇ ಮಹಾನ್ ಕರ್ಮಯೋಗಿಯಾಗ ಬಲ್ಲನು — ಅವನು ನಿಷ್ಕಾಮನಿದ್ದ ಕಾರಣದಿಂದಲೇ. ಬುದ್ಧ ಮತ್ತು ಕ್ರಿಸ್ತರಿಗಿಂತ ಮಿಗಿಲಾದ ಮಹಾ ಕರ್ಮಯೋಗಿಗಳಾಗಿಲ್ಲ. ಯಾವ ಕರ್ಮವೂ ಧರ್ಮಕ್ಕೆ ಹೊರತಾಗಿಲ್ಲ. ಎಲ್ಲ ಕರ್ಮವೂ ಉಪಾಸನೆ-ಪೂಜೆ".

"ಕಡಿಯುವವರೆಲ್ಲ ತೋಡುವವರೆಲ್ಲ ನನ್ನ ಧರ್ಮಸೈನ್ಯದಲ್ಲಿ ಬೇಕು. ಆ ಕಾರಣ ಎಳೈ ಹುಡುಗರೇ, ನಿಮ್ಮ ಸ್ನಾಯುವನ್ನು ಬಲ ಪಡಿಸುವ ಕೆಲಸಕ್ಕೆ ಹತ್ತಿರಿ. ತಪಸ್ವಿಗಳಿಗೇನೋ ದೇಹದಂಡನೆ ಸಲ್ಲ ಬಹುದು. ಆದರೆ ಕರ್ಮಯೋಗಿಗಳಿಗೆ ಬೇಕಾದುದು ಬಲಶಾಲಿಯಾದ ದೇಹ. ಕಬ್ಬಿಣದ ಸ್ನಾಯು, ಉಕ್ಕಿನ ನರ !"

"ಮೇಲಾಗಿ ಕರ್ಮದ ಭಿನ್ನ ರೂಪಗಳಲ್ಲಿ ಉಚ್ಚ ನೀಚ ಭೇದ ಗಳಿಲ್ಲ. ಉಪಯುಕ್ತವಾದ ಕರ್ಮವೆಲ್ಲ ಉದಾತ್ತವಾದುದು

"ಮಠದ ಮೋರಿಗಳನ್ನೆಲ್ಲ ಹಸನಾಗಿಸುತ್ತ ನನ್ನ ಉಳಿದ ಬಾಳ ನ್ನೆಲ್ಲ ಕಳೆಯಬೇಕೆಂದು ನನ್ನ ಗುರುಬಂಧುಗಳು ನನಗೆ ಹೇಳಿದರೆ ನಿಜವಾಗಿಯೂ ನಾನು ಹಾಗೆ ಮಾಡಲೇಬೇಕು. ಸಾರ್ವಜನಿಕ ಹಿತ ಕ್ಕಾಗಿ ವಿಧೇಯನಾಗಬಲ್ಲವನೇ ಹಿರಿಯ ಮುಂದಾಳು ...."

"ತ್ಯಾಗವೇ ಆದ್ಯ ಕರ್ತವ್ಯ. ತ್ಯಾಗದಿಂದಲ್ಲದೆ ಯಾವ ಧರ್ಮವೂ ತಾಳಲಾರದು. 'ತ್ಯಾಗಿ' 'ಸನ್ಯಾಸಿ' ಸಮಸ್ತ ವೇದಗಳ ಮಸ್ತಕದ ಮೇಲೆ ಅಧಿಷ್ಠಿತನಾಗುತ್ತಾನೆ. ಯಾಕಂದರೆ, ಅವನು ಮತಪಂಥಗಳ ಬಂಧನ

ಗಳಿಂದ ಮುಕ್ತನು. ಅವನು ಭಗವಂತನಲ್ಲಿ ವಾಸ ಮಾಡುತ್ತಾನೆ, ಭಗವಂತನು ಅವನಲ್ಲಿ. ಅವನಲ್ಲಿ ಶ್ರದ್ಧೆ ಮಾತ್ರ ಬೇಕು !"

"ಜಗತ್ತಿನ ಇತಿಹಾಸವೆಂದರೆ ಕೇವಲ ಶ್ರದ್ಧಾವಂತರ ಇತಿಹಾಸ. ಆ ಶ್ರದ್ಧೆಯು ಕೂಗಿಗೆ ಒಳಗಿನ ದೇವತ್ವ ಹೊರದೋರುತ್ತದೆ. ನೀವು ಬೇಕಾದುದನ್ನು ಮಾಡಬಲ್ಲಿರಿ. ಒಳಗಿನ ಅನಂತ ಶಕ್ತಿಯನ್ನು ಹೊರಗೆ ತೆಗೆಯಲು ನೀವು ಸಾಕಷ್ಟು ಯತ್ನಿಸದಿದ್ದರೆ ಮಾತ್ರ ನಿಮಗೆ ಸೋಲು. ವ್ಯಕ್ತಿಯಾಗಲಿ ರಾಷ್ಟ್ರವಾಗಲಿ ತನ್ನಲ್ಲಿಯ ಶ್ರದ್ಧೆಯನ್ನು ಕಳೆದುಕೊಂಡರೆ ಸಾವು ಸಮೀಪಿಸಿತೇ ! ಮೊದಲು ಆತ್ಮಶ್ರದ್ಧೆ ! ಆ ಮೇಲೆ ಭಗವಂತ ನಲ್ಲಿ ಶ್ರದ್ಧೆ ! ಇಂಥ ಸಮರ್ಥರಾದ ನಾಲ್ಕು ಜನ ಜಗತ್ತನ್ನೇ ಅಲು ಗಿಸಬಲ್ಲರು ! "

"ಆದುದರಿಂದ ವೀರರಾಗಿರಿ. ಶೌರ್ಯ ಹಿರಿದಾದ ಸದ್ಗುಣ. ಎಲ್ಲ ರಿಗೂ ಯಾವ ಭೇದವಿಲ್ಲದೆ, ಯಾವ ಸಂದೇಹವಿಲ್ಲದೆ, ಯಾವ ಆಸೆ-ಆಕಾಂಕ್ಷೆಗಳಿಲ್ಲದೆ, ಯಾವ ಸಂಕೋಚವಿಲ್ಲದೆ, ಸತ್ಯವನ್ನು ಸಾರಿರಿ. ಸಿರಿ ವಂತರಿಗೂ ಹಿರಿಯರಿಗೂ ಸೊಪ್ಪು ಹಾಕಬೇಡಿರಿ. ಸಿರಿವಂತರನ್ನು ತೆಗೆದುಕೊಂಡು ಸನ್ಯಾಸಿ ಮಾಡುವುದೇನು ? ಸಿರಿವಂತರನ್ನು ಗೌರ ವಿಸಿ ಅವರ ಆಶ್ರಯಕ್ಕಾಗಿ ಜೋತುಬೀಳುವುದೆಂದರೆ ಸೂಳೆಗೆ ಸಲ್ಲುವ ವೃತ್ತಿ. ದರಿದ್ರರಲ್ಲಿಯೇ ಸನ್ಯಾಸಿಯ ಕರ್ತವ್ಯ. ದರಿದ್ರರನ್ನು ದಕ್ಷತೆ ಯಿಂದ ನಲ್ಮೆಯಿಂದ ಸಲಹಿ ತನ್ನ ಕೈಲಾದ ಮಟ್ಟಿಗೆ ಅವರ ಸೇವೆಯನ್ನು ಅವನು ಸಂತೋಷದಿಂದ ಮಾಡಬೇಕು.

"ನಿಮ್ಮ ಉದ್ಧಾರಕ್ಕಾಗಿ ಮಾತ್ರ ಹೆಣಗುವುದು ನರಕದ ಹಾದಿ. ಇನ್ನೊಬ್ಬರ ಉದ್ಧಾರವೇ ನಿಮ್ಮ ಗುರಿ. ಇನ್ನೊಬ್ಬರ ಸಲುವಾಗಿ ಹೋರಾಡುತ್ತ ನೀವು ನರಕಕ್ಕೆ ಹೋದರೂ, ನಿಮ್ಮ ಉದ್ಧಾರಕ್ಕಾಗಿ ಹೆಣಗಿ ಕಾಣುವ ಸ್ವರ್ಗಕ್ಕಿಂತಲೂ ಅದು ಹೆಚ್ಚಿಗೆ ಶ್ರೇಯಸ್ಕರವು .... ಶ್ರೀರಾಮಕೃಷ್ಣರು ಬಂದು ಲೋಕಕ್ಕಾಗಿ ತಮ್ಮ ಬಾಳನ್ನು ಹೋಮಿ ಸಿದರು. ನಾನಾದರೂ ನನ್ನ ಬಾಳಿನ ಬಲಿದಾನ ಮಾಡುವೆನು. ನೀವಾ

ದರೂ–ನಿಮ್ಮಲ್ಲಿಯ ಪ್ರತಿಯೊಬ್ಬನೂ—ಈ ಬಲಿದಾನ ಮಾಡಲೇಬೇಕು. ಈ ಮತ್ತು ಇಂಥ ಕಾರ್ಯಗಳೆಂದರೆ ಕೇವಲ ಆರಂಭ ಮಾತ್ರ. ನಾವು ಸುರಿದ ಬಾಳಿನ ಬಿಸಿ ನೆತ್ತರದಿಂದ ಬಲಭೀಮರಾದ ಶೂರಧೀರರಾದ ಭಗವಂತನ ಸೈನಿಕರು ಸಿಡಿದೆದ್ದು ಅಖಂಡ ಭೂಮಂಡಲದಲ್ಲಿ ಕ್ರಾಂತಿಯನ್ನು ಎಬ್ಬಿಸುವರು !"

ಅವರ ವೀರವಾಣಿಯೆಂದರೆ ಭವ್ಯ ಸಂಗೀತ! ಇಂದಿಗೆ ಮೂವತ್ತು ಸಂವತ್ಸರ ಸವೆದು ಹೋದರೂ ಅವರ ಈ ವೀರವಾಣಿಯನ್ನು ಸೋಂಕುತ್ತಲೆ ನನ್ನ ದೇಹಾದ್ಯಂತವೆಲ್ಲ ಮಿಂಚು ಸಂಚರಿಸಿದಂತಾಗುತ್ತದೆ. ಆ ವೀರನ ತುಟಿಯಿಂದ ಕಾದ ಲೋಹರಸದಂತೆ ಝುಳಪಿಸುತ್ತ ಹೊರಹೊಮ್ಮುತ್ತಿರುವಾಗಿನ ಆ ವೀರ ವಾಣಿಯಿಂದ ಕೇಳುತ್ತಿದ್ದವರ ಹೃದಯಗಳಲ್ಲಿ ಅದೆಂಥ ವಿದ್ಯುದಾಘಾತವಾಗಿದ್ದೀತು! ಅದೆಂಥ ಹರ್ಷೋನ್ಮತ್ತ ಆವೇಶ ಸಂಚರಿಸಿದ್ದೀತು!

ಸಾವಿನ ಪಾಶ ತನ್ನನ್ನು ಸುತ್ತುತ್ತಿರುವುದನ್ನು ಆ ವೀರ ತಿಳಿದನು. ಆದರೆ

"ಬಾಳು! ಅದೊಂದು ಹೋರಾಟ! ಕಲಿತನದ ಕಾಳಗ! ಕಾದುತ್ತ ಕಾದುತ್ತ ಮಡಿಯುವೆ! ಎರಡು ವರ್ಷಗಳ ಶಾರೀರಿಕ ಯಾತನೆ ನನ್ನ ಬಾಳಿನ ಇಪ್ಪತ್ತು ವರ್ಷಗಳನ್ನು ದೋಚಿಕೊಂಡು ಹೋಯಿತು. ಆದರೆ ಆತ್ಮ ಅಬಾಧಿತವಿದೆ. ಇಲ್ಲಿ ಮಾತ್ರ ಅದೇ ಹುಚ್ಚನಿದ್ದಾನೆ! ಏಕಸಂಕಲ್ಪದ ಹುಚ್ಚ!........ಆತ್ಮನ್!........"

## ೧೦ ಪಶ್ಚಿಮಕ್ಕೆ ದ್ವಿತೀಯ ಯಾತ್ರೆ

ತಾವು ಸ್ಥಾಪಿಸಿದ ಸಂಸ್ಥೆಗಳನ್ನು ನಿರೀಕ್ಷಿಸಿ ಹುರಿದುಂಬಿಸಲು ಅವರು ಪಶ್ಚಿಮಕ್ಕೆ ದ್ವಿತೀಯ ಯಾತ್ರೆಯನ್ನು ಕೈಕೊಂಡರು. ಈ ಸಲ ತಮ್ಮ ಬಂಧುಗಳಲ್ಲಿ ಅತ್ಯಂತ ವಿದ್ವಾಂಸರಾದ ತುರೀಯಾನಂದರನ್ನು ಕರೆದೊಯ್ದರು. ತುರೀಯಾನಂದರು ಉಚ್ಚ ವರ್ಣದವರು.

ಮೇಲಾಗಿ ಸಂಸ್ಕೃತಪಂಡಿತರು. ಅವರ ಜೀವನವು ಉದಾತ್ತವಾದುದು.

"ಹಿಂದಿನ ಸಲ ಅವರು ಕ್ಷತ್ರಿಯನನ್ನು ಕಂಡರು. ಈ ಸಲ ಅವರಿಗೆ ಬ್ರಾಹ್ಮಣನನ್ನು ತೋರಿಸುವೆನು," ಎಂದರು ಸ್ವಾಮಿಯವರು.

ಹಿಂದಿನ ಯಾತ್ರೆಯಿಂದ ಮರಳಿ ಬಂದಾಗಿನ ಪರಿಸ್ಥಿತಿ ಈಗಿನ ಪರಿಸ್ಥಿತಿಗಿಂತಲೂ ಬೇರೆಯಾಗಿತ್ತು. ಅವರ ಸೊರಗಿದ ಶರೀರದಲ್ಲಿ ಉತ್ಸಾಹದ ಕುಲುಮೆ ಕುದಿಯುತ್ತಿತ್ತು. ಕರ್ಮದ ಮತ್ತು ಕಾಳಗದ ಹುಮ್ಮಸ್ಸು ಹೊರಹೊಮ್ಮುತ್ತಿತ್ತು. ತಮ್ಮ ನಿರ್ಜೀವ ಜನರನ್ನು ಕಂಡು ಅವರಿಗೆ ಅಸಹ್ಯವಾಗಿತ್ತು. ಹಡಗದ ಮೇಲೆ ಕಾರ್ಸಿಕಾ ದ್ವೀಪ ಕಣ್ಣಿಗೆ ಕಾಣುತ್ತಲೆ ಅವರು 'ಯುದ್ಧಾಧಿಪತಿ'ಯ (ನೆಪೋಲಿಯನ್ನನ) ಸಮಾರಂಭ ಮಾಡಿದರು.

ನೈತಿಕ ಹೇಡಿತನವನ್ನು ಹಳಿಯುತ್ತ ಅತ್ಯಾಚಾರಿಯ ಉತ್ಸಾಹ ಅದಕ್ಕಿಂತಲೂ ಬೇಕು ಎಂದು ಸಹ ಅಂದರವರು.

ಪೂರ್ವಪಶ್ಚಿಮಗಳು ಪರಸ್ಪರರಿಂದ ಕಲಿಯಲೇ ಬೇಕು ಎಂದು ಅವರ ನಂಬಿಗೆ ವಯಸ್ಸಾಗುತ್ತ ಹೋದಂತೆ ದೃಢವಾಯಿತು. ಹಿಂದುಸ್ತಾನದಲ್ಲಿ ಮತ್ತು ಯುರೋಪದಲ್ಲಿ ಇನ್ನೂ ಮುಗಿಯದ ಎರಡು ಮಹಾಪ್ರಯೋಗಗಳನ್ನು ಅವರು ಕಂಡರು. ಅವೆರಡೂ ಪರಸ್ಪರ ಸಹಾಯಕವಾಗಲು ಬೇಕು. ಆದರೆ ಅದೇ ಕಾಲಕ್ಕೆ ಪರಸ್ಪರರ ಅನಿರ್ಬಂಧ ಬೆಳವಣಿಗೆಗೆ ಸಂಪೂರ್ಣ ಆಸ್ಪದವನ್ನು ಕೊಡಲಿಕ್ಕೆ ಬೇಕು. ಅವೆರಡರ ದೌರ್ಬಲ್ಯ-ದೋಷಗಳನ್ನು ಹಳಿಯಲು ಅವರು ಮನಸ್ಸು ಮಾಡಲಿಲ್ಲ. ಎರಡೂ ಇನ್ನೂ ಬೆಳಿಗೆಯ ವಯಸ್ಸಿನಲ್ಲಿವೆ. ಪರಸ್ಪರರ ಕೈಯಲ್ಲಿ ಕೈಹಾಕಿ ಎರಡೂ ಬೆಳೆಯಬೇಕು.

ಮುಂದೆ ಒಂದೂವರೆ ವರ್ಷಗಳ ನಂತರ ಹಿಂದುಸ್ತಾನಕ್ಕೆ ಮರಳಿ ಬಂದಾಗ, ಸಂಪೂರ್ಣವಾಗಿ ಬಾಳಿನಿಂದ ದೂರಾದಂತೆ ಕಂಡರು. ಪಾಶ್ಚಾತ್ಯರ ಸಾಮ್ರಾಜ್ಯಲಾಲಸೆಯ ಪಾಶವೀ ಸ್ವರೂಪದ ಕ್ರೌರ್ಯವನ್ನು ಮುಸುಕು ತೆರೆದು ನೋಡಿದ ಅವರ ಹೃದಯದಿಂದ ಹಿಂಸೆ ತೊಲಗಿ

ಹೋಗಿತ್ತು. ತಮ್ಮ ಪ್ರಥಮ ಯಾತ್ರೆಯಲ್ಲಿ ಅಮೇರಿಕೆ ಮತ್ತು ಯುರೋಪಗಳ ತೋರಿಕೆಯ ಪ್ರಜಾಸತ್ತೆಯ ಶಕ್ತಿಸಂಘಟನೆಗಳಿಗೆ ತಾವು ಮರುಳಾಗಿದ್ದನ್ನು ಅವರು ಅರಿತರು. ಈ ಸಲ ಧನದಾಶೆ, ರಾಕ್ಷಸೀ ಮಹತ್ವಾಕಾಂಕ್ಷೆಗಳು ತಮ್ಮ ಕೈ ಮೇಲಾಗಬೇಕೆಂದು ಉನ್ಮತ್ತ ಅಹಮ ಹಮಿಕೆಯಿಂದ ಸ್ಪರ್ಧೆ ಹೂಡಿ ಪೈಶಾಚಿಕ ವಿಜಯವನ್ನು ಸಂಪಾದಿಸ ಹತ್ತಿರುವುದನ್ನು ಅವರು ಮನಗಂಡರು. ಮಹಾಬಲಾಢ್ಯವಾದ ಒಂದು ಸಂಘಟನೆಯ ಬುದ್ಧಿ ಸಾಮರ್ಥ್ಯವನ್ನು ಗೌರವಿಸುವುದನ್ನು ಅವರು ಬಲ್ಲರು......... "ಆದರೆ ತೋಳಗಳ ತಂಡದಲ್ಲಿ ಸೌಂದರ್ಯವೆಲ್ಲಿಯದು?"

"ಪಾಶ್ಚಿಮಾತ್ಯ ಜೀವನವೆಂದರೆ ನರಕಸಮವಾಗಿ ಕಾಣುತ್ತದೆ" ಎಂದು ಕಣ್ಣಾರೆ ಕಂಡವರೊಬ್ಬರು ನುಡಿದಿರುವರು.

ಭೌತಿಕ ವೈಭವದಿಂದ ವಿವೇಕಾನಂದರು ಮೋಸಹೋಗದಂತಾದರು. ಮೇರೆ ಮೀರಿ ಹುಚ್ಚೆದ್ದು ಹರಿಯುವ ಆ ಶಕ್ತ್ಯುತ್ಸಾಹಗಳ ಹೊಳೆಯ ತಳದಲ್ಲಿ ಅದೆಂಥ ಬೇಸರ, ಅದೆಂಥ ಆಳವಾದ ದುಃಖ ಹುದುಗಿದೆಯೆಂಬುದನ್ನು ಅವರು ಅರಿತರು. ಮೇಲೆ ಮೇಲೆ ಮೈದೋರುವ ವಿಕಾರವಾದ ನಗೆಯ ಮರೆಯಲ್ಲಿ ಆಳವಾದ ಯಾತನೆ ಹುದುಗಿರುವುದನ್ನು ಅವರು ಕಂಡರು. ನಿವೇದಿತೆಗೆ ಅವರು ಅಂದರು:

" ಪಾಶ್ಚಿಮಾತ್ಯರ ಸಮಾಜಜೀವನವೆಂದರೆ ಮೇಲೆ ಮೇಲೆ ದೊಡ್ಡದಾದ ನಗೆಯ ನಾದ. ತಳ ಸೋಸಿ ನೋಡಿದರೆ ಅಲ್ಲಿ ಕಾಣುವುದೇನು ? ಕರುಣ ಕೂಗು. ಕೊನೆಗೆ ಬಿಕ್ಕಿ ಬಿಕ್ಕಿ ಅಳುವುದೇ ಅದರ ಹಣೇಬರಹ. ಕುಚೇಷ್ಟೆ, ಪರಿವೆಯಿಲ್ಲದ ಪರಿಹಾಸ, ಇವೆಲ್ಲ ಹೊರಹೊರಗೆ ಮಾತ್ರ ಕಣ್ಣಿಗೆ ಕಾಣುತ್ತವೆ. ಒಳಹೊಕ್ಕು ನೋಡಿದರೆ ಕಾಣುವುದು ದುರಂತದ ದಟ್ಟ ಕಗ್ಗತ್ತಲೆ !........ ಇಲ್ಲಿ ( ಹಿಂದುಸ್ತಾನದಲ್ಲಿ ) ಮೇಲೆ ಮೇಲೆ ದುಃಖವಿಷಾದಗಳ ಮೋಡ ಮೂಡಿದರೂ ಒಳಒಳಗೆ ನಿಶ್ಚಿಂತೆ ಮತ್ತು ಉಲ್ಲಾಸ."

ಪ್ರವಾದಿಯ ಈ ಪ್ರಾತಿಭ ದೃಷ್ಟಿ ಅವರಿಗೆ ಬಂದುದೆಂತು ? ಹೊರ

ದೊಗಲನ್ನು ಭೇದಿಸಿ ಪಶ್ಚಿಮದ ಹೃದಯಕ್ಕೆ ಹತ್ತಿ ಕೊರೆಯುತ್ತಿರುವ ಹುಳವನ್ನು ಅವರ ಗರುಡದೃಷ್ಟಿ ಎಲ್ಲಿ ಮತ್ತು ಹೇಗೆ ಕಂಡಿತು? ಪಾಶ್ಚಾತ್ಯರ ವೈಭವದ ಬಾಹ್ಯಾಡಂಬರವನ್ನು ಸಹ ಒಳಹೊಕ್ಕು ಮುಂದೆ ಬರಲಿರುವ ದ್ವೇಷ ಮತ್ತು ಯಾತನೆಗಳ ಪ್ರಳಯಕಾಲವನ್ನು ಯುದ್ಧ ಮತ್ತು ಕ್ರಾಂತಿಗಳ ಕರಾಲ ರಾಕ್ಷಸನನ್ನು ಅವರ ದಿವ್ಯದೃಷ್ಟಿ ಕಂಡುದೆಂತು? * ಯಾರೂ ಅರಿಯರು!

ದ್ವಿತೀಯ ಯಾತ್ರೆಯ ವೃತ್ತಾಂತ ಹರಕುಮುರುಕಾಗಿ ಇಡಲಾಗಿದೆ. ಈ ಸಲ ಅವರ ಜೊತೆಯಲ್ಲಿ ಗುಡ್ವಿನ್ ಇರಲಿಲ್ಲ. ಒಂದೆರಡು ವೈಯಕ್ತಿಕ ಪತ್ರಗಳ ಹೊರತಾಗಿ (ಮಿಸ್. ಮ್ಯಾಕ್ಲಿಯಾಡ್ ಇವಳಿಗೆ ಬರೆದುದು ಎಲ್ಲ ಪತ್ರಗಳಲ್ಲಿ ಅತ್ಯಂತ ಸುಂದರವಾದುದು) ಅವರು ಮಾಡಿದ ಪ್ರವಾಸದ ಅಥವಾ ಕೈಕೊಂಡ ಕಾರ್ಯಗಳ ವಿವರಗಳೇ ನಮಗೆ ತಿಳಿಯದಿದ್ದುದು ನಿಜವಾಗಿಯೂ ಶೋಚನೀಯವು.

* ೧೮೯೫ರ ಪ್ರಥಮ ಯಾತ್ರೆಯಲ್ಲಿ ಸಹ ವಿವೇಕಾನಂದರು ಪಶ್ಚಿಮದ ಭಾವೀ ದುರಂತವನ್ನು ಕಂಡು ಹಿಡಿದಿದ್ದರೆಂದು ಭಗಿನೀ ಕ್ರಿಸ್ಟಿನ್ ಇವಳ ಅಪ್ರಕಾಶಿತ ಜೀವನಸ್ಮೃತಿಯಿಂದ ತಿಳಿಯುತ್ತದೆ:" ಭಯಾನಕವಾದ ಒಂದು ಜ್ವಾಲಾಮುಖಿಯ ತುದಿಯ ಮೇಲೆ ನಿಂತಿದೆ ಯುರೋಪ್. ಆಧ್ಯಾತ್ಮದ ಮಹಾಪೂರದಿಂದ ಬೆಂಕಿಯನ್ನು ನಂದಿಸದಿದ್ದರೆ ಅದು ಸಿಡಿದು ಹಾಹಾಕಾರವಾಗುವುದು!" ವಿವೇಕಾನಂದರ ಭವ್ಯ ಭವಿಷ್ಯದ ಮತ್ತೊಂದು ಉದಾಹರಣೆಯನ್ನು ಭಗಿನಿ ಕ್ರಿಸ್ಟಿನ್ ಕೊಟ್ಟಿರುವಳು:

" ಮೂವತ್ತೆರಡು ವರ್ಷ ಮುಂಚೆ (೧೮೯೬ ರಲ್ಲಿ) ಅವರು ನನಗೆ ಹೇಳಿದರು: 'ನವಯುಗದ ಹೊಸಗಾಳಿಯನ್ನು ಬೀಸುವ ಮುಂದಿನ ಆಂದೋಲನ ರಶಿಯಾ ಮತ್ತು ಚೀನದಿಂದ ಹೊರಬೀಳಬಹುದು.... ....... ಪ್ರಪಂಚವು ಈಗ ಮೂರನೆಯ ಯುಗದಲ್ಲಿ ವೈಶ್ಯನ ಸತ್ತೆಗೆ ಅಧೀನವಾಗಿದೆ. ನಾಲ್ಕನೆಯ ಯುಗವು ಶೂದ್ರನ ಸತ್ತೆಯ ಕೆಳಗೆ" (ಪ್ರೊಲೆಟೆರಿಯಟ್, ಶೂದ್ರ, ಅಂದರೆ ಶ್ರಮಜೀವಿಗಳ ಸತ್ತೆ).

ಲಂಡನ್‌ದಲ್ಲಿಯೇ ಮುಂದಿನ ಪ್ರವಾಸದ ಯೋಜನೆಯನ್ನು ಬದಲಿಸಿ ಅಲ್ಲಿಂದ ಅವರು ಅಮೇರಿಕೆಗೆ ಹೋದರು. ಅಲ್ಲಿ ಒಂದು ವರ್ಷದ ವರೆಗೆ ಇದ್ದರು. ಅಭೇದಾನಂದರ ವೇದಾಂತಕಾರ್ಯ ಭರದಿಂದ ಸಾಗಿದುದನ್ನು ಕಂಡರು. ನ್ಯೂಯಾರ್ಕದ ಹತ್ತರ ಮೊಂಟ್ ಕ್ಲೇರ್ ಎಂಬಲ್ಲಿ ತುರೀಯಾನಂದರನ್ನು ಇಟ್ಟರು ತಮ್ಮ ಆರೋಗ್ಯ ಸುಧಾರಣೆಗಾಗಿ ಕ್ಯಾಲಿಫೋರ್ನಿಯಾಕ್ಕೆ ಹೋದರು. ಕೆಲವು ತಿಂಗಳು ಅವರ ಪ್ರಕೃತಿ ಚೆನ್ನಾಗಿ ಸುಧಾರಿಸಿತು. ಅಲ್ಲಿ ಅವರು ಹಲವು ಉಪನ್ಯಾಸಗಳನ್ನು ಕೊಟ್ಟರು ಸ್ಯಾನ್‌ಫ್ರಾನ್ಸಿಸ್ಕೊ, ಓಕ್‌ಲ್ಯಾಂಡ್ ಮತ್ತು ಆಲ್‌ಮೇಡಾ ಎಂಬಲ್ಲಿ ಹೊಸ ವೇದಾಂತಕೇಂದ್ರಗಳನ್ನು ಸ್ಥಾಪಿಸಿದರು. ಸ್ಯಾಂಟಾ ಕ್ಲೇರಾ ಎಂಬಲ್ಲಿ ನೂರಾಅರವತ್ತು ಎಕರೆ ಅರಣ್ಯ ಭೂಮಿ ಅವರಿಗೆ ಕಾಣಿಕೆಯಾಗಿ ಸಿಕ್ಕಿತು. ಅಲ್ಲಿ ಒಂದು ಆಶ್ರಮವನ್ನು ಸ್ಥಾಪಿಸಿದರು. ಆ ಆಶ್ರಮದಲ್ಲಿ ಕೆಲ ವಿದ್ಯಾರ್ಥಿಗಳು ಬ್ರಹ್ಮಚರ್ಯ ಜೀವನವನ್ನು ಅಂಗೀಕರಿಸಿ ತುರೀಯಾನಂದರಿಂದ ವೇದಾಂತಪಾಠ ಹೇಳಿಸಿಕೊಳ್ಳಹತ್ತಿದರು. ನ್ಯೂಯಾರ್ಕದಲ್ಲಿ ಹಿಂದೂ ಸ್ತ್ರೀಯರ ಆದರ್ಶಗಳ ಮತ್ತು ಪ್ರಾಚೀನ ಕಲೆಗಳ ವಿಷಯವಾಗಿ ನಿವೇದಿತೆ ಉಪನ್ಯಾಸ ಕೊಟ್ಟಳು. ಸಣ್ಣದಾದರೂ ಆರಿಸಿ ತೆಗೆದ ಆ ರಾಮಕೃಷ್ಣರ ಗುಂಪು ಕಾರ್ಯವನ್ನು ಒಳ್ಳೇ ಭರದಿಂದ ಸಾಗಿಸಿತ್ತು. ಕಾರ್ಯ ಮುಂದರಿಯಿತು. ವಿಚಾರಗಳು ವಿಶಾಲವಾಗಿ ಹಬ್ಬಿದವು.

ಆದರೆ ಅವರ ಮುಂದಾಳು ಮುಕ್ಕಾಲುಪಾಲು ಈ ಲೋಕದ ಸಂಬಂಧವನ್ನು ಹರಿದುಕೊಂಡಿದ್ದರು. ಆ ಮಹಾ ಅಶ್ವತ್ಥವೃಕ್ಷದ ಸುತ್ತು ನೆಳಲು ಹಬ್ಬುತ್ತಿತ್ತು........ಅದು ನೆಳಲೋ........ಅಥವಾ ಬೇರೊಂದು ಬೆಳಕಿನ ಪ್ರತಿಬಿಂಬವೋ ? ನಮ್ಮ ಸೂರ್ಯನ ನೆಳಲು ಮಾತ್ರ ಅಲ್ಲ ಅದು........

"ನನ್ನ ಕರ್ಮ ಚಿರಕಾಲ ಮುಗಿದು ಹೋಗಲೆಂದು ಪ್ರಾರ್ಥಿಸು. ನನ್ನ ಆತ್ಮವೆಲ್ಲ ಮಾತೆಯಲ್ಲಿ ಲೀನವಾಗಲೆಂದು ಪ್ರಾರ್ಥಿಸು. ನನ್ನ

ಬುದ್ಧಿ ಸರಿಯಾಗಿದೆ. ಶರೀರದ ವಿಶ್ರಾಂತಿಗಿಂತಲೂ ಆತ್ಮದ ವಿಶ್ರಾಂತಿ ನನಗೆ ಹೆಚ್ಚಾಗಿ ಬೇಕೆಂದು ಅನಿಸಹತ್ತಿದೆ. ಹೋರಾಟಗಳಲ್ಲಿ ಸೋತು ದಾಯಿತು. ಗೆದ್ದುದಾಯಿತು. ನನ್ನದೆನ್ನುವುದನ್ನೆಲ್ಲ ಗಂಟು ಕಟ್ಟಿ ಆ ಮಹಾತಾರಕೇಶ್ವರನಿಗಾಗಿ ಕಾದಿಹೆನು. ಶಿವ ! ಶಿವ ! ನನ್ನ ದೋಣಿ ಯನ್ನು ಆಚೆಯ ದಂಡೆಗೆ ತಲ್ಪಿಸು !........ದಕ್ಷಿಣೇಶ್ವರದ ಆಲದ ಮರದ ಕೆಳಗೆ ಶ್ರೀರಾಮಕೃಷ್ಣರ ಆಶ್ಚರ್ಯಕರ ಮಾತುಗಳನ್ನು ಚಕಿ ತನಾಗಿ ಕೇಳುತ್ತ ಕುಳಿತಿರುವ ಬಾಲಕ ನಾನು. ಅದೇ ನನ್ನ ನಿಜ ಸ್ವಭಾವ. ಈ ಕಾರ್ಯ, ಈ ಆಂದೋಲನ, ಈ ಕಲ್ಯಾಣ, ಈ ಸೇವೆ ಇವೆಲ್ಲ ನನ್ನ ಮೇಲೆ ಹೇರಲಾದ ಹೊರೆ........ಅವರ ಕೂಗು ಮತ್ತೆ ಕೇಳುತ್ತಲಿದೆ. ನನ್ನ ಆತ್ಮವನ್ನು ಕಂಪಿಸಿದ ಅದೋ ಆ ಚಿರಪರಿಚಿತ ಕೂಗು. ಬಂಧನ ಬಿರಿದು ಬೀಳುತ್ತಿವೆ. ನಲ್ಮೆ ನಿರ್ಜೀವವಾಗುತ್ತಿದೆ. ಕರ್ಮ ಸಪ್ಪೆಯಾಗುತ್ತಿದೆ. ಬಾಳಿನ ಬೆಳಕು ಬಯಲಾಗುತ್ತಿದೆ. ನನ್ನ ಗುರುವಿನ ಕೂಗು ಮಾತ್ರ ಕಿವಿಯ ಮೇಲೆ ಅಪ್ಪಳಿಸುತ್ತಿದೆ........ 'ಬಿದ್ದುದೆಲ್ಲ ಬಿದ್ದಿರಲಿ ! ಹೋದದ್ದೆಲ್ಲ ಹೋಗಲಿ ! ಬಾ! ನನ್ನ ಬೆನ್ನು ಹತ್ತು !'........ಬಂದೆ ! ನನ್ನ ಪ್ರೀತಿಯ ಪ್ರಭೋ ! ಬಂದೆ ! ನನ್ನೆ ದುರಿಗೆ ನಿರ್ವಾಣ ಹರವಿ ನಿಂತಿದೆ ! ಅದೇ ಆ ಶಾಂತಿಸಾಗರ !— ಒಂದಾದರೂ ತೆರೆಯಿಲ್ಲ— ಒಂದಾದರೂ ಅಲೆಯಿಲ್ಲ !........ನಾನು ಹುಟ್ಟಿದೆ !– ಸಂತೋಷ ! ಕಷ್ಟಪಟ್ಟೆ !— ಸಂತೋಷ ! ಈಗ ಶಾಂತಿ ಯನ್ನು ಸೇರುತ್ತಿರುವೆನು !— ಸಂತೋಷ ! ಹಿಂದೆ ಯಾರನ್ನೂ ಬಂ ಧನದಲ್ಲಿ ಸಿಲುಕಿಸಲಿಲ್ಲ. ನನ್ನೊಂದಿಗೆ ಯಾವ ಬಂಧನವೂ ಬರು ತ್ತಿಲ್ಲ— ಆ ಪುರಾಣ ಪುರುಷ ಹೋದನು ! ಕೊನೆವರೆಗೂ ಹೋಗಿ ಯೇ ಬಿಟ್ಟನು ! ಆ ದಾರಿ ತೋರುವ ಗುರು— ಮುಂದಾಳು— ಮುಂದೆ ಹೋಗಿರುವನು !........"

ಕ್ಯಾಲಿಫೋರ್ನಿಯಾದ ಆ ಅದ್ಭುತವಾಗಿ ಸೊಗಸಾದ ಹವೆ— ಭವ್ಯ ವೈಭವಶಾಲಿಯಾದ ಭಾಸ್ಕರ— ಆ ರಮಣೀಯ ವಸಂತವನಶ್ರೀ—

ಆ ಮಧ್ಯದಲ್ಲಿ ಅವರ ಬಲಿಷ್ಠ ಇಚ್ಛಾಶಕ್ತಿ ನಿರಿಚ್ಛವಾಯಿತು. ದಣಿದು, ಕುಸಿದು, ಅವರ ದೇಹ, ಅವರ ಆತ್ಮ ಕನಸಿನಲ್ಲಿ ತೇಲಿ ಹೋದವು.....

"ಇದೆಂಥ ಅದ್ಭುತ ಶಾಂತಿ !— ಪ್ರಶಾಂತಿ— ! ಕೈಕಾಲು ಅಲುಗಿದರೆ ಸಹ ಈ ಶಾಂತಿಗೆ ಭಂಗ ಬಂದೀತೇನೋ ?........ ಇದೇನು ಶಾಂತಿಯೋ ? ವಿಶ್ವವನ್ನು ಮೋಹನಿದ್ರೆಯಲ್ಲಿ ಮಾಟಗೈದ ಮಾಯೆಯೋ ?— ನನ್ನ ಕಾರ್ಯದ ಮರೆಯಲ್ಲಿ ಮಹತ್ವಾಕಾಂಕ್ಷೆ ಇತ್ತು. ನನ್ನ ಪ್ರೀತಿಯ ಹಿಂದೆ ವ್ಯಕ್ತಿಮಹತ್ವವಿತ್ತು. ನನ್ನ ನಿರ್ಮಲತೆಯ ಹಿಂದೆ ಹೆದರಿಕೆ ಇತ್ತು ! ಅನ್ಯರಿಗೆ ಹಾದಿ ತೋರಿಸುತ್ತಿರುವಾಗ ಅದರ ಹಿಂದೆ ಅಧಿಕಾರದ ಲಾಲಸೆ ಇತ್ತು. ಅವೆಲ್ಲ ಮಾಯವಾಗುತ್ತಿವೆ !.... ನಾನು ಸೆಳವಿಗೆ ಬಿದ್ದಿರುವೆನು........ಬಂದೆ ತಾಯೀ, ಬಂದೆ, ಬಂದು ನಿನ್ನ ಬೆಚ್ಚನ್ನ ಎದೆಯನ್ನು ಅವಚಿಕೊಂಡು ಬಿಡುವೆ........ನೀನು ಕರೆದೊಯ್ದಲ್ಲಿಗೆ ತೇಲಿ ಬರುವೆ— ಆ ನಿಶ್ಶಬ್ದ ಅಜ್ಞಾತ ಅದ್ಭುತ ಲೋಕಕ್ಕೆ— ನಾನು ಬರುವೆ. ನಟನಾಗಿ ಅಲ್ಲ, ನಿರೀಕ್ಷಕನೆಂದು ! ಆ:! ಇದೆಂಥ ಶಾಂತಿ ! ನನ್ನ ಹೃದಯದ ಆಳದಿಂದ ಎಲ್ಲಿಂದಲೋ ದೂರ ದೂ........ರದಿಂದ ವಿಚಾರತರಂಗಗಳು ಎದ್ದೆದ್ದು ತೇಲಿ ಬರುತ್ತಿರುವಂತೆ ಭಾಸವಾಗುತ್ತದೆ ! ದೂರಿಂದ ಮಂದವಾಗಿ ಕೇಳುತ್ತಿರುವ ಪಿಸುಮಾತಿನಂತೆ ಅವು ತೋರುತ್ತಿವೆ. ಶಾಂತಿ........! ಎಲ್ಲದರ ಮೇಲೂ ಶಾಂತಿ !........ಮಧುರ ಮಧುರವಾದ ಶಾಂತಿ !........ ಭೀತಿಯಿಲ್ಲ !.... ಪ್ರೀತಿಯಿಲ್ಲ !— ಭಾವನೆಯಿಲ್ಲ........ ಎಲ್ಲವೂ ಬರೀ ನೆಳಲಿನಂತೆ ಭಾಸವಾಗುವಂತಹ ಶಾಂತಿ !— ನಿದ್ದೆ ಹೋಗುವ ಮುಂಚೆ ಕೆಲ ಕ್ಷಣ ತೋರುವ ಶಾಂತಿ !........ ಬಂದೆ ! ಪ್ರಭೋ ! ವಿಶ್ವ....ಇದೆ ! ಸುಂದರವೂ ಅಲ್ಲ ! ಕುರೂಪವೂ ಅಲ್ಲ ! ವಿಕಾರಗಳಿಗೆ ಆಸ್ಪದವನ್ನೀಯದ ಸಂವೇದನ ! ಆಃ ! ಅದೆಂಥ ಸೊಗಸು ! ನನ್ನ ದೇಹ ಮೊದಲಾಗಿ ಎಲ್ಲವೂ ಬೆಳಕಿನಲ್ಲಿ ಬಯಲಾಗುತ್ತಿವೆ ! ಎಲ್ಲವೂ ಚೆಂದವಾಗಿ ಅಂದವಾಗಿ ಕಾಣುತ್ತಿವೆ ! ಸತ್ಯಂ ! ಶಿವಂ ! ಸುಂದರಂ ! ಓಂ ಸಚ್ಚಿದಾನಂದ!

ಓಂ ತತ್ಸತ್ !"

ಬಿಲ್ಲಿನಿಂದ ನೆಗೆದ ಬಾಣ ಮೊದಲ ನೆಗೆತದ ಬಲದಿಂದ ಇನ್ನೂ ಹಾರುತ್ತಿದೆ. ಆದರೆ ಹಾರಹಾರಾಡುತ್ತಲೆ ಅದರ ಬಲ ಕುಸಿಯುತ್ತಿದೆ. ಮೆಲ್ಲನೆ ತೇಲುತ್ತ ಇನ್ನು ಮೇಲೆ ನೆಲಕ್ಕೆ ಬೀಳುವ ಹೊತ್ತು ಬಂದಿತೆಂದು ಅದಕ್ಕೆ ತಿಳಿಯಿತು........ಬಾಣ ಬಿಟ್ಟ ದೈವಸಂಕಲ್ಪದ ಪ್ರೇರಣೆ ತೀರುತ್ತಲೆ ಆಗುವ ಅಧಃಪತನದ ಕ್ಷಣ — 'ನಿದ್ದೆ ಹೋಗುವ ಮುಂಚೆ ಕೆಲ ಕ್ಷಣ ಮುಂಚೆ'— ಅದೆಷ್ಟು ಸವಿಯಾದುದು ! ಬಿಲ್ಲಿನ ಬಂಧನವಿಲ್ಲದೆ ಗುರಿಯ ಆಸೆಯಿಲ್ಲದೆ ಬಾಣ ಆಗಸದಲ್ಲಿ ತೇಲುತಲಿತ್ತು....!

ವಿವೇಕಾನಂದರ ಬಾಣ ತನ್ನ ಹಾದಿಯ ಕೊನೆಯನ್ನು ಸಮೀಪಿಸಹತ್ತಿತು. ೧೯೦೦ರ ಜುಲೈ ೨೦ನೇ ದಿನ ಅವರು ಸಮುದ್ರ ದಾಟಿದರು. ಪ್ಯಾರಿಸಕ್ಕೆ ಹೋದರು. ಅಲ್ಲಿ ಧರ್ಮಗಳ ಇತಿಹಾಸದ ವಿಷಯವಾಗಿ ಕೂಡಲಿರುವ ಸಭೆಗೆ ಬರಲು ಅವರಿಗೆ ಆಮಂತ್ರಣ ಬಂದಿತ್ತು. ಚಿಕ್ಯಾಗೋದಲ್ಲಿದ್ದಂತೆ ಇಲ್ಲಿ ಧರ್ಮಸಮ್ಮೇಲನವಿರಲಿಲ್ಲ. ಅದು ಕೇವಲ ಐತಿಹಾಸಿಕ ಮತ್ತು ಶಾಸ್ತ್ರೀಯ ಸಮ್ಮೇಲನ. ಬಾಳಿನ ಹೋರಾಟ ಮುಗಿಸಬೇಕೆನ್ನುವ ಹವಣಿಕೆಯ ಆ ಕಾಲದಲ್ಲಿ ಅವರ ಆತ್ಮ ಸಮ್ಮೇಲನದ ಸಂಭ್ರಮಕ್ಕೆ ಹಾತೊರೆದಿರಲಿಲ್ಲ ನಿಜ. ಆದರೆ ಅವರಿಗೆ ಅದರಲ್ಲಿ ಬೌದ್ಧಿಕ ಆಸಕ್ತಿ ಮಾತ್ರ ಇರಬಹುದಾಗಿತ್ತು.

ವೈದಿಕ ಧರ್ಮ ನಿಸರ್ಗದ ಉಪಾಸನೆಯಿಂದ ಬಂದುದೋ ಹೇಗೆ ಎಂಬ ಪ್ರಶ್ನೆಯ ಚರ್ಚೆಯನ್ನು ಸಮ್ಮೇಲನದಲ್ಲಿ ಅವರಿಗೆ ಒಪ್ಪಿಸಲಾಗಿತ್ತು. ಆಪೆರ್ಟ್ ಎನ್ನುವವರ ಕೂಡ ವಾದ ಮಾಡಿದರು. ಹಿಂದೂ ಮತ್ತು ಬೌದ್ಧ ಧರ್ಮಗಳಿಗೆ ಒಂದೇ ತಳಹದಿಯಾದ ವೇದಗಳ ಮೇಲೆ ಮಾತನಾಡಿದರು. ಬೌದ್ಧ ಧರ್ಮಕ್ಕಿಂತ ಗೀತೆಯ ಮತ್ತು ಕೃಷ್ಣನ ಪ್ರಾಚೀನತೆಯನ್ನು ಪ್ರತಿಪಾದಿಸಿದರು. ಭಾರತೀಯ ಕಲೆ, ನಾಟ್ಯಕಲೆ, ಮತ್ತು ವಿಜ್ಞಾನ ಇವುಗಳ ಮೇಲೆ ಗ್ರೀಕರ ಪ್ರಭಾವ ಮೂಡಿದ್ದಿತೆಂಬ ವಾದವನ್ನು ಖಂಡಿಸಿದರು.

ಆದರೆ ಫ್ರೆಂಚ್ ಸಂಸ್ಕೃತಿಯ ನಿರೀಕ್ಷಣೆಯಲ್ಲಿ ಬಹಳ ಮಟ್ಟಿಗೆ ಅವರು ಕಾಲ ಕಳೆದರು. ಪ್ಯಾರಿಸ್ ನಗರದ ಬೌದ್ಧಿಕ ಮತ್ತು ಸಾಮಾಜಿಕ ಮಹತ್ವವನ್ನು ಕಂಡು ಅವರು ಚಕಿತರಾದರು. ಯುರೋಪದ ಸಂಸ್ಕೃತಿಗೆ ಪ್ಯಾರಿಸ್ ಕೇಂದ್ರವೆಂದೂ, ಉಗಮವೆಂದೂ, ಅಲ್ಲಿ ಪಾಶ್ಚಿಮಾತ್ಯ ನೀತಿಶಾಸ್ತ್ರ ಸಮಾಜಶಾಸ್ತ್ರಗಳ ರಚನೆಯಾಗುತ್ತಿದೆಂದೂ, ಅಲ್ಲಿಯ ವಿದ್ಯಾಪೀಠವು ಮಾದರಿಯ ವಿದ್ಯಾಪೀಠವೆಂದೂ ಅವರು ಹಿಂದುಸ್ತಾನಕ್ಕೆ ಪ್ರಕಟನೆಗಾಗಿ ಕಳಿಸಿದ ಒಂದು ಲೇಖದಲ್ಲಿ ಬರೆದರು: "ಪ್ಯಾರಿಸ್ ಸ್ವಾತಂತ್ರ್ಯದ ತವರ್ಮನೆ. ಅದು ಯುರೋಪದಲ್ಲಿ ನವಜೀವನವನ್ನು ತುಂಬಿದೆ."

ಶ್ರೀಮತಿ ಓಲೆ ಬುಲ್ ಮತ್ತು ಭಗಿನೀ ನಿವೇದಿತಾ ಇವರ ಜೊತೆಯಲ್ಲಿ ಲೆನಿಯನ್ ಎಂಬಲ್ಲಿ ಕೆಲ ಕಾಲ ಕಳೆದರು. ಸೇಂಟ್ ಮಾಯ್‌ಕೇಲ್ ದಿನ ಮಾಂಟ ಸೇಂಟ್ ಮಾಯ್‌ಕೇಲಕ್ಕೆ ಹೋಗಿದ್ದರು. ಹಿಂದೂ ಮತ್ತು ರೋಮನ್ ಕ್ಯಾಥಾಲಿಕ್ ಧರ್ಮಗಳಲ್ಲಿ ಬಹಳ ಸಾಮ್ಯವಿದೆಂದು ಅವರಿಗೆ ಹೆಚ್ಚೆಚ್ಚು ಮನವರಿಕೆಯಾಗಹತ್ತಿತು. ಯುರೋಪದ ಜನಾಂಗಗಳಲ್ಲಿ ಏಶಿಯದ ರಕ್ತ ಹೆಚ್ಚುಕಡಿಮೆ ಪ್ರಮಾಣಗಳಲ್ಲಿ ಬೆರೆತಿದೆಂದು ಅವರು ಕಂಡು ಹಿಡಿದರು. ಯುರೋಪ್ ಏಶಿಯಾಗಳಲ್ಲಿ ಮೂಲತಃ ನೈಸರ್ಗಿಕ ಭೇದವಿದೆಯೆಂಬ ಮಾತನ್ನು ಅವರು ಎಂದಿಗೂ ಒಪ್ಪಲಿಲ್ಲ. ಯುರೋಪ್ ಏಶಿಯಾಗಳ ನಿಕಟ ಸಂಬಂಧದಿಂದ ಯುರೋಪದಲ್ಲಿ ಸಂಸ್ಕೃತಿಯ ನವಯುಗ ಮೈದೋರುವುದೆಂದು ಮತ್ತು ಪೂರ್ವದಿಂದ ಪಶ್ಚಿಮವು ಮತ್ತೆ ಆಧ್ಯಾತ್ಮಿಕ ವಿಚಾರಗಳ ಹೊಸ ಭಾಂಡಾರವನ್ನು ಪಡೆಯುವುದೆಂದು ಅವರು ಮನಗಂಡಿದ್ದರು.

ವ್ಹಿಯೆನ್ನಾ ಕಾನ್‌ಸ್ಟಾಂಟಿನೋಪಲ್ ಮಾರ್ಗವಾಗಿ ಅವರು ಅಕ್ಟೋಬರ ೨೪ನೇ ದಿನ ಪೂರ್ವಕ್ಕೆ ತೆರಳಿದರು. ಪ್ಯಾರಿಸ್‌ದ ನಂತರ ಯಾವ ಪಟ್ಟಣವೂ ಅವರ ಮನಸ್ಸನ್ನು ಸೆಳೆಯಲಿಲ್ಲ. ಯುರೋಪದಲ್ಲಿ ಅಲೆಯುವಾಗ ಅವರಲ್ಲಿ ತಿರಸ್ಕಾರದ ಮತ್ತು ಬೇಸರದ ಭಾವನೆ

ವೈದೋರಿದವು. ಎಲ್ಲೆಲ್ಲೂ ಯುದ್ಧದ ನಾತವು ಇಡಿಗಿತ್ತು. ಯುದ್ಧದ ದುರ್ಗಂಧ ಅವರಿಗೆ ಅಸಹ್ಯವಾಯಿತು. "ಅಖಂಡ ಯುರೋಪ್ ಖಂಡವೆಲ್ಲ ಒಂದು ಸೇನೆ ತಳವೂರಿದಂತೆ ಕಾಣುತ್ತದೆ" ಎಂದು ಅವರು ನುಡಿದರು.

ಸೂಫೀ ಸಾಧುಗಳ ಕೂಡ ಮಾತನಾಡಲು ಬಾಸ್ಫರಸದಲ್ಲಿ ಕೆಲ ಹೊತ್ತು ತಂಗಿದರು. ಅಥೇನ್ಸ ಮತ್ತು ಎಲ್ಲೂಸಿಸ್‌ಗಳಲ್ಲಿ ಪ್ರಾಚೀನ ಅವಶೇಷಗಳನ್ನು ನೋಡಿದರು. ಕೈರೋದಲ್ಲಿಯ ಪ್ರದರ್ಶನಾಲಯವನ್ನು ಸಂದರ್ಶಿಸಿದರು. ಆದರೂ ಬಾಹ್ಯಪ್ರಪಂಚದಿಂದ ಹೆಚ್ಚೆಚ್ಚು ದೂರಾಗಿ ಧ್ಯಾನಮಗ್ನರಾದಂತೆ ಕಾಣುತ್ತಿದ್ದರು. ಪಶ್ಚಿಮದಲ್ಲಿ ಕೊನೆಯ ಕೆಲ ತಿಂಗಳು ಅವರು ಬಾಹ್ಯ ವಿಷಯಗಳಲ್ಲಿ ಸಂಪೂರ್ಣ ಉದಾಸೀನರಾದಂತೆ ಕಂಡರು, ಎಂದು ನಿವೇದಿತಾ ಅನ್ನುತ್ತಿದ್ದಳು. ವಿಶಾಲತರ ಕ್ಷಿತಿಜಗಳತ್ತ ಅವರ ಆತ್ಮ ಹಾರಿ ಹೋಗುತ್ತಿತ್ತು. ಇಜಿಪ್ತದಲ್ಲಿ ಅವರು ತಮ್ಮ ಅನುಭವದ ಕೊನೆಯ ಪುಟಗಳನ್ನು ತಿರಿವಿ ಹಾಕುತ್ತಿದ್ದಂತೆ ತೋರಿತು.

ಒಮ್ಮಿಂದೊಮ್ಮೆ ಮರಳಿ ಬರಬೇಕೆಂಬ ಕೂಗು ಅವರಿಗೆ ಕೇಳಿಸಿತು. ಒಂದು ದಿನ ಸಹ ತಡೆಯದೆ ಸಿಕ್ಕ ಮೊದಲನೆಯ ಹಡಗವನ್ನೇರಿ ಒಬ್ಬಾನೊಬ್ಬರೆ ಹಿಂದುಸ್ತಾನಕ್ಕೆ ಹೊರಟರು. ಚಿತಾರೋಹಣಕ್ಕಾಗಿ ದೇಹವನ್ನು ತಿರುಗಿ ತಂದರು !

# ೧೧ ನಿರ್ಯಾಣ !

ಅವರ ವೃದ್ಧ ಮತ್ತು ನಂಬಿಗೆಯ ಗೆಳೆಯ ಅವರಿಗಿಂತ ಮುಂಚೆ ಹೋಗಿದ್ದನು. ಹಿಮಾಲಯದಲ್ಲಿ ತಾನು ಕಟ್ಟಿಸಿದ ಆಶ್ರಮದಲ್ಲಿ ಅಕ್ಟೋಬರ್ ೨೮ನೇ ದಿನ ಶ್ರೀಮಾನ್ ಸೇವ್ಹಿಯರ್ ಮರಣ ಹೊಂದಿದ್ದನು. ಮರಳಿ ಬರುತ್ತಲೆ ವಿವೇಕಾನಂದರು ಈ ಸುದ್ದಿಯನ್ನು ಕೇಳಿದರು. ಆದರೆ ಮರಳಿ ಬರುತ್ತಿರುವಾಗಲೇ ಅವರಿಗೆ ಅದರ ಪೂರ್ವಸೂಚನೆ

ಬಂದಿತ್ತು. ವಿಶ್ರಾಂತಿಗಾಗಿ ಬೇಲೂರಲ್ಲಿ ನಿಲ್ಲದೆ, ಆಶ್ರಮಕ್ಕೆ ತಾವು ಬರುವುದಾಗಿ ಮಾಯಾವತಿಗೆ ತಂತಿ ಕೊಟ್ಟರು.

ವರ್ಷದ ಆ ಭಾಗದಲ್ಲಿ ಹಿಮಾಲಯವನ್ನು ಸೇರುವುದು ಬಲು ದೊಡ್ಡ ಗಂಡಾಂತರೇ ಸರಿ— ವಿವೇಕಾನಂದರಂಥ ಸೂಕ್ಷ್ಮ ಪ್ರಕೃತಿಯಾಗಿದ್ದವರಿಗೆ. ಹಿಮವನ್ನು ತುಳಿಯುತ್ತಲೆ ನಾಲ್ಕು ದಿನ ನಡೆದು ಹೋಗಬೇಕಾಯಿತು. ಆ ವರ್ಷ ಚಳಿಗಾಲ ವಿಶೇಷ ಶೀತವಾಗಿತ್ತು. ಕೂಲಿಗಳ ಮತ್ತು ಉಳಿದ ಜನರ ಹಾದಿ ಕಾಯದೆ ಇಬ್ಬರು ಸನ್ಯಾಸಿಗಳೊಂದಿಗೆ ಸ್ವಾಮಿಯವರು ಹೊರಟೇ ಬಿಟ್ಟರು. ಇವರನ್ನು ಕರೆದೊಯ್ಯಲು ಆಶ್ರಮದಿಂದ ಬಂದ ಒಬ್ಬನು ಹಾದಿಯಲ್ಲಿ ಕೂಡಿದನು. ಆದರೆ ಬೀಳುತ್ತಿರುವ ಆ ಹಿಮದಲ್ಲಿ, ಆ ಮಂಜುಮೋಡಗಳಲ್ಲಿ ಅವರಿಗೆ ನಡೆಯುವುದು ಜಡವಾಯಿತು. ಉಸಿರುಗಟ್ಟಿದಂತೆ ಆಗಹತ್ತಿತು. ಅವರ ಚಿಂತಾಕುಲರಾದ ಜೊತೆಗಾರರು ಒಳ್ಳೇ ಕಷ್ಟದಿಂದ ಅವರನ್ನು ಮಾಯಾವತಿ ಆಶ್ರಮಕ್ಕೆ ಹೊತ್ತೊಯ್ದರು. ೧೯೦೧ರ ಜಾನೇವಾರಿ ೩ನೇ ದಿನ ಮಾಯಾವತಿಯನ್ನು ಮುಟ್ಟಿದರು. ಶ್ರೀಮತಿ ಸೇವ್ಹಿಯರಳನ್ನು ಕಾಣುತ್ತಲೆ ಹರ್ಷಶೋಕಗಳ ಸಮ್ಮಿಶ್ರ ಭಾವನೆಗಳು ಉಕ್ಕಿದವು. ಕೆಲಸ ಮುಗಿದುದನ್ನು ಮತ್ತು ಬೆಟ್ಟದ ತುದಿಯ ಮೇಲೆ ನಲಿಯುವ ಆ ಆಶ್ರಮವನ್ನು ನೋಡಿ ಅವರಿಗೆ ಸಮಾಧಾನ ಸಂತೋಷಗಳಾದವು.

ಆದರೆ ಹದಿನೈದು ದಿನ ಮಾತ್ರ ಅಲ್ಲಿ ಇರಲು ಸಾಧ್ಯವಾಯಿತು. ಉಬ್ಬಸದ ವಿಕಾರದಿಂದ ಉಸಿರುಗಟ್ಟಹತ್ತಿತು- ಕೊಂಚ ಶಾರೀರಿಕ ಶ್ರಮದಿಂದ ಸಹ ಅವರು ದಣಿದು ಸೋತು ಹೋಗುತ್ತಿದ್ದರು. " ಮುಗಿಯಿತು ಈ ದೇಹದ ಅವಸ್ಥೆ!" ಎಂದರು.

ಜಾನೇವಾರಿ ೧೩ನೇ ದಿನ ತಮ್ಮ ಜನ್ಮದಿನವನ್ನು ಪಾಲಿಸಿದರು. ಅವರ ಆತ್ಮ ಮಾತ್ರ ಎಂದಿನಂತೆ ತುಂಬಿ ತುಳುಕುತ್ತಿತ್ತು. ಅವರ ಇಚ್ಛೆಯ ಮೇರೆಗೆ ಆ ಅದ್ವೈತಾಶ್ರಮ ಕೇವಲ ಪರತತ್ವಚಿಂತನೆಗಾಗಿ ಮೀಸಲಾಯಿತು. ಆದರೆ ಅಲ್ಲಿ ಶ್ರೀರಾಮಕೃಷ್ಣರ ಪೂಜೆಗಾಗಿ ಒಂದು

ವಿಶಾಲವಾದ ಪಡಸಾಲೆ ನಿಯೋಜಿಸಲಾಗಿತ್ತು. ಶ್ರೀರಾಮಕೃಷ್ಣರ ವಿಷಯದಲ್ಲಿ ಹಿಂದೆಂದೂ ತೋರದ .ಭಕ್ತಿಯನ್ನು ಆ ಕೊನೆಯ ಕೆಲ ವರ್ಷಗಳಲ್ಲಿ ತೋರಿದ ಆ ಶಿಷ್ಯೋತ್ತಮನು ಈ ಉಪಾಸನೆಯನ್ನು, ಆ ಸ್ಥಾನದಲ್ಲಿ ನಡೆದ ಈ ಅಮಂಗಲವನ್ನು ಕಂಡು ಉರಿದೆದ್ದನು. ಅತ್ಯುಚ್ಚ ಅದ್ವೈತ ವೇದಾಂತದ ಸಾಧನೆಗಾಗಿ ಮೀಸಲಾದ ಆ ಪವಿತ್ರ ಮಂದಿರದಲ್ಲಿ ದ್ವೈತದ ಧಾರ್ಮಿಕ ದೌರ್ಬಲ್ಯಕ್ಕೆ ಅನುವಿಲ್ಲೆಂದು ಅವರು ತಮ್ಮ ಅನುಯಾಯಿಗಳಿಗೆ ಖಂಡಿತವಾಗಿ ಹೇಳಿದರು.

ಅವರನ್ನು ಅಲ್ಲಿಗೆ ಕರೆತಂದ ತಳಮಳ ಈಗ ಅವರನ್ನು ಅಲ್ಲಿಂದ ದೂಡಲಾರಂಭಿಸಿತು. ಏನು ಮಾಡಿದರೂ ಅವರು ಅಲ್ಲಿ ನಿಲ್ಲದಾದರು. ಜಾನೇವಾರೀ ೧೮ನೇ ದಿನ ಮಾಯಾವತಿಯಿಂದ ಹೊರಟು ನಾಲ್ಕು ದಿನ ಹಿಮದ ಜಾರಿಕೆಯಲ್ಲಿ ನಡೆಯುತ್ತ ೨೪ನೇ ದಿನ ಬೇಲೂರ ಮಠವನ್ನು ಸೇರಿದರು.

ಪೂರ್ವಬಂಗಾಲ, ಆಸಾಮು, ಡಾಕಾ, ಶಿಲಾಂಗ ಮುಂತಾದವುಗಳಲ್ಲಿಯ ಪವಿತ್ರ ತೀರ್ಥಗಳಿಗೆ ತಮ್ಮ ಮಾತೋಶ್ರೀಯವರ ಜೊತೆಯಲ್ಲಿ ಯಾತ್ರೆಗಾಗಿ ಹೋಗಿ ದಣಿದು ಮರಳಿ ಬಂದರು. ೧೯೦೨ರ ಆರಂಭದಲ್ಲಿ ಕಾಶಿಗೆ ಕೆಲ ದಿನ ಹೋಗಿ ಬಂದರು. ಇದರ ಹೊರತಾಗಿ ಬೇಲೂರು ಬಿಟ್ಟು ಕದಲಲಿಲ್ಲ. ಅವರ ಜೀವನದ ಮಹಾಯಾತ್ರೆ ಮುಗಿದಿದ್ದಿತು.........

" ಆದರೇನಾಯಿತು ? ಹದಿನೈದು ನೂರು ವರ್ಷ ಸಾಲುವಷ್ಟು ಕೆಲಸ ಮಾಡಿರುತ್ತೇನೆ ! " ಎಂದು ಹೆಮ್ಮೆಯಿಂದ ನುಡಿದರು.

* * * * * *

ಮಠದ ದೊಡ್ಡದೊಂದು ಕೋಣೆಯಲ್ಲಿದ್ದರು. ಅದಕ್ಕೆ ನಾಲ್ಕು ಕಿಡಿಕೆ, ಮೂರು ಬಾಗಿಲು ಬೇಕಾದಷ್ಟು ಗಾಳಿ ಆಡುತ್ತಿತ್ತು.

"ಎದುರಿನಲ್ಲಿ ಹೊಳೆಯುವ ಸೂರ್ಯನ ಬಿಸಿಲಲ್ಲಿ ಕುಣಿಯುತ್ತಿದ್ದಾಳೆ ವಿಶಾಲವಾದ ಭಾಗೀರಥಿ. ಆಗೊಮ್ಮೆ ಈಗೊಮ್ಮೆ ಹರಿದಾಡುವ

ಸರಕಿನ ಡೋಣಿಯು ಹುಟ್ಟುಗಳ ಸಳಸಳಾಟದಿಂದ ನಿಶ್ಶಬ್ದತೆ ಭೇದಿಸಿ ಹೋಗುತ್ತಿದೆ. ಎಲ್ಲವೂ ಹಸಿರು ಮಿರುಗುತ್ತಿವೆ. ಹೊನ್ನಿನಂತೆ ಹೊಳೆಯುತ್ತಿದೆ. ಹುಲ್ಲು ಹಂಸತುಪ್ಪಳದಂತಿದೆ........."

ಹಳ್ಳಿಯ ಬಾಳನ್ನು ಕೈಕೊಂಡರು ವಿವೇಕಾನಂದರು. ತೋಟದಲ್ಲಿ ಮತ್ತು ಗೋದಲಿಯಲ್ಲಿ ಮೈಮುರಿ ದುಡಿದರು. ಶಾಕುಂತಲದಲ್ಲಿಯ ಆಶ್ರಮವಾಸಿಗಳಂತೆ ಅವರ ಸುತ್ತೆಲ್ಲ ಪ್ರೀತಿಯ ಪಶುಮಂಡಲ: ನಾಯಿ 'ಬಾಘಾ', ಆಡು 'ಹಂಸೀ', ಆಡುಮರಿ 'ಮಾತ್ರು', ಎರಳೆ, ಬಕ, ನೀರಗೋಳಿ, ಆಕಳು ಮತ್ತು ಕುರಿ. ಕೊರಳಲ್ಲಿಯ ಕಿರುಗೆಜ್ಜೆಯ ಗಿಲ್‌ಗಿಲ್‌ನಾದ ಬೀರುತ್ತ 'ಮಾತ್ರು' ಅತ್ತಿತ್ತ ನೆಗೆದಾಡುತ್ತಿರಲು ಅವರು ಮಗುವಿನಂತೆ ಅದನ್ನು ಹಿಂಬಾಲಿಸುತ್ತ ಆಟವಾಡುವರು.

"ಮಳೆ ಒಳ್ಳೇ ಕಸುವಿನಿಂದ ಸೆಳೆಯುತ್ತಿದೆ. ಹಗಲೂ ಇರುಳೂ ಮಳೆ! ಮಳೆ! ಮಳೆ! ನದಿಯ ನೀರು ಏರಿ ಬರುತ್ತಿದೆ........ಮಠದಲ್ಲಿ ಮಡುವುಗಟ್ಟಿ ನಿಂತ ನೀರು ಜರಿದು ಹೋಗಲು ಹರಿಯನ್ನು ಕಡಿದು ಬಂದೆ — ನನ್ನ ಭವ್ಯವಾದ ಬಕಪಕ್ಷಿಗೆ ಹರ್ಷವೇ ಹರ್ಷ. ನನ್ನ ಆ ಎರಳೆ ನೆಗೆದಾಡುತ್ತ ಮಠದಿಂದ ಜಾರಿ ಹೋಗಿದೆ........ ದುರ್ದೈವದಿಂದ ನನ್ನ ನೀರಗೋಳಿಯೊಂದು ನಿನ್ನೇ ದಿನ ಸತ್ತು ಹೋಯಿತು....ಮತ್ತೊಂದರ ಗರಿ ಉಚ್ಚುತ್ತಿವೆ........."

ಹೊತ್ತುಗೊತ್ತಿನ ಅರಿವುಪರಿವಿಲ್ಲದೆ ಮನ ಮೆಚ್ಚಿದ ಶಬ್ದ ಪಠಿಸುತ್ತ ಅಥವಾ ಧೀರ ಗಂಭೀರ ಮಧುರವಾದ ದನಿಯಲ್ಲಿ ಹಾಡುತ್ತ ಮಠದಲ್ಲೆಲ್ಲ ಅಲೆದಾಡುವರು.

ಆದರೆ ತಮ್ಮ ಶಾರೀರಿಕ ಯಾತನೆಗಳನ್ನು ಸಹ ಲೆಕ್ಕಿಸದೆ ಕಠೋರವಾದ ಅಚ್ಚುಕಟ್ಟಿನಿಂದ ಎಲ್ಲರಿಗೂ ಮಾರ್ಗದರ್ಶಕವಾದ ಮಠದ ಮಹಂತರಾಗುವುದನ್ನೂ ಅವರು ಬಲ್ಲರು. ಸಾಯುವ ವರೆಗೆ ಪ್ರತಿನಿತ್ಯ ಹೊಸಬರಿಗೆ ವೇದಾಂತಪಾಠಗಳನ್ನು ಧ್ಯಾನಧಾರಣಾದಿಗಳನ್ನು ಕಲಿಸಿದರು. ಕೆಲಸಗಾರರಲ್ಲಿ ಆತ್ಮವಿಶ್ವಾಸ ಹುರುಪು ತುಂಬಿದರು. ಸುವ್ಯ

ವಸ್ಥೆ ಅಚ್ಚುಕಟ್ಟುತನಗಳ ಕಡೆಗೆ ಎಲ್ಲರ ಲಕ್ಷ್ಯವನ್ನು ಸೆಳೆದರು. ಸಾಪ್ತಾಹಿಕ ಕಾರ್ಯಕ್ರಮವನ್ನು ಹಾಕಿಕೊಟ್ಟು ನಿತ್ಯದ ಕೆಲಸಗಳ ಕಡೆಗೆ ಕಣ್ಣಿಟ್ಟು ಆಸ್ಥೆಯಿಂದ ನೋಡಿದರು. ಎಂಥ ಕ್ಷುಲ್ಲಕ ವೈಗಳ್ಳ ತನ ಸಹ ಅವರ ಕಣ್ಣನ್ನು ತಪ್ಪಿಸಲಾರದು. ಗೊತ್ತುಪಡಿಸಿದ ಹೊತ್ತು ಹೊತ್ತಿಗೆ ಮಠದ ಘಂಟೆ ಬಾರಿಸುವುದು. ಬೆಳಗಿನಲ್ಲಿ ನಾಲ್ಕು ಘಂಟೆಗೆ ಎಲ್ಲರೂ ಏಳುವುದು. ಮುಂದೆ ಅರ್ಧ ಘಂಟೆಯಲ್ಲಿ ಸನ್ಯಾಸಿಗಳೆಲ್ಲರೂ ಪ್ರಾರ್ಥನೆಗಾಗಿ ಮಂದಿರದಲ್ಲಿ ಸೇರುವರು. ಅವರು ಮಾತ್ರ ಎಲ್ಲರಿಗಿಂತ ಮುಂಚೆ ಮೂರು ಘಂಟೆಗೆದ್ದು ಪೂಜಾಮಂದಿರಕ್ಕೆ ಹೋಗಿ ಒಂದೇ ಸವನೆ ಎರಡು ಘಂಟೆ ಉತ್ತರಾಭಿಮುಖರಾಗಿ ನಿಶ್ಶಬ್ದ ಧ್ಯಾನದಲ್ಲಿ ಕುಳಿತುಕೊಳ್ಳುವರು. "ಶಿವ, ಶಿವ,...." ಎನ್ನುತ್ತ ಅವರು ಏಳುವ ತನಕ ಯಾರೂ ಅಲ್ಲಾಡುತ್ತಿರಲಿಲ್ಲ. ಪ್ರಶಾಂತವಾದ ಆನಂದವನ್ನು ಬೀರುತ್ತ ಸುತ್ತೆಲ್ಲ ಸುಳಿದಾಡುವರು. ಆ ಆನಂದ ಸುತ್ತೆಲ್ಲ ಸುಂಕ ತಗುಲಿದಂತೆ ಹಬ್ಬುತ್ತಿತ್ತು........

ಒಂದು ದಿನ ಅವರು ಅಕಸ್ಮಾತ್ತಾಗಿ ಬಂದಾಗ ಪೂಜಾಮಂದಿರದಲ್ಲಿ ಇಬ್ಬರೇ ಸನ್ಯಾಸಿಗಳಿದ್ದರು. ಅವರು ಇಡೀ ದಿನ ಮಠದ ಎಲ್ಲ ಸನ್ಯಾಸಿಗಳಿಗೆ — ದೊಡ್ಡ ದೊಡ್ಡ ಹಿರಿಯರಿಗೂ ಕೂಡ—ಪ್ರಾಯಶ್ಚಿತ್ತವೆಂದು ಉಪವಾಸ ಮಾಡಹಚ್ಚಿ ಅಶನಕ್ಕಾಗಿ ಭಿಕ್ಷಾಪಾತ್ರ ಕೊಟ್ಟು ಕಳಿಸಿದರು.

ಮಠದ ಪ್ರಕಾಶನಗಳನ್ನು ಅವರು ತಾವೇ ಪರಿಶೀಲಿಸುತ್ತಿದ್ದರು. ಅತಿಯಾಗಿ ಭಾವನಾಪ್ರಧಾನ ಲೇಖನಗಳನ್ನೆಲ್ಲ ಮತ್ತು ಸಂಕುಚಿತ ಮತೀಯತೆಯುಳ್ಳ ಬರಹಗಳನ್ನೆಲ್ಲ ಅವರು ಚಿವುಟಿ ಹಾಕುತ್ತಿದ್ದರು. ಈ ಎರಡೂ ಅಪರಾಧಗಳನ್ನು ಅವರು ಎಂದೂ ಕ್ಷಮಿಸಲಿಲ್ಲ.

ಅವರ ಸುತ್ತೆಲ್ಲ ಆಧ್ಯಾತ್ಮದ ವೀರ ವಾತಾವರಣ ಮುಸಗಿತ್ತು. ಎಲ್ಲೆಲ್ಲೂ ಭಗವಂತನ ಸನ್ನಿಧಿ ಅನಿಸುತ್ತಿತ್ತು. ಒಮ್ಮೆ ಮರದಡಿಯಲ್ಲಿ ನಿಂತಾಗ ಪೂಜೆಗಾಗಿ ಹೋಗುವ ಕೆಲವರನ್ನು ಕೆಣಕಿ ಕೇಳಿದರು:

"ಬ್ರಹ್ಮಸಾಕ್ಷಾತ್ಕಾರಕ್ಕಾಗಿ ಹೋಗುವಿರೆಲ್ಲಿ?........ ಅವನು ಸರ್ವವ್ಯಾಪಿ. ಇಲ್ಲಿ! ಇದೋ ಇಲ್ಲಿ! ಆ ಬ್ರಹ್ಮ ಕಣ್ಣಾರೆ ಕಾಣುತ್ತಿರುವನು! ಕಣ್ಣಿಗೆ ಕಾಣುವ ಬ್ರಹ್ಮನನ್ನು ತೊರೆದು ಬೇರೆ ವಸ್ತುಗಳತ್ತ ಮನಸು ಹರಿಬಿಡುವ ಮೂಢರಿಗೆ ನಾಚಿಕೆ? ಅಂಗೈಯಲ್ಲಿಯ ಹಣ್ಣಿನಂತೆ ಬ್ರಹ್ಮ ಕಣ್ಣಾರೆ ಕಾಣುವುದಿಲ್ಲವೇ? ಇಲ್ಲಿ! ಇಲ್ಲಿ! ಇದೋ ಇಲ್ಲಿ! ಬ್ರಹ್ಮ! ಬ್ರಹ್ಮ!........"

ಅವರ ವೀರವಾಣಿಯ ಆಘಾತಕ್ಕೆ ಎಲ್ಲರೂ ಸ್ತಂಭಿತರಾಗಿ ಕಾಲು ಘಂಟೆ ನಿಂತಲ್ಲಿಯೇ ಕೀಲಿತರಾದರು. ಕೊನೆಗೆ ವಿವೇಕಾನಂದರೇ ಹೇಳಿದರು:

"ಹೂ! ಹೋಗಿರಿ! ಪೂಜೆಗೆ ಹೋಗಿರಿ!"

ಆದರೆ ಅವರ ಬೇನೆ ಬರಬರುತ್ತ ಬಲಿಯಹತ್ತಿತು. ಮಧುಮೇಹ ಉದರವಿಕಾರಕ್ಕೆ ಹಾಕಿತು. ಕಾಲು ಬಾತು ದೇಹದ ಕೆಲ ಭಾಗ ತೀರ ಮಿದುವಾದವು. ಬಹಳ ಮಟ್ಟಿಗೆ ನಿದ್ದೆಯೇ ಇಲ್ಲ. ಕೊಂಚ ಸಹ ದಣಿವಾಗಕೂಡದೆಂದು ಹೇಳಿ ಡಾಕ್ಟರರು ಕಠೋರ ಮತ್ತು ಕಷ್ಟಮಯವಾದ ಪಥ್ಯ ಹಾಕಿಕೊಟ್ಟರು. ನೀರು ಕುಡಿಯಕೂಡದೆಂದು ವಿಧಿಸಿದಾಗ ನಿತ್ಯ ನೀರಿನಿಂದ ಬಾಯಿ ಮುಕ್ಕುಳಿಸುತ್ತಿರುವಾಗಲೂ ಇಪ್ಪತ್ತೊಂದು ದಿನ ಒಂದು ಹನಿ ನೀರನ್ನು ಸಹ ಗಂಟಲಲ್ಲಿ ಇಳಿಸಿರಲಿಲ್ಲ. ಅವರು ಅಂದರು:

"ದೇಹವೆಂದರೇನು? ಮನಸ್ಸಿನ ಮುಖವಾಡ. ಮನಸ್ಸು ಹೇಳಿದುದನ್ನು ದೇಹ ಪಾಲಿಸಲೇ ಬೇಕು. ಈಗ ನಾನು ನೀರನ್ನು ನೆನೆಯುವುದಿಲ್ಲ ಸಹ. ಅದು ಬೇಕೆಂದು ಸಹ ಅನಿಸುವುದಿಲ್ಲ........ ಏನು ಬೇಕಾದುದನ್ನು ಮಾಡಬಲ್ಲೆ."

ಮಠದ ಮುಖ್ಯಸ್ಥರಾದ ಅವರ ಬೇನೆಯಿಂದ ಅದರ ಕಾರ್ಯಕ್ಕೆ ಅಥವಾ ಉತ್ಸವಗಳಿಗೆ ಎಂದೂ ಬಾಧೆ ಬರಲಿಲ್ಲ. ಅವೆಲ್ಲ ಯಥಾಸಾಂಗವಾಗಿಯೇ ವಿಜೃಂಭಣೆಯಿಂದ ಸಾಗಬೇಕೆಂದು ಅವರ ಇಚ್ಛೆ.

ಮೂಢ ಸಂಪ್ರದಾಯಶರಣರ ಅಂಥ ಅಮಾನುಷ ಪರಂಪರೆಯನ್ನು ಕಂಡು ಅವರು ಕಿಡಿಕಿಡಿಯಾಗುತ್ತಿದ್ದುದು ನಿಜ. ಆದರೆ ಸರಲಹೃದಯದ ಶ್ರದ್ಧಾಮಯ ಜೀವಿಗಳಲ್ಲಿ ಜೀವಂತ ಭಕ್ತಿಯ ಝರಿಯನ್ನು ಕಾಯ್ದುಕೊಂಡು ಹೋಗುವ ಧರ್ಮಕರ್ಮವಿಧಿಯ ಪೌರಾಣಿಕ ಕಾವ್ಯಮಯ ಸೌಂದರ್ಯಕ್ಕೆ ಅವರು ಮೆಚ್ಚಿದರು. ಸುಳ್ಳು ಸಮಾಜ-ಸುಧಾರಕರ ಮಿಥ್ಯಾಟೀಕೆಗೆ ಅವರ ಸ್ವತಂತ್ರ ಮನಸ್ಸು ಸೊಪ್ಪು ಹಾಕುತ್ತಿರಲಿಲ್ಲ.

೧೯೦೧ ಅಕ್ಟೋಬರ್‌ದಲ್ಲಿ ದುರ್ಗಾಪೂಜೆಯ ಮಹೋತ್ಸವ ಜರುಗಿತು. ಸುಗಂಧ ಸೂಸುವ ಶರತ್ಸಮಯದ ಆನಂದವನ್ನು ಕುರಿತು ಬಂಗಾಲದ ಆ ರಾಷ್ಟ್ರೀಯ ಉತ್ಸವವು ಅತ್ಯಂತ ವಿಜೃಂಭಣೆಯಿಂದ ಸಾಂಗವಾಯಿತು. ತಮ್ಮ ತಮ್ಮ ವೈಮನಸ್ಯಗಳನ್ನು ಮರೆತು ಎಲ್ಲ ಜನ ಪ್ರೀತಿಯಿಂದ ಪರಸ್ಪರರಿಗೆ ಕಾಣಿಕೆಗಳನ್ನು ಅರ್ಪಿಸಿದರು. ಮಠದಿಂದ ಮೂರು ದಿನ ಒಂದೇ ಸವನೆ ಸಾವಿರಾರು ದೀನದರಿದ್ರರಿಗೆ ಅನ್ನಸಂತರ್ಪಣೆಯಾಯಿತು. ೧೯೦೨ರ ಫೆಬ್ರುವರಿಯಲ್ಲಿ ಶ್ರೀರಾಮಕೃಷ್ಣೋತ್ಸವಕ್ಕಾಗಿ ಬೇಲೂರ ಮಠದಲ್ಲಿ ಮೂವತ್ತುಸಾವಿರಕ್ಕಿಂತ ಹೆಚ್ಚು ಜನ ಯಾತ್ರಿಕರು ಕೂಡಿದರು. ಕಾಲು ಬಾತು ಜ್ವರ ಬಂದು ಸ್ವಾಮಿಯವರು ಕೋಣೆಯಲ್ಲಿಯೇ ಬಿದ್ದುಕೊಂಡಿದ್ದರು. ಕಿಡಿಕೆಯೊಳಗಿನಿಂದಲೇ ನೃತ್ಯಸಂಕೀರ್ತನಗಳನ್ನು ನೋಡಿದರು. ತಮ್ಮನ್ನು ಉಪಚರಿಸುತ್ತಿರುವವರ ಕಣ್ಣೀರು ತೊಡೆದರು. ಹಿಂದಿನ ಕಾಲದ ನೆನಪು ಅವರನ್ನು ಮುತ್ತಿತು. ದಕ್ಷಿಣೇಶ್ವರದ ಆ ಮಹಾಗುರುವಿನ ಅಡಿಯಲ್ಲಿ ಕಳೆದ ದಿನಗಳಲ್ಲಿ ತಾವು ಬಾಳುತ್ತಿದ್ದಂತೆ ಅವರಿಗೆ ಭಾಸವಾಯಿತು.

ಇನ್ನೊಂದು ಆನಂದ ಅವರಿಗಾಗಿ ಕಾದಿದ್ದಿತು. ಮಾನ್ಯ ಅತಿಥಿ ಓಕಾಕುರಾ ಎಂಬ ಜಪಾನದ ವಿದ್ವಾಂಸರು ಓರ್ವ ಬೌದ್ಧ ಸನ್ಯಾಸಿಯ ಜೊತೆಯಲ್ಲಿ ಅವರನ್ನು ಕಾಣಬಂದರು. ಅವರ ಸಂದರ್ಶನ

ಹೃದಯದ್ರಾವಕವಾಗಿತ್ತು. ಪರಸ್ಪರ ಸೌಹಾರ್ದವನ್ನು ಈರ್ವರೂ ಅರಿತರು.

"ಪ್ರಪಂಚದ ಬೇರೆ ಬೇರೆ ಅಂಚಿನಿಂದ ಬಂದ ಬಂಧುಗಳು ನಾವಿಬ್ಬರು ಇಂದು ಮತ್ತೆ ಕೂಡಿದೆವು" ಎಂದರು ವಿವೇಕಾನಂದರು.

ಪುಣ್ಯಭೂಮಿಯಾದ ಬುದ್ಧಗಯೆಯ ಜೀರ್ಣ ಅವಶೇಷಗಳನ್ನು ನೋಡಲು ಓಕಾಕುರಾ ವಿವೇಕಾನಂದರನ್ನು ಬಿನ್ನವಿಸಿದರು. ಕೆಲವು ವಾರ ತಮ್ಮ ಕಾಯಿಲೆ ಕೊಂಚ ಗುಣವಾದುದರಿಂದ ವಿವೇಕಾನಂದರು ಆಮಂತ್ರಣವನ್ನು ಸ್ವೀಕರಿಸಿ ಹೊರಟರು. ಕೊನೆಯ ಸಲ ಕಾಶಿಯನ್ನೂ ಕಂಡರು.

ಅವರು ಕೊನೆಯ ವರ್ಷದಲ್ಲಿ ಆಡಿದ ಮಾತು, ಮಾಡಿದ ಯೋಜನೆ, ತೋರಿದ ಇಚ್ಛೆ — ಎಲ್ಲವನ್ನೂ ಶಿಷ್ಯರು ಶ್ರದ್ಧೆಯಿಂದ ಕೂಡಿಸಿ ಇಟ್ಟಿರುವರು. ಭಾರತದ ಪುನರುದ್ಧಾರವೇ ಹಗಲಿರುಳು ಅವರ ಕನಸುಮನಸಿನಲ್ಲಿ. ಪುರಾತನ ಆರ್ಯಸಂಸ್ಕೃತಿಯನ್ನು ಮತ್ತು ಸಂಸ್ಕೃತದಲ್ಲಿಯ ಉದ್ಗ್ರಂಥಗಳನ್ನು ಕಲಿಸಲು ಮಹಾಪಂಡಿತರಾದ ಪ್ರೊಫೆಸರರ ವೈದಿಕ ವಿದ್ಯಾಪೀಠವನ್ನು ಕಲಕತ್ತೆಯಲ್ಲಿ ಸ್ಥಾಪಿಸಬೇಕು. ಪೂಜ್ಯ ಮಾತಾಜಿ (ಶ್ರೀರಾಮಕೃಷ್ಣರ ಪತ್ನಿ ಶಾರದಾಮಣಿ ದೇವಿ)ಯವರ ಸಂಚಾಲಕತ್ವದಲ್ಲಿ ಗಂಗಾತೀರದ ಮೇಲೆ ಬೇಲೂರ ಮಠದಂಥ ಒಂದು ಮಠವನ್ನು ಸ್ತ್ರೀಯರಿಗಾಗಿ ಸ್ಥಾಪಿಸಬೇಕು, ಇವೆರಡು ಅವರ ಪ್ರೀತಿಯ ಸಂಕಲ್ಪ.

ಆದರೆ ಒಂದು ದಿನ ಸಂತಾಲ ಕೂಲಿಕಾರರ ಕೂಡ ಮಾತನಾಡುತ್ತ ತಮ್ಮ ವಿಶಾಲ ಹೃದಯವನ್ನು ವಿಸ್ತಾರವಾಗಿ ಹರವಿ ಅವರು ಬೀರಿದ ಸುಂದರ ಸಂದೇಶದಲ್ಲಿ ಅವರ ನಿಜವಾದ ಆತ್ಮದ ಆಕಾಂಕ್ಷೆ, ಹಂಬಲ ಎದ್ದು ಕಾಣುವುದು. ಆಶ್ರಮದ ಸುತ್ತೆಲ್ಲ ನೆಲ ಅಗೆಯಲು ಬಂದ ಬಡ ಕೂಲಿಕಾರರು ಅವರು, ಸಂತಾಲರು. ವಿವೇಕಾನಂದರು ಅವರನ್ನು ಅತ್ಯಂತ ಪ್ರೀತಿಯಿಂದ ಕಾಣುತ್ತಿದ್ದರು. ಅವರ ಒಂದು

ಗುಂಪಿನಲ್ಲಿ ಹೊಕ್ಕು ಹರಟೆ ಹೊಡೆಯುತ್ತ ಅವರು ಹೇಳಿದ ಕಷ್ಟದ ಕಥೆ ಕೇಳಿ ಮನಕರಗಿ ಕಂಬನಿಗರೆದರು. ಒಂದು ದಿನ ಅವರಿಗೆ ಸಮೀಚೀನವಾಗಿ ಅನ್ನಸಂತರ್ಪಣೆ ಮಾಡಿಸಿ ಸ್ವಾಮಿಯವರು ಅಂದರು:

"ನೀವೆಲ್ಲರೂ ನಾರಾಯಣರು. ಸಾಕ್ಷಾತ್ ನಾರಾಯಣನನ್ನು ಇಂದು ನಾನು ಉಪಚರಿಸಿದೆ........" ಮತ್ತು ಶಿಷ್ಯರಿಗೆ ಹೇಳಿದರು:

"ನೋಡಿದಿರಾ! ಎಂಥ ಸರಲ ಹೃದಯದವರು ಈ ದೀನ ದರಿದ್ರ ಅಜ್ಞ ಜನರು! ಕೆಲ ಮಟ್ಟಿಗಾದರೂ ಅವರ ಕಷ್ಟನಿವಾರಣ ಮಾಡ ಬಲ್ಲಿರಾ? ಇಲ್ಲದಿದ್ದರೆ ಈ ನಮ್ಮ ಕೇವೆ ಬಟ್ಟೆಯನ್ನು ತೆಗೆದುಕೊಂಡು ಮಾಡುವುದೇನು?........ ಒಮ್ಮೊಮ್ಮೆ ನನಗೆ ಅನಿಸುತ್ತದೆ: ಮಠ ಮುಂತಾದವುಗಳಿಂದೇನು? ಅವನ್ನೆಲ್ಲ ಮಾರಿ ಬಂದ ಹಣ ಈ ದೀನ ದರಿದ್ರರಿಗೆ ಹಂಚಿ ಹಾಕಲಾ? ಮರದ ನೆಳಲನ್ನೇ ಮನೆ ಮಾಡಿ ಕೊಂಡ ನಮಗೆ ಮನೆಮಠಗಳೇಕೆ? ಹೊಟ್ಟೆತುಂಬ ಅನ್ನ ಮೈತುಂಬ ಬಟ್ಟೆಯಿಲ್ಲದೆ ನಮ್ಮ ದೇಶಬಾಂಧವರು ಗೋಳಾಡುವಾಗ ನಮ್ಮ ಬಾಯಿಯಲ್ಲಿ ಒಂದು ತುತ್ತನ್ನಾದರೂ ಎತ್ತಿ ಹಾಕಿಕೊಳ್ಳಲು ಅದೆಂತು ಮನಸ್ಸಾಗಬೇಕು?........ ತಾಯೇ! ಇವರ ಕಷ್ಟಕ್ಕೆ ಕೊನೆಯಿಲ್ಲ ವೇ?........ ನಿಮಗೆ ಗೊತ್ತಿದೆ: ಪಶ್ಚಿಮಕ್ಕೆ ಧರ್ಮಪ್ರಭೋಧನೆಗೆ ಹೋ ದಾಗ ನಮ್ಮ ದೇಶಬಾಂಧವರ ಉದ್ಧಾರವೂ ನನ್ನದೊಂದು ಉದ್ದೇಶ ವಾಗಿತ್ತು. ಅವರ ಕಷ್ಟದಾರಿದ್ರ್ಯಗಳನ್ನು ಕಂಡು ಒಮ್ಮೊಮ್ಮೆ ನನಗೆ ಅನಿಸುತ್ತದೆ: ಈ ಪೂಜೆಯ ಸಂಭ್ರಮವನ್ನೆಲ್ಲ— ಈ ಶಂಖನಾದ ಈ ಘಂಟಾಘೋಷ, ಮೂರ್ತಿಯ ಮುಂದಿನ ಈ ದೀಪಧೂಪಾರತಿ— ಇದನ್ನೆಲ್ಲ ಬಿಸುಟಿ ಬಿಡಲಾ?........ ವಿದ್ಯೆಯ ಅಹಂಕಾರ, ಶಾಸ್ತ್ರಾ ಭ್ಯಾಸ, ವೈಯಕ್ತಿಕ ಮುಕ್ತಿ ಸಾಧನೆ— ಇದನ್ನೆಲ್ಲ ಬೀಸಿ ಹಾಕಲಾ? ಹಳ್ಳಿಹಳ್ಳಿಗೆ ಹೋಗಿ ದರಿದ್ರರ ಸೇವೆಗೆ ನಮ್ಮ ಬಾಳನ್ನು ಮೀಸಲಾ ಗಿರಿಸುವಾ. ನಮ್ಮ ಚಾರಿತ್ರ್ಯದ, ನಮ್ಮ ಅಧ್ಯಾತ್ಮದ ಮತ್ತು ನಮ್ಮ ತಪಶ್ಚರ್ಯೆಯ ಬಲದಿಂದ ಜನತೆಯ ವಿಷಯದಲ್ಲಿಯ ಅವರ

ಕರ್ತವ್ಯವನ್ನು ಧನವಂತರ ಮನಸ್ಸಿನ ಮೇಲೆ ಮೂಡಿಸಿ, ದೀನದರಿದ್ರರ ಸೇವೆಗಾಗಿ ಧನಧಾನ್ಯ ಸಾಧನಸಾಹಿತ್ಯಗಳನ್ನು ದೊರಕಿಸುವಾ.... ಅಯ್ಯೋ! ನಮ್ಮ ನಾಡಿನಲ್ಲಿ ದೀನದರಿದ್ರರ ಪರಿವೆ ಯಾರಿಗೂ ಇಲ್ಲವಲ್ಲ! ಈ ದೀನದರಿದ್ರರೇ ದೇಶದ ಆಧಾರಸ್ತಂಭರು. ಅವರ ದುಡಿತ ದೇಶಕ್ಕೆ ಅನ್ನ ನೀಡುತ್ತದೆ. ಒಂದು ದಿನ ಅವರು ಕೆಲಸಕ್ಕೆ ಶರಣು ಹೊಡೆದರೆ ಆಯಿತು! ಪಟ್ಟಣದ ತುಂಬೆಲ್ಲ ಹಾಹಾಕಾರ! ಆದರೆ ಅವರ ಸಲುವಾಗಿ ಕರಗುವ ಮನಸ್ಸೆಲ್ಲಿ? ಅವರ ಸುಖದುಃಖಗಳಲ್ಲಿ ಪಾಲುಗಾರರಾಗುವವರೆಲ್ಲಿ? ಹಿಂದುಗಳ ಸಹಾನುಭೂತಿ ಸಿಕ್ಕದೆ ಹೋಗಿ ಸಾವಿರಾರು ಹೊಲೆಯರು ಮದ್ರಾಸ್ ಇಲಾಖೆಯಲ್ಲಿ ಕ್ರಿಶ್ಚನ್‌ರಾಗುತ್ತಿರುವರು! ಗೇಣು ಹೊಟ್ಟೆಯ ಹಸಿವೆಗಾಗಿ ಅವರು ಸಿಡಿದು ಹೋಗಿ ಕ್ರಿಸ್ತೀಧರ್ಮ ಸ್ವೀಕರಿಸಹತ್ತಿರುವರೆಂದು ಸರ್ವಥಾ ತಿಳಿಯಬೇಡಿರಿ. ಆದರೆ ನಮ್ಮ ಸಹಾನುಭೂತಿ ಅವರಿಗೆ ಸಿಕ್ಕದಿರುವುದೇ ಕಾರಣ. ಒಂದೇ ಸವನೆ ನೀವು ಕೂಗಿ ಅವರಿಗೆ ಸಾರುತ್ತಿರುವಿರಿ: 'ನನ್ನನ್ನು ಮುಟ್ಟೇ! ಅದನ್ನು ಮುಟ್ಟ! ಇದನ್ನು ಮುಟ್ಟೇ!' ದೇಶದಲ್ಲಿ ಮನುಷ್ಯತ್ವ, ಧರ್ಮಭಾವನೆ ಏನಾದರೂ ಉಳಿದಿರುವುದೇ? ಮುಟ್ಟೇ ಮುಟ್ಟೇ ಎಂಬ ಮಡಿ-ಧರ್ಮ ಮಾತ್ರ ಉಳಿದಿದೆ! ಅಧೋಗತಿಗೆಳೆಯುವ ಇಂಥ ಅಂಧ ಪರಂಪರೆಯನ್ನು ಒದ್ದೋಡಿಸಿರಿ! ಮುಟ್ಟೇ ಮುಟ್ಟೇ ಎಂಬ ಮೂಢ ಬಂಧನಗಳನ್ನು ಮುರಿದಿಕ್ಕಿ ಹೊರಹೊರಟು ಕೂಗಿಕೂಗಿ ಎಲ್ಲರನ್ನೂ ಕರೆದುಕೊಳ್ಳಲಾ! 'ಬನ್ನಿ! ಬನ್ನಿ! ದೀನರೇ ಬನ್ನಿ! ದರಿದ್ರರೇ ಬನ್ನಿ! ಪತಿತರೇ ಬನ್ನಿ! ದಲಿತರೇ ಬನ್ನಿ! ಶ್ರೀರಾಮಕೃಷ್ಣರ ಹೆಸರಿನಿಂದ ನಾವೆಲ್ಲರೂ ಒಂದೇ! ಒಂದೇ! ಒಂದೇ!' ಅವರ ಉದ್ಧಾರವಾಗದೆ ಭಾರತಮಾತೆ ಎಂದಿಗೂ ಎದ್ದೇಳಲಾರಳು! ಅವರ ಹೊಟ್ಟೆ ಬಟ್ಟೆಗಾಗಿ ಏನೂ ಮಾಡದಿದ್ದರೆ ನಾವು ಬದುಕಿ ಸಾರ್ಥಕವೇನು? ಅಯ್ಯೋ! ಆ ಅಜ್ಞ ಜನರು ಹಗಲಿರುಳು ಮೈಮುರಿ ಬೆವರು ಸುರಿಸಿ ದುಡಿದೂ ದುಡಿದೂ

ಬದುಕಿ ಬಾಳಲಾರರು. ಅವರ ಕಣ್ಣಿನ ಮೇಲಿನ ಪರದೆಯನ್ನು ಹರಿದು ಹಾಕಲು ಸನ್ನದ್ಧರಾಗಿರಿ. ಅದೇ ಬ್ರಹ್ಮ, ಅದೇ ಶಕ್ತಿ—ನನ್ನಲ್ಲಿದ್ದುದೇ ಅವರಲ್ಲೂ ಇದೆ. ಹೆಚ್ಚುಕಡಿಮೆ ಪ್ರಮಾಣ ಮಾತ್ರ. ರಾಷ್ಟ್ರದ ರಕ್ತ ಎಲ್ಲ ಅವಯವಗಳಲ್ಲಿ ಸರಿಯಾಗಿ ಸಮನಾಗಿ ಹರಿದ ಹೊರತು ಯಾವ ದೇಶವಾದರೂ ಏಳ್ಗೆ ಹೊಂದಿದುದು ಜಗತ್ತಿನ ಇತಿಹಾಸದಲ್ಲಿ ಸಿಕ್ಕು ವುದೇ? ದೇಹದ ಒಂದು ಅವಯವ ಬಲಗುಂದಿದರೆ ಆ ದೇಹದಿಂದ ಮಹತ್ಕಾರ್ಯ ಅಸಾಧ್ಯವೆಂದು ನಿಶ್ಚಿತವಾಗಿ ತಿಳಿಯಿರಿ!........"

ಹಿಂದುಸ್ತಾನದಲ್ಲಿ ಐಕ್ಯ ಮತ್ತು ಸಮನ್ವಯವನ್ನು ನೆಲೆಗೊಳಿ ಸುವುದು ದುಸ್ತರವೆಂದು ಶಿಷ್ಯನೊಬ್ಬನು ನುಡಿದನು. ವಿವೇಕಾನಂದರು ಕೆರಳ್ದು ಕೂಗಿದರು:

"ನಿಮ್ಮ ಕರ್ತವ್ಯ ನಿಮಗೆ ಕಠಿಣವೆನಿಸಿದರೆ ಇಲ್ಲಿ ಕಾಲಿಡಬೇ ಡಿರಿ! ಭಗವಂತನ ಪ್ರಸಾದದಿಂದ ಎಲ್ಲವೂ ಸುಸಾಧ್ಯವಾಗುವುದು! ಜಾತಿಗೋತ್ರಗಳ ಭೇದಭಾವ ಮನಸ್ಸಿನಲ್ಲಿ ತರದೆ ದೀನದರಿದ್ರರ ಸೇವೆ ಮಾಡುವುದೇ ನಿಮ್ಮ ಕರ್ತವ್ಯ! ನಿಮ್ಮ ಕರ್ಮದ ಫಲದ ವಿಚಾರ ಮಾಡಲು ನಿಮಗೆ ಅಧಿಕಾರವೇನು? ದುಡಿ, ದುಡಿ, ದುಡಿಯುವುದೇ ನಿಮ್ಮ ಕೆಲಸ! ಮಿಕ್ಕುದೆಲ್ಲ ತನ್ನಿಂದ ತಾನೇ ಸರಿ ಹೋಗುತ್ತದೆ.... ನೀವೆಲ್ಲ ಚತುರ ಹುಡುಗರು ನನ್ನ ಶಿಷ್ಯರೆಂದು ಹೇಳಿಕೊಳ್ಳುತ್ತೀರಿ. ನೀವೇನು ಮಾಡಿರುವಿರಿ ಎಂಬುದನ್ನು ನನಗೆ ಹೇಳಿರಿ. ಪರರಿಗಾಗಿ ಇಡೀ ಒಂದು ಬಾಳನ್ನು ಸಹ ಕೊಟ್ಟು ಬಿಡಲಾರಿರಾ? ವೇದಾಂತ ವಾಚನ ಧ್ಯಾನ ಮುಂತಾದುದೆಲ್ಲ ಮುಂದಿನ ಜನ್ಮಕ್ಕೆ ಮೀಸಲಾಗಲಿ! ಈ ದೇಹ ದೀನರ ಸೇವೆಯಲ್ಲಿ ಬಿದ್ದು ಹೋಗಲಿ! ಆಗ ಮಾತ್ರ ನೀವು ನನ್ನ ಹತ್ತಿರಕ್ಕೆ ಬಂದುದು ನಿರರ್ಥಕವಾಗಲಿಲ್ಲೆಂದು ನಾನು ತಿಳಿಯುತ್ತೇನೆ."

ಕೆಲ ಹೊತ್ತು ತಡೆದು ಮತ್ತೆ ಅಂದರು:

"ಈ ಎಲ್ಲ ತಪಸ್ಯೆಯ ನಂತರ ನನಗೆ ಹೊಳೆದ ನಿತಾಂತಸತ್ಯವು

ಇದೇ: ಭಗವಂತ ಸರ್ವವ್ಯಾಪಿ ! ಎಲ್ಲರಲ್ಲಿಹನು ! ಇವೆಲ್ಲ ಅವನ ವಿವಿಧ ರೂಪ ! ಬೇರೊಬ್ಬ ದೇವನನ್ನು ಹುಡುಕುವುದೆಲ್ಲಿ ? ಸಕಲರ ಸೇವೆಗೈಯು ವವನೇ ದೇವಪೂಜೆಯ ಗೈಯುವನು !"

ವಿಶ್ವದ ಉದಾತ್ತತಮ ವಿಚಾರ ಇಲ್ಲಿ ಮೂರ್ತಿಮಂತವಾಗಿ ನಿಂತಿವೆ! ಪರಮೋಜ್ವಲ ಪರಂಜ್ಯೋತಿಯಲ್ಲಿ ಲೀನವಾಗುವ ಮುನ್ನ ಸಂಧ್ಯಾ ಸೂರ್ಯನಂತೆ ಮೋಡಗಳ ಮಧ್ಯದಿಂದ ಹೊನ್ನ ಹೊನ್ನಾಗಿ ಸಿಡಿದಿವೆ! ಸರ್ವಮಾನವರ ಸಮಾನತೆ ! ಎಲ್ಲರೂ ಒಬ್ಬ ಭಗವಂತನ ಮಕ್ಕಳು ! ಎಲ್ಲರೂ ಒಬ್ಬ ದೇವನನ್ನು ಹೊತ್ತು ನಿಂತವರು ! ಮತ್ತೊಬ್ಬ ದೇವ ನಿಲ್ಲ ! ದೇವಸೇವೆಯ ಮಾಡಬಯಸುವವರು ಮಾನವನ ಅತ್ಯಂತ ದೀನ ದರಿದ್ರ ದಲಿತ ಪತಿತನಾದ ಮಾನವನ ಸೇವೆಗೈಯಲು ಬೇಕು! ಬಂಧನಗಳನ್ನು ಮುರಿದಿಕ್ಕಿರಿ! ಅಸ್ಪೃಶ್ಯತೆ ಹಿಂದುಸ್ತಾನದ ಗುತ್ತಿಗೆ ಯೇನಲ್ಲ. ಯುರೋಪದ ಡಂಭಾಚಾರದಲ್ಲೂ ಅಸ್ಪೃಶ್ಯತೆಯಿದೆ. ಆದರೆ ಅಸ್ಪೃಶ್ಯತೆಯ ಈ ಪಾಶವೀ ಪರಂಪರೆಗೆ ಒಂದೇ ಒಂದು ಉತ್ತರ. "ಬಂಧುಗಳಿರಾ ! ಬನ್ನಿ ! ಬನ್ನಿ ! ಎಂದು ಅಸ್ಪೃಶ್ಯರನ್ನೆಲ್ಲ ಅಪ್ಪಿಕೊಂಡು ಅಸ್ಪೃಶ್ಯತೆಯನ್ನು ಅಳಿದು ಬಿಡುವುದು !"

ವಿವೇಕಾನಂದರ ಶಿಷ್ಯರು ಈ ಭವ್ಯ ದಿವ್ಯ ಸಂದೇಶಕ್ಕೆ ಉತ್ತರ ವನ್ನಿತ್ತಿರುವರು. ಸಾಯುವಾಗ ಸ್ವಾಮಿಯವರು ತಮ್ಮ ಕೈಯಲ್ಲಿ ಕೊಟ್ಟ ಸಂತಾಲರ, ದೀನದರಿದ್ರರ, ಚಂಡಾಲರ, ಬಹಿಷ್ಕೃತರ ನೆರವಿಗಾಗಿ ಧಾವಿಸುವುದರಲ್ಲಿ ರಾಮಕೃಷ್ಣಸೇವಾಸಂಘದ ಸ್ವಯಂಸೇವಕರು ಎಂದಿಗೂ ಮುಂದಾಗಿರುವರು.

"ಬನ್ನಿ! ಬನ್ನಿ! ಬನ್ನಿ! ನೀವೆಲ್ಲರೂ ಬನ್ನಿ! ದಲಿತರೇ ಬನ್ನಿ! ದೂರೀಕೃತರೇ ಬನ್ನಿ! ಪತಿತರೇ ಬನ್ನಿ! ನಾವೆಲ್ಲರೂ ಒಂದೇ!" ಎಂದು ಕೂಗಿದವನ ಕೈಯಲ್ಲಿಂದ ದೀಪಜ್ಯೋತಿಯನ್ನು ಪಡೆದು ಮತ್ತೋರ್ವ ಮಹಾತ್ಮ ಅಸ್ಪೃಶ್ಯರಿಗೆ ಅವರ ಹಕ್ಕು ಗೌರವಗಳನ್ನು ಮರಳಿ ಕೊಡಲು ಧರ್ಮಯುದ್ಧವನ್ನು ಹೂಡಿರುವನು! — ಮೋಹನದಾಸ ಕರಮಚಂದ

ಗಾಂಧಿ!

*　　*　　*　　*

ಸಾವು ಸಮೀಪಿಸಿದಂತೆ ಅವರ ಸ್ವಾಭಿಮಾನ ಅಹಂಕಾರದ ಅಸಾರತೆಯನ್ನು ಅರಿಯಿತು! ನಿಜವಾದ ಮಾಹಾತ್ಮ್ಯ ಸಣ್ಣ ಪುಟ್ಟ ಮಾತುಗಳಲ್ಲಿ — 'ವಿನಮ್ರ ವೀರ ಜೀವನದಲ್ಲಿ' — ಎಂದು ಕಂಡು ಹಿಡಿಯಿತು. ಅವರು ನಿವೇದಿತೆಗೆ ಅಂದರು:

"ನನಗೆ ವಯಸ್ಸಾಗುತ್ತ ಹೋದಂತೆ ಸಣ್ಣ ಪುಟ್ಟ ಮಾತುಗಳಲ್ಲಿ ಮಹಾತ್ಮ್ಯ ಕಾಣಹತ್ತಿದೆ... ....ದೊಡ್ಡ ಪ್ರಸಂಗದಲ್ಲಿ ಯಾರಾದರೂ ದೊಡ್ಡವರಾಗುತ್ತಾರೆ. ಆಯಕಟ್ಟಿನ ಪ್ರಸಂಗದಲ್ಲಿ ಲೋಕದ ಕಣ್ಣೆಲ್ಲ ತೆರೆದು ತನ್ನನ್ನೇ ನೋಡುತ್ತಿರುವಾಗ ಹೇಡಿಯೂ ವೀರನಾಗುತ್ತಾನೆ. ಆದರೆ ಕ್ಷಣಕ್ಷಣಕ್ಕೆ ಘಂಟೆಘಂಟೆಗೆ ನಿದಾನವಾಗಿ ನಿಶ್ಯಬ್ಧವಾಗಿ ತನ್ನ ಕರ್ತವ್ಯವನ್ನು ಮಾಡುತ್ತ ಹೋಗುತ್ತಿರುವ ಹುಳದ ಬಾಳಿನಲ್ಲಿ ನಿಜವಾದ ಮಹತ್ವ ಹೆಚ್ಚೆಚ್ಚಾಗಿ ನನ್ನ ನಿದರ್ಶನಕ್ಕೆ ಬರಹತ್ತಿದೆ."

ಸಾವು ಸಮೀಪಿಸಿದಂತೆ ಹೆದರದೆ ಅದರ ಕಣ್ಣಲ್ಲಿ ಕಣ್ಣಿಟ್ಟು ನೋಡಹತ್ತಿದರೂ ತಮ್ಮ ಎಲ್ಲ ಶಿಷ್ಯರನ್ನು, ಸಮುದ್ರದಾಚೆ ಇರುವವರನ್ನು ಸಹ ನೆನೆದರು. ಶಿಷ್ಯರಿಗೆ ಅವರ ಶಾಂತವೃತ್ತಿ ಮೋಸ ಮಾಡಿತು. ಇನ್ನೂ ನಾಲ್ಕೈದು ವರ್ಷ ಅವರು ಸಹಜವಾಗಿ ಬಾಳಬಹುದೆಂದು ಅವರ ಶಿಷ್ಯರು ತಿಳಿದಿದ್ದರು. ಆದರೆ ಸಾವಿನ ನೆಳಲು ಸಮೀಪಿಸಹತ್ತಿದೆಯೆಂದು ಸ್ವಾಮಿಯವರು ಅರಿತಿದ್ದರು. ಶಿಷ್ಯರ ಕೈಯಲ್ಲಿ ಕೆಲಸವನ್ನು ಕೊಟ್ಟು ಹೋಗುವಾಗ ಅವರು ಉದ್ವೇಗವನ್ನು ತೋರಲಿಲ್ಲ. ಅವರಂದರುಃ

"ಹಗಲಿರುಳು ಅವರ ಹತ್ತಿತವೇ ಇರುವುದರಿಂದ ಅದೆಷ್ಟು ಸಲ ಶಿಷ್ಯರು ಹಾಳಾಗಿಯೇ ಹೋಗುತ್ತಾರೆ!"

ತಾವು ದೂರಾಗಿ ಶಿಷ್ಯರಿಗೆ ತಮ್ಮ ಬೆಳವಣಿಗೆಯನ್ನು ತಾವೇ ಮಾಡಿಕೊಳ್ಳಲು ಸಂಧಿ ದೊರೆಯುವುದು ಆವಶ್ಯವೆಂದು ಅವರಿಗೆ

ತೋರಿತು. ಪ್ರಚಲಿತ ಪ್ರಶ್ನೆಗಳ ಮೇಲೆ ಯಾವ ಅಭಿಪ್ರಾಯವನ್ನೂ ಪ್ರದರ್ಶಿಸಲು ಅವರು ಒಪ್ಪಲಿಲ್ಲ. "ಹೊರಗಿನ ವಿಷಯಗಳಲ್ಲಿ ನಾನು ತಲೆ ಹಾಕಲಾರೆ. ನಾನು ನನ್ನ ಹಾದಿಯನ್ನು ಹಿಡಿದಿರುವೆ" ಎಂದರು.

೧೯೦೨ರ ಜುಲೈ ೪ನೆಯ ಆ ಮಹಾದಿನ!

ಹಿಂದೆ ಹಲವು ವರ್ಷ ಇರದಷ್ಟು ಅಂದು ಸ್ವಾಮಿಯವರು ಉತ್ಸಾಹಿಗಳಾಗಿದ್ದರು. ಉಲ್ಲಾಸಿಗಳಾಗಿದ್ದರು. ಒಳ್ಳೇ ನಸುಕಿನಲ್ಲಿ ಎದ್ದರು. ಪೂಜಾಮಂದಿರಕ್ಕೆ ಹೋದರು. ವಾಡಿಕೆಯಂತೆ ಎಲ್ಲ ಬಾಗಿಲು ಕಿಡಿಕೆ ತೆರೆಯುವುದನ್ನು ಬಿಟ್ಟು ಅವನ್ನೆಲ್ಲ ಮುಚ್ಚಿಬಿಟ್ಟರು. ಒಳಗಿನಿಂದ ಚಿಲಕ ಹಾಕಿಕೊಂಡರು. ಮುಂಜಾವಿನ ಎಂಟು ಘಂಟೆಯಿಂದ ಹನ್ನೊಂದರ ವರೆಗೆ ಏಕಾಕಿಯಾಗಿ ಧ್ಯಾನಸ್ಥರಾದರು. ಕಾಲೀಮಾತೆಯ ಒಂದು ಸುಂದರ ಭಜನಗೀತವನ್ನು ಹಾಡಿದರು. ಹೊರಗೆ ಬಂದು ಅಂಗಳವನ್ನು ಹೊಕ್ಕಾಗ ಅವರ ಮುಖದ ಮೇಲೆ ದಿವ್ಯ ತೇಜಸ್ಸು ಉಕ್ಕುತ್ತಿತ್ತು. ಶಿಷ್ಯರೆಲ್ಲರ ಮಧ್ಯದಲ್ಲಿ ಕುಳಿತು ಹಸಿದು ಹಾರೈಸಿ ಊಟ ಮಾಡಿದರು. ಊಟವಾದ ಕೂಡಲೆ ಶಿಷ್ಯರಿಗೆ ಮೂರು ಘಂಟೆ ಸಂಸ್ಕೃತ ಪಾಠ ಹೇಳಿದರು. ಉತ್ಸಾಹವಿನೋದಗಳಿಂದ ತುಂಬಿ ತುಳುಕುತ್ತಿದ್ದರು. ಪ್ರೇಮಾನಂದರ ಜೊತೆಯಲ್ಲಿ ಬೇಲೂರ ಹಾದಿಯ ಮೇಲೆ ಎರಡು ಮೈಲು ನಡೆದು ಬಂದರು. ವೈದಿಕ ವಿದ್ಯಾಪೀಠದ ತಮ್ಮ ಯೋಜನೆಯನ್ನು ವಿವರಿಸಿದರು. ವೈದಿಕ ಅಭ್ಯಾಸದ ವಿಷಯವಾಗಿ ಮಾತನಾಡಿದರು.

"ಅದು ಲೋಕದ ಮೂಢ ಭಾವನೆಯನ್ನೆಲ್ಲ ಅಳಿದು ಬಿಡುವುದು" ಎಂದರು.

ಸಂಜೆಯಾಯಿತು. ಸನ್ಯಾಸಿಗಳಿಗೆ ಕೊನೆಯ ಸ್ನೇಹದ ಸಂದರ್ಶನವನ್ನಿತ್ತರು. ರಾಷ್ಟ್ರಗಳ ಏರಿಳಿತಗಳ ವಿಷಯವಾಗಿ ಮಾತನಾಡುತ್ತ ಅವರು ಹೇಳಿದರು:—

"ಭಗವಂತನ ಶೋಧವನ್ನು ಎಂದೂ ತೊರೆಯದೆ ಹೋದರೆ

ಭಾರತ ಅಮರಭೂಮಿ. ರಾಜಕಾರಣ ಹಾಗೂ ಸಾಮಾಜಿಕ ಕಲಹಗಳಲ್ಲಿ ಮೈಮರೆತರೆ ಭಾರತದ ಅವತಾರ ಮುಗಿಯಿತು !"

ಏಳು ಘಂಟೆ........ಪೂಜಾಮಂದಿರದಲ್ಲಿ ಸಂಧ್ಯಾರತಿಯು ಘಂಟೆ ಬಾರಿಸಿತು........ಅವರು ತಮ್ಮ ಕೋಣೆಗೆ ಹೋದರು. ಕಿಡಿಕೆಯಿಂದ ಹೊರಗೆ ಗಂಗಾನದಿಯನ್ನು ನಿರೀಕ್ಷಿಸಿದರು. ಆ ಮೇಲೆ ಹತ್ತಿರಿದ್ದ ಶಿಷ್ಯನನ್ನು ಹೊರಗೆ ಕಳಿಸಿದರು. ತಮ್ಮ ಧ್ಯಾನ ಭಂಗವಾಗದಿರಲಿ ಎಂದು ಹೇಳಿದರು. ನಲವತ್ತೈದು ನಿಮಿಷಗಳ ನಂತರ ಶಿಷ್ಯನನ್ನು ಕರೆದರು. ಕಿಡಿಕೆಗಳನ್ನೆಲ್ಲ ತೆರೆಯಹೇಳಿದರು. ಶಾಂತವಾಗಿ ನೆಲದ ಮೇಲೆ ಎಡಮಗ್ಗಲಾಗಿ ಮಲಗಿದರು. ಅಚಲರಾಗಿ ಬಿದ್ದುಕೊಂಡರು. ಧ್ಯಾನಮಗ್ನರಾದಂತೆ ಕಂಡರು!

ಒಂದು ಘಂಟೆಯ ನಂತರ ಹೊರಳಿದರು. ನಿಟ್ಟುಸಿರು ಬಿಟ್ಟರು! ಕೆಲ ನಿಮಿಷ ನಿಶ್ಶಬ್ದ! ರೆಪ್ಪೆಗಳ ಮಧ್ಯದಲ್ಲಿ ಕಣ್ಣು ನೆಲಸಿದವು! ಮತ್ತೊಂದು ನಿಟ್ಟುಸಿರು!........ಕೊನೆಗೆ........ಅನಂತ........ಶಾಂತಿ!

ಸ್ವಾಮಿಯವರ ಶಿಷ್ಯಬಂಧು ಒಬ್ಬರು ಅಂದರು:

"ಮೂಗಿನಲ್ಲಿ ಬಾಯಿಯಲ್ಲಿ ಮತ್ತು ಕಣ್ಣಲ್ಲಿ ಕೊಂಚ ನೆತ್ತರವಿತ್ತು!"

ಅವರ ಕಾರ್ಯ ಕೊನೆಗಾಣುತ್ತಲೆ ಅವರಿಗೆ ಇಚ್ಛಾಮರಣ ಸಿಕ್ಕಲೆಂದು ಶ್ರೀರಾಮಕೃಷ್ಣರ ಆಶೀರ್ವಾದವಿತ್ತು. ಅದರಂತೆ ಕುಂಡಲಿನೀ ಶಕ್ತಿಯ ಬಲದಿಂದ ಅವರು ಕೊನೆಯ ಗಳಿಗೆಯಲ್ಲಿ ಆ ಮಹಾ ಆನಂದ ಲೀಲೆಯಲ್ಲಿ ಲೀನರಾದರು!

ಅವರ ವಯಸ್ಸು ಆಗ ಮೂವತ್ತೊಂಭತ್ತು.

"ನಲವತ್ತು ವರ್ಷ ನಾನೇನು ಬಾಳುವುದಿಲ್ಲ" ಎಂದು ಹಿಂದೊಮ್ಮೆ ಎಂದೋ ಅಂದಿದ್ದರು.

ಮರುದಿನ ಶ್ರೀರಾಮಕೃಷ್ಣರಂತೆ ಅವರನ್ನಾದರೂ "ಜಯ ಜಯ" ಕಾರದೊಂದಿಗೆ ಸನ್ಯಾಸಿಗಳು ಬಂಧುಗಳು ಶಿಷ್ಯರು ಹೆಗಲಮೇಲೆ ಹೊತ್ತು ತಂದು ಚಿತೆಯ ಮೇಲೆ ಇರಿಸಿದರು!

ರಾಮನಾಡಿನಲ್ಲಿ ಜರುಗಿದ ಅವರ ಅದ್ಭುತ ವಿಜಯೋತ್ಸವದ ಆ "ಜಯಜಯ" ಘೋಷದ ಗರ್ಜನೆ! — — —

ಕೊನೆಯ ಹೋರಾಟ ಮುಗಿಯುತ್ತಲೆ ಆ ಮಹಾವೀರನ, ಆ ಜಗಜಟ್ಟಿಯ ನಿರ್ಯಾಣೋತ್ಸವದ ಆ "ಜಯಜಯ" ಘೋಷದ ಗರ್ಜನೆ! — — —

ಎಲ್ಲವೂ ನನ್ನ ಕಣ್ಮುಂದೆ ಕಟ್ಟಿವೆ!! — — —

ಕಿವಿಯ ಮೇಲೆ ಇನ್ನೂ ಅಪ್ಪಳಿಸುತ್ತಿವೆ!!!



# ರೊಮೆ ರೊಲಾ(Romain Rolland) ಅವರ

## ಜೀವನ, ಸಾಹಿತ್ಯ ಮತ್ತು ಸಂದೇಶ

ಮೊದಲನೆಯ ಮಹಾಯುದ್ಧ ಮುಗಿದು ಎರಡು ವರ್ಷ ಸಂದಿವೆ. ಅಮೇರಿಕೆಯ ಮುಖ್ಯ ಪಟ್ಟಣವಾದ ನ್ಯೂಯಾರ್ಕ್ ನಗರದ ಒಂದು ಚರ್ಚದಲ್ಲಿ ದೊಡ್ಡ ಸಭೆ ಸೇರಿದೆ. ರೆವ್ಹರಂಡ್ ಜೆ. ಎಚ್. ಹೋಮ್ಸ್ ಎಂಬ ಕ್ರಿಸ್ತೀ ಧರ್ಮಾಧಿಕಾರಿಗಳ ಪ್ರವಚನ. "ಇಂದಿನ ಪ್ರಪಂಚ ದಲ್ಲಿ ಸರ್ವಶ್ರೇಷ್ಠ ಪುರುಷರಾರು?" ಎಂಬ ವಿಷಯ. ಆ ಯುದ್ಧ ನಡೆದಾಗ ಮತ್ತು ಆ ನಂತರ ತಮ್ಮ ಹೆಸರುಗಳಿಂದ ಪ್ರಪಂಚವನ್ನೆಲ್ಲ ಗಜಿಬಜಿಸಿಬಿಟ್ಟ ಸೇನಾಪತಿ, ಯುದ್ಧಮಂತ್ರಿ, ರಾಜಕಾರಣಧುರಂಧರರು-ಎಲ್ಲರನ್ನೂ ಬದಿಗೆ ಸರಿಸಿ ಮೂವರನ್ನು ಆ ಸರ್ವಶ್ರೇಷ್ಠ ಪದವಿಗೆ ಅವರು ಉಮೇದವಾರರನ್ನಾಗಿ ಆರಿಸಿದರು: ರೊಮೆ ರೊಲಾ, ನಿಕೊಲಾಯ್ ಲೆನಿನ್ ಮತ್ತು ಮಹಾತ್ಮಾ ಗಾಂಧಿ.

ಅಸೂಯೆಸ್ವಾರ್ಥಗಳಿಂದ ಹೊತ್ತಿ ದ್ವೇಷತ್ವೇಷಗಳಿಂದ ಧಗ್‌ಧಗಿಸಿ ಉರಿದ ಆ ಮಹಾಯುದ್ಧದ ಬೇಗೆಯಲ್ಲಿ ಮಹಾ ಹತ್ಯಾಕಾಂಡ ನಡೆಯಿತು. ಆ ಯುದ್ಧದ ಬೇಗೆ ಹೊತ್ತಬಾರದೆಂದು, ಫ್ರಾನ್ಸ-ಜರ್ಮನಿ ಜನಾಂಗಗಳಲ್ಲಿ ಗೆಳೆತನ ಮೈದೋರಿ ಬೆಳೆಯಲೆಂದು, ತಮ್ಮ ಅಮರ ಕಾದಂಬರಿ "ಜೀನ್ ಕ್ರಿಸ್ಟಾಫಿ" ಮತ್ತು ಬೇರೆ ಸಾಹಿತ್ಯದ ಮಾರ್ಗವಾಗಿ ರೊಲಾ ಹೆಣಗಿದರು. ಆ ರಣಕುಂಡ ಹೊತ್ತಿದಾಗಲೂ ಅದನ್ನು ನಂದಿಸಲು ತಮ್ಮ ಲೇಖನಿಯಿಂದ ಶಾಂತಿಯ, ಬಂಧುತ್ವದ ಬಾವುಟವನ್ನು ಎತ್ತಿ ಹಿಡಿದರು. ಆ ಪ್ರಲಯಸಂಹಾರ ನಿಂತ ಮೇಲೂ ಸೋತವರ ಮತ್ತು ಗೆದ್ದವರ ಹೃದಯ ಮತ್ತೆ ಹತ್ತಿರ ಬಂದು ಬೆಳಗಲೆಂದು ಆಂತರರಾಷ್ಟ್ರೀಯ ವಿಚಾರವ್ಯವಹಾರಗಳ ರಂಗದ ಮೇಲೆ ನಲ್ಮೆಯ ನಂದಾದೀಪವನ್ನು ಬೆಳಗಿದರು. ಆದರೆ ನೈತಿಕ ಮತ್ತು ಆಧ್ಯಾತ್ಮಿಕ ಧ್ಯೇಯವಾದಿ ಮತ್ತು ಆದರ್ಶಜೀವಿ ರೋಲಾ ಪ್ರಪಂಚದ ಹೋರಾ

ಟದ ಕರ್ಮರಂಗದಲ್ಲಿ ಕಾಲಿಡಲಿಲ್ಲ.

ರಶಿಯದಲ್ಲಿ ಮಹಾಕ್ರಾಂತಿಯನ್ನು ಮಾಡಿ, ಯುರೋಪಖಂಡದ ರಾಜಕಾರಣದ ಕರ್ಮರಂಗದಲ್ಲಿ ಅದ್ಭುತ ಕರ್ತೃತ್ವಶಕ್ತಿಯನ್ನು ತೋರಿ ಅಸಮ ಸಾಹಸದಿಂದ ಮಹಾಪ್ರಭಾವಶಾಲಿಯೂ ವಿಜಯಿಯೂ ಆದ ಲೆನಿನ್ನನ ಬಾಳಿನಲ್ಲಿ ನೈತಿಕ ಧ್ಯೇಯವಾದವಿರಲಿಲ್ಲ. ಆಧ್ಯಾತ್ಮಿಕ ಆದರ್ಶವಾದವಿರಲಿಲ್ಲ.

ಆದರೆ ಪ್ರಪಂಚದಲ್ಲಿಯೇ ಪ್ರಚಂಡವಾದ ಬ್ರಿಟಿಶ್ ಸಾಮ್ರಾಜ್ಯದ ವಿರುದ್ಧ ಭಾರತದ ಸ್ವಾತಂತ್ರ್ಯಯುದ್ಧವನ್ನು ಹೂಡಿ ಶಾಂತಿ, ಪ್ರೀತಿ ಮತ್ತು ಬಂಧುತ್ವದ ಬಾವುಟವನ್ನೆತ್ತಿ, ಅಹಿಂಸೆ—ಅಸಹಕಾರಿತೆ ಸತ್ಯಾಗ್ರಹ ಎಂಬ ದಿವ್ಯ ಶಸ್ತ್ರಾಸ್ತ್ರಗಳ ಬಲದಿಂದ ಗೆಲುವನ್ನು ಗಳಿಸಲು ನಿಂತ ಧೀರೋದಾತ್ತ ವೀರಾಧಿವೀರರಾದ ಮಹಾತ್ಮಾ ಗಾಂಧಿಯವರು ಧ್ಯೇಯವಾದಿಗಳೂ ಸರಿ. ಆದರ್ಶಜೀವಿಗಳೂ ನಿಜ. ಮತ್ತು ಕರ್ಮರಂಗದಲ್ಲಿ ಅದ್ಭುತ ವಿಜಯಿಗಳೂ ಅಹುದು. ಅಂತೆಯೇ ಅವರೇ ಇಂದಿನ ಪ್ರಪಂಚದ ಸರ್ವಶ್ರೇಷ್ಠ ಪುರುಷರು, ಎಂದು ಹೋಮ್ಸರು ಸಾರಿದರು.

ಇಂಥ ಮಹಾವಿಭೂತಿಗಳ ಮಾಲೆಯಲ್ಲಿ ಮೆರೆದ ರೊಮೆ ರೊಲಾ ಅವರ ಜೀವನ, ಸಾಹಿತ್ಯ ಮತ್ತು ಸಂದೇಶ ಇವನ್ನು ಕುರಿತು ಈ ಚಿಕ್ಕ ಬರೆಹ.

## ಜೀವನ

**ಜನ್ಮ ಮತ್ತು ಬಾಲ್ಯ**

ಫ್ರಾನ್ಸ್‌ದೇಶದ ಬರ್ಗಂಡೀ ಪ್ರಾಂತದಲ್ಲಿ ಕ್ಲಾಮಸಿ ಎಂಬುದೊಂದು ಸಣ್ಣ ಊರು. ಇತ್ತ ಹಳ್ಳಿಯೂ ಅಲ್ಲ. ಅತ್ತ ಪಟ್ಟಣವೂ ಅಲ್ಲ. ಗೊಂದಲವಿಲ್ಲ. ಗಡಿಬಿಡಿಯಿಲ್ಲ. ಶಾಂತ ಸರಲ ಜೀವನ. ಅಲ್ಲಿ ೧೮೬೬ನೇ ಇಸವಿಯ ಜನವರಿ ೨೯ನೇ ದಿನ ರೊಮೆ ರೊಲಾ ಎಂಬ ಮಗು ಹುಟ್ಟಿತು. ಸಮಾಜದಲ್ಲಿ ಮಾನ್ಯ

ವಾದ ಮಧ್ಯಮ ಸ್ಥಿತಿಯ ಮನೆತನ. ತಂದೆ ಆ ಊರಲ್ಲಿ ಮುಂದೆ ಬಂದ ಒಬ್ಬ ವಕೀಲ. ತಾಯಿ ಧರ್ಮಿಷ್ಠೆ. ಮಗುವಿನದು ಮಿದುವಾದ ಮೈಕಟ್ಟು. ತಂಗಿ ಮ್ಯಾಡೆಲಿನ್ ಸಹ ಹಾಗೆಯೇ. ಆ ಪುಟ್ಟ ಅಣ್ಣತಂಗಿಯರನ್ನು ಮುದ್ದಾಡಿ ಸಲಹಿ ಬೆಳೆಸುವುದರಲ್ಲಿ ತಾಯಿತಂದೆಗಳಿಗೆ ಎಂತಹ ಮಮತೆ! ಎಂತಹ ಆಸ್ಥೆ !

ಆ ಮನೆತನದಲ್ಲಿ ಭಕ್ತಿ ಶ್ರದ್ಧೆ ಪರಂಪರೆಯಿಂದ ಬೆಳೆದು ಬಂದಿದ್ದವು. ಅವು ಮಗುವಿನಲ್ಲಿ ಮೂಡಿದುದು ಸೋಜಿಗವಲ್ಲ. ಪರಸ್ಪರವಿರೋಧಿಯಾದ ಆದರ್ಶಗಳ ತಾಕಲಾಟದಲ್ಲಿ ಆ ಭಕ್ತಿಶ್ರದ್ಧೆಗಳೇ ಆ ಮಗುವಿನ ಮುಂದಿನ ಬಾಳಿನಲ್ಲಿ ಬೆಳಕು ಬೀರಿದವು. ದಾರಿ ತೋರಿದವು.

ಜುಳು ಜುಳು ಹರಿಯುವ ಕಾಲುವೆಯ ಪಕ್ಕದಲ್ಲಿ ಹಳೆಯ ಮಾದರಿಯ ಮನೆ. ಆ ಕಾಲುವೆಯ ಕಲಕಲ ನಾದದಲ್ಲಿ ಆ ಮಗುವಿನ ಸಂಗೀತದ ಒಲವು ಸಮರಸವಾಗಿ ಬೆಳೆಯಿತು. ಮಗುವಿಗೆ ಸಂಗೀತವೆಂದರೆ ಪಂಚಪ್ರಾಣ. "ಮೊಝಾರ್ಟ್ * ಮತ್ತು ಬೀಥೋವೆನ್* ಅವರ ಸಂಗೀತದಲ್ಲಿಯ ಆ ಆನಂದ, ಆ ಆರ್ತತೆ, ಆ ಕಾಮನೆ, ಆ ಕನಸು ನನ್ನ ರೋಮರೋಮಗಳಲ್ಲಿ ನಲಿದವು. ಅವು ನಾನು, ನಾನು ಅವು, ಇಂತು ಸಮರಸನಾದೆನು. ಎಳೆತನದ ಒಂದು ಕಾಯಿಲೆಯಲ್ಲಿ ಸಾವು ಹತ್ತಿರ ಬಂತೆಂದು ತೋರಿದಾಗ ಮೊಝಾರ್ಟನ ಹಾಡಿನ ಅಲೆಯೊಂದು ನನ್ನ ತಲೆದಿಂಬಿನ ಸುತ್ತು ನಲ್ಲನಂತೆ ನಲ್ಮೆಯಿಂದ ನಲಿದು ಸುಳಿಯುತಲಿದ್ದಿತು. ಮುಂದೆ, ಬಾಳಿನ ಕಗ್ಗತ್ತಲೆಯಲ್ಲಿ ವಿಷಣ್ಣನೂ ನಿರ್ವಿಣ್ಣನೂ ಆದಾಗ ಬೀಥೋವೆನ್ನನ ಸಂಗೀತ ಚಿರಂಜೀವನದ ಬೆಳಕನ್ನು ಬೆಳಗಿತು."

ಬಾಲ್ಯದಲ್ಲಿ ಶೇಕ್ಸ್‌ಪಿಯರನ (ಇಂಗ್ಲಂಡದ ಹೆಸರಾದ ಕವಿ ಮತ್ತು ನಾಟಕಕಾರ ) ವಿಷಯದಲ್ಲಿಯೂ ಭಕ್ತಿ ಪ್ರೀತಿ ಉತ್ಸಾಹ ತಲೆದೋರಿದವು. ಹೀಗೆ ದೇಶವಿದೇಶಗಳಲ್ಲಿಯ ವಿವಿಧ ಕಲೆಗಾರರ ವಿಷಯದಲ್ಲಿ

* ಜರ್ಮನಿಯ ಹೆಸರಾದ ಸಂಗೀತಗಾರರು

ಅಂಕುರಿಸಿದ ಭಕ್ತಿಪ್ರೀತಿಗಳ ಹರವಾದ ರೆಕ್ಕೆಗಳನ್ನು ಹರಡಿ ಅವನ ಹೃದಯ ಧರ್ಮ ಮತ್ತು ದೇಶದ ಸಂಕುಚಿತ ಸೀಮೆಗಳ ಮೇಲೆ ಹಾರಿ ಮುನ್ನುಗ್ಗಿ ವಿಶ್ವವಿಹಾರಿಯಾಯಿತು.

ಆ ಊರು ಆ ಕೇರಿ, ಆ ಮನೆ ಆ ಕಾಲುವೆ, ಆ ನಿಶ್ಚಿಂತ ವ್ಯವಸಾಯ ಆ ಸರಲ ಜೀವನ, ಸಮಾಜದಲ್ಲಿಯ ಆ ಸ್ವತಂತ್ರ ಸ್ಥಾನ— ಎಲ್ಲಕ್ಕೂ ಶರಣು ಹೊಡೆದು ಆ ತಾಯಿತಂದೆ ಪ್ಯಾರಿಸ್ (ಫ್ರಾನ್ಸದ ಮುಖ್ಯ ಪಟ್ಟಣ) ಸೇರಿದರು. ಈ ಎಲ್ಲ ತ್ಯಾಗವೇಕೆ? ಕೇವಲ ಆ ಮಗುವಿಗೆ ಉತ್ತಮ ವಿದ್ಯೆ ಸಿಕ್ಕಲೆಂದು. ಮಕ್ಕಳನ್ನು ಚೆನ್ನಾಗಿ ಸಲಹಿ ದೊಡ್ಡವರನ್ನಾಗಿ ಮಾಡಬೇಕೆಂದು.

ಆ ಮಗು ಕನಸುಗಾರ, ಕಲ್ಪನಾವಿಹಾರಿ. ಬನಸಿರಿ ಮೋಡ ಮುಗಿಲುಗಳ ಸೊಗಸುಗಾರ. ಗಜಿಬಜಿಸಿದ ಆ ಪ್ಯಾರಿಸದ ಗೊಂದಲ ದಲ್ಲಿ ಬೆಚ್ಚಿಬಿದ್ದನು. ಮೊದಮೊದಲು ವಾಸ್ತವತೆಯ ಆ ವಿರಸ ವಾತಾ ವರಣದಲ್ಲಿ ಅವನಿಗೆ ಉಸಿರುಗಟ್ಟಿದಂತಾಯಿತು. ಉನ್ನತ ಆಕಾಂಕ್ಷೆ ಸಮರಸ ವಿಚಾರಗಳ ಸಹಾನುಭೂತಿಗಾಗಿ ಹಂಬಲಿಸಿದನು. ರವಿವಾರ ಮಧ್ಯಾಹ್ನ ಜನಪ್ರಿಯ ಸಂಗೀತ ಕಚೇರಿ ನಡೆದಲ್ಲೆಲ್ಲ ಸುಳಿದು ಸವಿದ ಆನಂದದಿಂದ ಮಾತ್ರ ಅವನ ಹೃದಯಕ್ಕೆ ಸಂತಸ. ಶೇಕ್ಸ್‌ಪಿಯರನಿ ಗಂತೂ ಸರ್ವಸಮರ್ಪಣವನ್ನೇ ಮಾಡಿದನು. "ವಿಜಯಿಯಾದ ವೀರ ನಂತೆ ಶೇಕ್ಸ್‌ಪಿಯರ್ ನನ್ನನ್ನು ಕೈವಶಪಡಿಸಿಕೊಂಡನು. ಅವನ ಅಡಿಯಲ್ಲಿ ನನ್ನ ಹೃದಯವನ್ನು ಹೂವಿನಂತೆ ಸಲ್ಲಿಸಿದೆನು. ಸುರಿಯುವ ಮಳೆನೀರನ್ನು ಬಳಲಿ ಬಾಯಾರಿದ ಭೂಮಿ ಕುಡಿಯುವಂತೆ ಸಂಗೀತ ವನ್ನು ಆರ್ತ ಆತುರತೆಯಿಂದ ಸವಿದೆನು. ಒಂದೆರಡು ವರ್ಷ ಇದೇ ಹುಚ್ಚು. ಮುಂದೆ ನಾರ್ಮಲ್ ಸ್ಕೂಲಿನ ಎಂಟ್ರನ್ಸ್ ಪರೀಕ್ಷೆಯಲ್ಲಿ ಎರಡು ಸಲ ಬಿದ್ದು ಹೋದೆನು. ಸಂಗೀತ ಮತ್ತು ಶೇಕ್ಸ್‌ಪಿಯರ್ ಇವರದೇ ಉಪಕಾರ!"

ಕಲೆಗಾರ, ಕವಿ, ಸಂಗೀತಗಾರ ನಾಟಕಕಾರನಾಗಬೇಕೆಂದನು

ರೊಲಾ. ಅವನ ಹೃದಯದಲ್ಲಿ ಕೆಲ ಸಂಗೀತಕೃತಿ ಅಲೆಯಲೆಯಾಗಿ ತೇಲುತಲಿದ್ದವು. ವೀರರಸದಿಂದ ಉಕ್ಕುವ ಗೀತನಾಟಕಗಳನ್ನು ಬರೆಯಬೇಕೆಂದನು. ಇದಕ್ಕೆಲ್ಲ ಈಗ ಅವಕಾಶವಿಲ್ಲ ಎಂದರು ತಾಯಿ ತಂದೆ. ಪಾಲಿಟೆಕ್ನಿಕ್ ಸ್ಕೂಲಿಗೆ ಸೇರಬೇಕೆಂದು ಹುರಿದುಂಬಿಸಹತ್ತಿದರು. ಕೊನೆಗೆ ೧೮೮೬ರಲ್ಲಿ ನಾರ್ಮಲ್ ಸ್ಕೂಲ್ ಸೇರಿ ಮಾನಸಿಕ ಮತ್ತು ನೈತಿಕ ಶಾಸ್ತ್ರಗಳ ( Moral and mental Sciences) ಅಭ್ಯಾಸ ಮಾಡಬೇಕೆಂದು ತಾಯಿತಂದೆ ಮತ್ತು ಮಗ ಒಪ್ಪಂದಕ್ಕೆ ಬಂದರು. ಆ ಶಾಲೆಯಲ್ಲಿಯ ವಿಶಿಷ್ಟ ಶಿಕ್ಷಣ ಮತ್ತು ಸಾಮಾಜಿಕ ಜೀವನ ಅವನ ವಿಚಾರ ಮತ್ತು ಧ್ಯೇಯದ ಮೇಲೆ ಅಳಿಯದ ಅಚ್ಚನ್ನು ಒತ್ತಿದವು.

ನಾರ್ಮಲ್ ಸ್ಕೂಲ

ಆ ಶಾಲೆಯಲ್ಲಿ ಇತಿಹಾಸ ಮತ್ತು ತತ್ವಜ್ಞಾನ ಅವನ ಪ್ರೀತಿಯ ವಿಷಯು. ಅವುಗಳ ಅಭ್ಯಾಸ ಮಾಡುವಾಗ ಅವನಲ್ಲಿ ಬೆಳೆದ ಐತಿಹಾಸಿಕ ಮತ್ತು ತಾತ್ವಿಕ ದೃಷ್ಟಿ ಅವನ ಕಲಾಜೀವನಕ್ಕೂ ಬಲವನ್ನು ಕೊಟ್ಟಿತು. ಪ್ರಪಂಚದ ಇತಿಹಾಸವೆಂದರೆ ಯುಗಗಳ ಏರಿಳಿತ, ಹಿಂದು-ಇಂದು-ಮುಂದು ಎಲ್ಲವೂ ಒಂದೇ ಸಾಗರದ ಅಲೆ ಎಂದು ಅರಿತನು. ವಿಶಾಲ ದೃಷ್ಟಿಯಿಂದ ವಿಚಾರ ಮಾಡಲು ಕಲಿತನು. ಹಿಂದಿನ ಕಾಲದ ಇತಿಹಾಸವೆಲ್ಲ ಅವನ ಕಣ್ಣಿಗೆ ಸಜೀವವಾಗಿ ಕಾಣಹತ್ತಿತು. ಇಂದಿನ ಕಾಲವನ್ನು ಅನಾಸಕ್ತನಾಗಿ ಕಾಣುವುದನ್ನು ಕಲಿತನು. ಆ ಶಾಲೆಯಲ್ಲಿ ಮನಮುಟ್ಟಿ ಏಕಾಂತದಲ್ಲಿ ವಿದ್ಯಾರ್ಜನೆ ಮಾಡುವಾಗಲೇ ಅವನಿಗೆ ಅನ್ಯಾದೃಶವಾದ ಶ್ರಮಸಹಿಷ್ಣುತೆಯ ಮತ್ತು ಕಾರ್ಯಕ್ಷಮತೆಯ ಅಭ್ಯಾಸವಾಯಿತು.

ಅಲ್ಲಿ ರೊಲಾ, ಜುಆರೇಜ್, ಕ್ಲಾಡೆಲ್ ಮತ್ತು ಪೆಗಿ ಎಂಬ ನಾಲ್ವರು ಗೆಳೆಯರ ಒಂದು ಗುಟ್ಟಾಯಿತು. ತನ್ನ ತನ್ನ ಗೊತ್ತು ಗುರಿಯ ನಿಶ್ಚಿತ ಕಲ್ಪನೆ ಯಾವ ಗೆಳೆಯನಿಗೂ ಇರಲಿಲ್ಲ. ಆದರೆ ತಮ್ಮ ರಾಷ್ಟ್ರವನ್ನು—ಫ್ರಾನ್ಸ್ ದೇಶವನ್ನು—೧೮೭೦ರಲ್ಲಿ ಜರ್ಮನಿಯ ಕೂಡ

ನಡೆದ ಕಾಳಗದಲ್ಲಿ ಸೋತು ಬಲಗುಂದಿ ಎದೆಗುಂದಿ ಹೀನ ದೀನ ವಾದ ತಮ್ಮ ದೇಶವನ್ನು—ಉದ್ಧಾರ ಮಾಡುವ, ಅದರಲ್ಲಿ ಹೊಸ ಹುಮ್ಮಸ್ಸನ್ನು ತುಂಬಿ, ಅದಕ್ಕೆ ಗೆಲುವನ್ನು ವೈಭವವನ್ನು ತರುವ ಉಚ್ಚ ಆದರ್ಶ ಮತ್ತು ಆಶಾವಾದ ಇವು ಅವರೆಲ್ಲರಿಗೂ ಸಮಾನ ವಾದ ಸ್ಫೂರ್ತಿಯನ್ನು ಕೊಟ್ಟಿದ್ದವು. ಮುಂದಿನ ಬಾಳಿನಲ್ಲಿ ಅವರವರ ಕೆಲಸದ ಹಾದಿ ಬೇರೆಬೇರೆಯಾದರೂ ತಮ್ಮ ತಮ್ಮ ಕ್ಷೇತ್ರದಲ್ಲಿ ಅವರು ಮಾಡಿದ ಕಾರ್ಯ, ತೋರಿದ ಅಚಲ ಶ್ರದ್ಧೆ, ಧೈರ್ಯ, ಸ್ಥೈರ್ಯ, ತ್ಯಾಗಗಳಿಂದ ಅವರ ದೇಶ ಹೊಸ ಹುರುಪಿನಿಂದ ಸಿಡಿದೆದ್ದು ನಿಂತಿತು.

**ಕಲೆಗಾಗಿ ಕಲೆಯೇ?**

ಶಾಲೆಯಲ್ಲಿಯ ಓದು ಮುಗಿಯಿತು. ಮುಂದೇನು ಎಂಬ ಸಮಸ್ಯೆ ಮತ್ತೆ ಬಂದು ನಿಂತಿತು. ಕಲೆಗಾರನಾಗಿ ಕಲಾ ಸೃಷ್ಟಿಯನ್ನು ಮಾಡುವುದೇ? ನಿಜವಾಗಿಯೂ ಅದೇ ಅವನ ಹೃದಯದ ಹಿರಿಬಯಕೆ. ಆದರೆ ತನ್ನ ಮನಸ್ಸಿಗೆ ಬಂದು ದಕ್ಕಿಂತ ಬಾಳಿಗೆ ಬೇಕೆನಿಸಿದುದನ್ನೇ ಮಾಡಬೇಕಲ್ಲವೇ ? ಹೃದಯದ ಕಲೆಯೋ ? ಬಾಳಿನ ಬಲೆಯೋ ? ಯಾವ ಹಾದಿ ?

"ಏನು ಮಾಡುವುದು ? " ಎಂಬ ಹೆಸರಿನ ಒಂದು ಪುಸ್ತಕ ಆ ವರ್ಷ ಪ್ರಸಿದ್ಧವಾಯಿತು. ಯುಗಪುರುಷನಾದ ಟಾಲ್ಸಟಾಯ್ ಬರೆದುದು. ಅದರಲ್ಲಿ ಅವನು ಕಲೆಯ ಕೊಲೆಯನ್ನೇ ಮಾಡಿದ್ದನು. ರೊಲಾನ ಹೃದಯಸರ್ವಸ್ವವಾದ ಸಂಗೀತವೆಂದರೆ "ಮಾನವನನ್ನು ಕರ್ತವ್ಯವಿಮುಖನನ್ನಾಗಿ ಮಾಡುವ ವಿಲಾಸ ! " ಎಂದು ಹೀಯಾಳಿ ಸಿದ್ದನು. ಬೀಥೋವೆನ್ ಎಂದರೆ ಕೀಳು ವಿಕಾರಗಳನ್ನು ಕೆರಳಿಸುವ ಸಂಗೀತಗಾರ ! ಶೇಕ್ಸ್‌ಪಿಯರ್ ಥರ್ಡ್‌ಕ್ಲಾಸ ಅಲ್ಲ ಫೋರ್ತ್‌ರೇಟ್ ಕವಿ ! ಆಧುನಿಕ ಕಲೆಯನ್ನೆಲ್ಲ ಕಸದಂತೆ ಗುಡಿಸಿ ತಿಪ್ಪೆಯ ಮೇಲೆ ಹಾಕಿದ್ದನು !

ಟಾಲ್ಸ್‌ಟಾಯನೆಂದರೆ ಅಂದಿನ ತರುಣರ ಆಶೆ, ಆದರ್ಶ. ಸುತ್ತೆಲ್ಲ

ಕವಿದ ಅನೀತಿಯ ಕತ್ತಲೆಯಲ್ಲಿ ಅವನೇ ಬೆಳಕು ತೋರುವ ಮುಂದಾಳು. ನಿರ್ಮಲ ಮನಸಿನಿಂದ, ಧೀರ ಹೃದಯದಿಂದ 'ಸತ್ಯಂ! ಶಿವಂ!' ಎಂದು ಆತ್ಮೋದ್ಧಾರದ ಹಾದಿಯ ಮೇಲೆ ಹೆಜ್ಜೆಯಿಕ್ಕು ತ್ತಿರುವ ತಪಸ್ವಿ ಟಾಲ್ಸ್ಟಾಯ್ 'ಸುಂದರಂ' ಎಂಬುದನ್ನು ಮಾತ್ರ ಹಾದಿಯ ಮೇಲಿನ ಮುಳ್ಳೆಂದು ತೆಗೆದು ಮೂಲೆಗೆಸೆದನು! ಪ್ರಪಂ ಚದ ಅದ್ವಿತೀಯ ಕಾದಂಬರಿಕಾರ ಕತೆಗಾರ ಎಂದು ಹೆಸರಾದ ಕಲೆ ಗಾರ ಟಾಲ್ಸ್ಟಾಯ್ ಕಲೆಯ ಕೊಲೆಗಾರನಾಗಿದ್ದನು! ತರುಣ ರೊಲಾನ ಹೃದಯ ತಳಮಳಿಸಿತು! ಸಂಗೀತ, ಸಾಹಿತ್ಯ, ಕಲೆ—ಎಲ್ಲ ವನ್ನೂ ತೊರೆದು ಆ ತಪಸ್ವಿಯ ಬೆನ್ನು ಹತ್ತುವುದೇ? ಅಥವಾ ಹೃದ ಯದ ಕೂಗಿಗೆ ಓಕೊಟ್ಟು ಬಾಳನ್ನೆಲ್ಲ ಕಾವ್ಯ, ಸಾಹಿತ್ಯ, ಸಂಗೀತ ಕಲೆಗಾಗಿ ಮೀಸಲಾಗಿ ಇರಿಸುವುದೇ?

ಮನಸು ಗಾಸಿಯಾಯಿತು! ಒಂದು ಸೋಜಿಗದ ಸಾಹಸ ಮಾಡಿ ದನು. ತನ್ನ ಚಿಕ್ಕ ಕೋಣೆಯಲ್ಲಿ ಕುಳಿತು ಒಂದು ದಿನ ಒಂದು ಕಾಗದ ಬರೆದನು. ಆ ಬಿಟ್ಟ ಬಾಣ ನೆಗೆದು ದೂರ ದೂರ ಹೋಗಿ ರಶಿಯದ ಎದೆಯಲ್ಲಿ ನೆಟ್ಟಿತು. ಪ್ರಪಂಚದ ಪ್ರಖ್ಯಾತ ಕಾದಂಬರಿ ಕಾರ, ಕತೆಗಾರ, ಕಲೆಗಾರ, ತತ್ತ್ವಜಿಜ್ಞಾಸು, ತಪಸ್ವಿ ಟಾಲ್ಸ್ಟಾಯ ನಲ್ಲಿ ಆ ಅಜ್ಞಾತ ವಿದ್ಯಾರ್ಥಿ ತನ್ನ ಎದೆಯ ತಳಮಳವನ್ನು ತೋಡಿ ಕೊಂಡನು! ತನ್ನ ಮನಸನ್ನು ಗಾಸಿಗೊಳಿಸಿದ ಸಂದೇಹಗಳನ್ನು ಸಮಸ್ಯೆಗಳನ್ನು ಅರುಹಿ "ದಾರಿತೋರು!" ಎಂದು ಕೂಗಿಕೊಂಡನು! ಆರ್ತನ ಕೂಗಿಗೆ ಮುಗಿಲು ಮಾರುತ್ತರವನ್ನೀಯುವುದೇ?

ಮುಂದೆ ಮತ್ತೊಂದು ಕಾಗದ ಬರೆದನು. ಅದೂ ಹೋಯಿತು. ದಿನಗಳೆದಂತೆ ರೊಲಾ ನಿರಾಶನಾದನು. ಎಲ್ಲಿ ನಾನು? ಎಲ್ಲಿ ಟಾಲ್ಸ್ ಟಾಯ್? ಎಂದುಕೊಂಡನು. ಆದರೆ ಒಂದು ಸಂಜೆ ತನ್ನ ಕೋಣೆಗೆ ಮರಳಿದಾಗ ಅಂಚೆಯವನು ಇಟ್ಟು ಹೋದ ಲಖೋಟೆಯೊಂದನ್ನು ಕಂಡನು. ೩೮ ಪುಟಗಳ ಪತ್ರ! ರಶಿಯದ ಸಾಹಿತ್ಯಸಮ್ರಾಟ್

ಟಾಲ್ಸ್ಟಾಯನು ಫ್ರಾನ್ಸದ ಆ ಅಜ್ಞಾತ ತರುಣನಿಗೆ ಆ ಬಡ ವಿದ್ಯಾರ್ಥಿಗೆ ಅವನ ಫ್ರೆಂಚ್ ಭಾಷೆಯಲ್ಲಿ ಬರೆದುದು!

"ಪ್ರಿಯ ಮಿತ್ರನೇ, ನಿನ್ನ ಮೊದಲನೆಯ ಕಾಗದ ನನ್ನ ಕೈಸೇರಿದೆ. ಅದು ನನ್ನ ಅಂತಃಕರಣವನ್ನು ಮಿಡಿಯಿತು. ಅದನ್ನು ಓದುವಾಗ ಕಂಬನಿ ಉಕ್ಕಿದವು !........" ಆ ತಪಸ್ವಿಯ ಆ ಪತ್ರವನ್ನು ಓದುವಾಗ ಆ ತರುಣ ವಿದ್ಯಾರ್ಥಿಯು ಕಂಬನಿ ಉಕ್ಕಿರಲಾರವೇ ? ಕಲೆಯ ಹುಚ್ಚು ಕಲೆಗಾರನ ಗುರಿಯಲ್ಲ. ಮಾನವನ ಸೇವೆಯ ಹುಚ್ಚು, ಅವನಿಗೆ ನಲ್ಮೆಯ ನೆರವನ್ನೀಯಬೇಕೆನ್ನುವ ಹುಚ್ಚು, ಮಾನವ ಕುಲವೆಲ್ಲ ಒಂದೇ ಎಂಬ ಉದಾತ್ತ ಭಾವನೆಯಿಂದ ಅದರ ಕಲ್ಯಾಣ ಸಾಧಿಸಬೇಕೆನ್ನುವ ಹುಚ್ಚು, ಇದೇ ನಿಜವಾದ ಕಲೆಯ ಉನ್ನತ ಆದರ್ಶ. ಈ ಗುರಿಯನ್ನರಿಯದ ಕಲೆಗಾರ ತನ್ನ ಕಲಾಜೀವನವನ್ನು ಸಾರ್ಥಕಗೊಳಿಸಲಾರ. ತನ್ನ ಜೀವನ ಕರ್ತವ್ಯವನ್ನು ಕೊನೆಗಾಣಿಸ ಲಾರ — ಮುಂತಾಗಿ ಕಲೆಯ ಮತ್ತು ಕಲೆಗಾರನ ಗೊತ್ತುಗುರಿಗಳ ವಿಷಯವಾಗಿ ತನ್ನ ವಿಚಾರಗಳನ್ನು ಆ ಪತ್ರದಲ್ಲಿ ಟಾಲ್ಸ್ಟಾಯ್ ಕಾಣಿಸಿದ್ದನು.

ಆ ವಿಚಾರಗಳನ್ನು ಅಂದು ಮೊದಲನೆಯ ಸಲ ಅವನು ಬರೆದಿದ್ದ ನೆಂತಲ್ಲ. ತನ್ನ ಪುಸ್ತಕದಲ್ಲಿಯೂ ಬೇರೆಡೆಯಲ್ಲಿಯೂ ಅವನು ಆ ವಿಚಾರಗಳನ್ನು ವಿವರಿಸಿಯೇ ಇದ್ದನು. ಅವನ್ನು ರೊಲಾ ಹೊಸ ದಾಗಿ ಓದಿಕೊಂಡನೆಂತಲೂ ಅಲ್ಲ. ಆದರೆ ಆ ಪತ್ರದ ಪರಿಣಾಮ ಅವನ ಮೇಲೆ ಬಹಳಾಯಿತು. ಅದೊಂದು ಹೊಸ, ಮಹತ್ವದ ಹಾಗೂ ಉದ್ಬೋಧಕ ಅನುಭವವಾಯಿತು. ಇಡಿಯೊಂದು ದಿನ (ಅಥವಾ ಎರಡು ದಿನ ಹಿಡಿದರೂ ಹಿಡಿದಿರಬಹುದು) ಕುಳಿತು ಆ ವಿಶ್ವವಿಖ್ಯಾತ ಸಾಹಿತಿ ತಪಸ್ವಿ ಟಾಲ್ಸ್ಟಾಯ್ ೩೮ ಪುಟಗಳ ಪತ್ರವನ್ನು — ನಲ್ಮೆ ಹೊರಸೂಸಿ ಹರಿಯುವ ಅಂತಃಕರಣದಿಂದ ಬರೆದ — ಆ ಪತ್ರವನ್ನು ಪ್ಯಾರಿಸದ ಆವುದೋ ಸಂದಿಯಲ್ಲಿಯ ತನ್ನಂಥ ಹೆಸರುದೆಸೆಯಿಲ್ಲದ

ಒಬ್ಬ ಅಪರಿಚಿತ ಹುಡುಗನಿಗೆ, ಅಜ್ಞಾತ ವಿದ್ಯಾರ್ಥಿಗೆ, ಬರೆದನಲ್ಲ!—ಎಂಬ ಮಾತು ರೊಲಾನ ಅಂತಃಕರಣವನ್ನು ಉಕ್ಕಿಸಿತು ! ಈ ಮಾತನ್ನು ಅವನು ಎಂದಿಗೂ ಮರೆಯಲಿಲ್ಲ. ಮುಂದೆ ಕಲೆಗಾರ, ಸಾಹಿತಿ ಎಂದು ಬಾಳಿದಾಗ ತನ್ನ ಜೀವನಕರ್ತವ್ಯವನ್ನು ಅವನು ಎಂದಿಗೂ ಮರೆಯಲಿಲ್ಲ. "ನೆರವಾಗು ! ದಾರಿತೋರು !" ಎಂಬ ಕೂಗು ಎಲ್ಲಿಂದಲೇ ಬರಲಿ, ಯಾರಿಂದಲೇ ಬರಲಿ, ಆ ಕೂಗಿಗೆ ಮಾರುತ್ತರ ವನ್ನೀಯುವುದು, ಹೆಸರುದೆಸೆಯಿಲ್ಲದ ದಿಕ್ಕದೇಶದ ಬಂಧುಬಾಂಧವರ ಸಂದೇಹವನ್ನು ಪರಿಹರಿಸುವುದು, ಅವರನ್ನು ಸಂತಯಿಸುವುದು, ಈ ಪವಿತ್ರ ಕಾರ್ಯವನ್ನು ಅವನು ಎಂದಿಗೂ ಮರೆಯಲಿಲ್ಲ. ತನಗೆ ಎಂಥ ಸಂಕಟವಿದ್ದರೂ, ಎಂಥ ಅವಸರವಿದ್ದರೂ ಈ ಕರ್ತವ್ಯವನ್ನು ಅವನು ಬದಿಗಿರಿಸಲಿಲ್ಲ. ಟಾಲ್ಸ್ಟಾಯನ ಆ ಒಂದು ಪತ್ರ ಬಿತ್ತಿದ ಬೀಜ ದಿಂದ ಬಂದ ಹುಲುಸಾದ ಬೆಳೆಯನ್ನು ತನ್ನ ಬಾಳಿನಲ್ಲಿ ರೊಲಾ ಬರೆದ ಸಾವಿರಾರು ಪತ್ರಗಳಲ್ಲಿ ಕಾಣಬಹುದು.

ರೋಮ್

ಸ್ವದೇಶ, ಸಂಗೀತ, ಸಾಹಿತ್ಯ, ಟಾಲ್ಸ್ಟಾಯನ ಸಂದೇಶ, ಶೇಕ್ಸ್‌ಪಿಯರನ ಸೆಳೆತ, ಕಲೆಯ ಒಲವು, ಬಾಳಿನ ಉದ್ಯಮ—ಇವೆಲ್ಲ ಕೂಗು ರೊಲಾನ ಕಿವಿಯ ಮೇಲೆ ಮನಸಿನ ಮೇಲೆ ಅಪ್ಪಳಿಸಹತ್ತಿದವು, ಮುಂದೇನು?—ಎಂದು ಹಿಂದುಮುಂದೆ ನೋಡುತ್ತಿರುವಾಗಲೇ ದೈವವೇ ಅವನನ್ನು ಒಮ್ಮಿಂದೊಮ್ಮೆ ಅನಿರೀಕ್ಷಿತವಾಗಿ ರೋಮ್ ಪಟ್ಟಣಕ್ಕೆ ಕರೆದೊ ಯ್ದಿತು. ಆ ವಿದ್ಯಾಸಂಸ್ಥೆಯಿಂದ ಅವನಿಗೆ ಒಂದು ಶಿಷ್ಯವೇತನ ದೊರೆ ಯಿತು. ಎರಡು ವರ್ಷ ಅದನ್ನು ಪಡೆದು ರೋಮ್‌ದಲ್ಲಿದ್ದು ಹಳೆಯ ಕಾಗದ, ಪತ್ರ, ಪುಸ್ತಕ, ವಾಲೆ, ರೆಕಾರ್ಡು, ರಜಿಸ್ಟರು, ಇವನ್ನೆಲ್ಲ ಓದಿ ಇತಿಹಾಸಸಂಕಲನ ಮಾಡುವುದು ಅವನಿಗೆ ಒಪ್ಪಿಸಲಾದ ಕೆಲಸ. ಆ ರಸವಿಲ್ಲದ ಕೆಲಸವನ್ನು ಕೆಲ ದಿನ ಒಳ್ಳೇ ಹುರುಪಿನಿಂದ ಮಾಡಿ ದನು. ಆದರೆ ಧರ್ಮದ ಮತ್ತು ಚರಿತ್ರೆಯ ಇತಿಹಾಸದಲ್ಲಿ ಹೆಸ

ರಾದ ಆ ಮಹಾನಗರವನ್ನು ಮುಟ್ಟಿದಾಗ ಅಲ್ಲಿ ಅವನ ಬಾಳು ರೂಪ ಹೊಂದುವುದೆಂದು ಅವನು ಕನಸುಮನಸಿನಲ್ಲಿ ಸಹ ಕಂಡಿರಲಿಲ್ಲ. ಆ ದೇಶದ ಜನಜೀವನದತ್ತ, ಪ್ರಕೃತಿಸೌಂದರ್ಯದತ್ತ ಅವನ ಮನಸು ಹರಿಯಿತು. ಸುತ್ತೆಲ್ಲ ಸುಳಿದನು. ಕಣ್ಣಾರೆ ಮನದಣಿ ನೋಡಿದನು. ಕಾವ್ಯ, ಕಥೆ, ಕಾದಂಬರಿ, ನಾಟಕ, ಕಲೆ, ಸಂಗೀತ, ಶೇಕ್ಸ್‌ಪಿಯರ್— ಇವೆಲ್ಲವನ್ನೊಳಕೊಂಡ ತನ್ನ ಬಾಳ ಗುರಿಯನ್ನು ಕಂಡನು. ತನ್ನ ಜೀವನಕಾರ್ಯದ ಗುರುತುಗೆರೆಯನ್ನು ಹಾಕಿದನು.

ಜೀವನ ಮತ್ತು ಕಲೆ ಇವುಗಳ ಬಗೆಗೆ ಗೊತ್ತುಗುರಿಯನ್ನು ಕಾಣುವ ವಿಷಯದಲ್ಲಿ ತನಗೆ ಹೆಂಗಳೆಯರಿಬ್ಬರು ದಾರಿ ತೋರಿದರೆಂದು ರೊಲಾ ಹೇಳುತ್ತಾನೆ: ಭಾವಿಕ ಅಂತಃಕರಣದ ಹಾಗೂ ಧರ್ಮನಿಷ್ಠಳಾದ ಅವನ ತಾಯಿ ಮತ್ತು ಮಾಲ್ವಿದಾ ಎಂಬ ನಿರ್ಮಲ ಅಂತಃಕರಣದ ಆದರ್ಶಪ್ರೇಮಿಯಾದ ಒಬ್ಬ ಜರ್ಮನ್ ವೃದ್ಧೆ. ವ್ಯಾಗ್ನರ ಮುಂತಾದ ಮಹಾಪುರುಷರ ಸ್ನೇಹಿತಳಾದ ಆ ಮಾಲ್ವಿದಾ ರೊಲಾನಿಗೆ ಕತೆಗಾರನ ಜೀವನಕಾರ್ಯವನ್ನು ತಿಳಿಸಿದಳು. ರಾಷ್ಟ್ರ, ಭಾಷೆ, ಧರ್ಮ ಮುಂತಾದ ಸಂಕುಚಿತ ಬಂಧನಗಳನ್ನು ಮೀರಿ ವಿಶ್ವವನ್ನಪ್ಪಿ ವಿಶಾಲ ಜೀವನವನ್ನು ಚಿತ್ರಿಸುವುದೇ ನಿಜವಾದ ಕಲೆಗಾರನ ಗುರಿ ಎಂದಳು. ತನ್ನ ಕನಸನ್ನು ರೋಲಾ ನನಸಾಗಿ ಮಾಡದೆ ಇರಲಾರನೆಂದು ಅವಳು ದೂರದೃಷ್ಟಿಯಿಂದ ಕಂಡು ಹಿಡಿದುದು ಅವಳು ಬರೆದಿಟ್ಟ ಜೀವನಸ್ಮೃತಿಯ ಮೇಲಿಂದ ನಿಚ್ಚಳವಾಗಿ ಕಾಣುತ್ತದೆ.

ಮತ್ತೆ ನಾರ್ಮಲ್ ಸ್ಕೂಲ್. ಮತ್ತು ಸಾರ್ಬೋನ್ ಕಾಲೇಜ

ಇಟಲಿಯಲ್ಲಿ ಎರಡು ವರ್ಷ ಮುಗಿ ಮುಗಿಯುವಾಗಲೇ ಪ್ಯಾರಿಸ್‌ದಿಂದ ಕರೆ ಬಂದಿತು. ನಾರ್ಮಲ್ ಸ್ಕೂಲಿನಲ್ಲಿ ರೊಲಾ ಶಿಕ್ಷಕರಾದರು. ಮುಂದೆ ಬರಬರುತ್ತ ಸಾರ್ಬೋನ್ ಕಾಲೇಜದಲ್ಲಿ ಅವರ ಪ್ರವೇಶವಾಯಿತು. ಸಂಗೀತ ಮತ್ತು ಅದರ ಇತಿಹಾಸದ ಪ್ರೊಫೆಸರ್ ಎಂದು ಕೆಲಸ ಮಾಡಿದರು. ಸಂಗೀತಶಾಸ್ತ್ರವನ್ನು

ಅದರ ಬೆಳವಣಿಗೆಯನ್ನು ಮತ್ತು ಇತಿಹಾಸವನ್ನು ಓದುವಾಗ ಕಲಿಸುವಾಗ ಅವರು ಅರಿತರು: ಇಡೀ ಮಾನವಕುಲದ ಆಶೆ, ಆಕಾಂಕ್ಷೆ, ಆದರ್ಶ ಎಲ್ಲವೂಒಂದೇ ಯುಗಯುಗಗಳ ಹವಣಿಕೆಗಳೆಲ್ಲ ಜನಾಂಗಜನಾಂಗಗಳ ಯತ್ನಗಳೆಲ್ಲ ಈ ಗುರಿಯತ್ತಲೇ ಸಾಗಿವೆ. ಪ್ರಗತಿಯ ಹಾದಿಯ ಮೇಲೆ ಮಾನವನು ಹೆಜ್ಜೆಯನ್ನು ಒಂದೇ ಸವನೆ ಹಾಕುತ್ತಿರುವನು. ಮಾನವಕುಲದ ಐಕ್ಯವನ್ನು, ಸಮರಸತೆಯನ್ನು ಬಂಧುತ್ವವನ್ನು ಸಾಧಿಸಹತ್ತಿರುವನು.

ಈ ಆದರ್ಶದ ಸ್ಫೂರ್ತಿಯಿಂದ ಮೈಮರೆತು ಉಪನ್ಯಾಸ ಕೊಡುತ್ತಿರುವಾಗ ಅವರ ವಿದ್ಯಾರ್ಥಿಗಳು ಹುರುಪು ಮತ್ತು ಹಿಗ್ಗಿನಿಂದ ಮೈಮರೆಯುತ್ತಿದ್ದರು. ನಡುನಡುವೆ ಸಂಗೀತದ ಅಲೆಗಳ ಮೇಲೆ ಅವರ ಆತ್ಮಗಳನ್ನು ರೊಲಾ ತೇಲಿಸಿ ನಲಿಸುತ್ತಿದ್ದರು.

ಹೋರಾಟ—ಹದಿನೈದು ವರುಷಗಳು

ಹೀಗೆ ಜೀವನಕಾರ್ಯದ ಸಾಧನೆಯಲ್ಲಿ ಅವರ ಬಾಳಿನ ಮೂವತ್ತು ವರುಷ ಸಂದವು. ಮುಂದೆ ಹೋರಾಟಕ್ಕೆ ಮೊದಲಾಯಿತು. ಫ್ರಾನ್ಸದ ಫಿರಂಗೀದಳದ ನಾಯಕನೊಬ್ಬನಾದ (Artillery Captain) ಡ್ರೆಫಸ್ ಎಂಬ ಯಹೂದಿಯ ಮೇಲೆ ಗೂಢಚಾರನೆಂದು ಆಪಾದನೆ ಮಾಡಲಾಗಿದ್ದಿತು. ಅವನನ್ನು ನ್ಯಾಯಾಸನಕ್ಕೆ ಎಳೆದಿದ್ದರು. ದೇಶದ ಸಾರ್ವಜನಿಕ ಜೀವನ ಅಲ್ಲೋಲಕಲ್ಲೋಲವಾಯಿತು. ಎರಡು ದೊಡ್ಡ ಪಕ್ಷ ತಲೆಯೆತ್ತಿದವು. ಸಮಾಜದ ಮಹಾಜನರೆಲ್ಲ ಒಂದಿಲ್ಲೊಂದು ಪಕ್ಷದವರಾದರು. ಡ್ರೇಫಸ್ ನಿರಪರಾಧಿ ಎಂದು ನ್ಯಾಯಾಸನದ ಎದುರಿನಲ್ಲಿ ಪ್ರತಿಪಾದಿಸಿದನು. ಧರ್ಮದೇಶಗಳ ಸಂಕುಚಿತ ಭಾವನೆಗಳಿಂದ ವಿದೇಶೀ ಯಹೂದಿಯಾದ ಡ್ರೇಫಸ್‌ನನ್ನು ಅನ್ಯಾಯವಾಗಿ ಆಪಾದಿಸಿ ಗೋಳಿಗೆ ಹಾಕುತ್ತಿರುವರೆಂದೂ ಅವನು ನಿರಪರಾಧಿಯೆಂದೂ ಮನವರಿಕೆಯಾಗಿ ಸತ್ಯದ ಮಹಾ ಆವೇಶದಿಂದ ರೊಲಾ ಆರ್ಭಟಿಸಿದರು.

ಡ್ರೇಫಸ್ ಪ್ರಕರಣ

ಹಲವು ತಿಂಗಳು ಫ್ರಾನ್ಸದ ಜನಜೀವನದಲ್ಲಿ ಬಿರುಗಾಳಿ ಬೀಸಿತು. ಬರಬರುತ್ತ ಆ ಸಮಸ್ಯೆಗೆ ಬೇರೆ ಬಣ್ಣ ಬರಹತ್ತಿತು. ವಾತಾವರಣವೆಲ್ಲ ತಿಳಿಯಾ ಯಿತು. ರೊಲಾ ಅರಿತರು: ಬೇರೆ ಬೇರೆ ರಾಜಕೀಯ ಪಕ್ಷಗಳು, ಧರ್ಮಮಾರ್ತಂಡರು ತಮ್ಮ ಸ್ವಾರ್ಥಸಾಧನೆಗಾಗಿ, ಅಧಿಕಾರಲಾಲಸೆ ಗಾಗಿ ಮತ್ತು ಅಹಂಕಾರದ ಸಂತಸಕ್ಕಾಗಿ ಡ್ರೇಫಸ್ ಪ್ರಕರಣವನ್ನು ಬಳಸಿಕೊಂಡರು. ನ್ಯಾಯಾಸನದಲ್ಲಿ ನಿಜವಾದ ನ್ಯಾಯ ಸಿಕ್ಕುವುದು ಸಾಧ್ಯವಿಲ್ಲ. ನ್ಯಾಯನೀತಿಗಳ ಆದರ್ಶಗಳಿಗೆ ಜನಜೀವನದಲ್ಲಿ ಗೆಲು ವಿಲ್ಲ. ಈ ಪಾಠದಿಂದ ರೊಲಾರ ವ್ಯಕ್ತಿತ್ವದ ಮೇಲೆ ಮಹತ್ವದ ಪರಿ ಣಾಮವಾಯಿತು. ಸಮಾಜದಲ್ಲಿ ಸತ್ಯಕ್ಕೆ, ನ್ಯಾಯಕ್ಕೆ, ನೀತಿಗೆ ಗೆಲು ವಿರದಿದ್ದರೂ, ಆ ಸತ್ಯಕ್ಕಾಗಿ, ಆ ನ್ಯಾಯಕ್ಕಾಗಿ, ಆ ನೀತಿಗಾಗಿ ಸರ್ವ ಸ್ವವನ್ನು ತೊರೆಯುವುದರಲ್ಲಿ ಮನಸಿಗೆ ಸಮಾಧಾನ, ಹೃದಯಕ್ಕೆ ಹಿಗ್ಗು, ಆತ್ಮಕ್ಕೆ ಶಾಂತಿ. ಪ್ರಪಂಚದಲ್ಲಿ ಸತ್ಯಕ್ಕಾಗಿ ಸಾವನ್ನು ಎದುರಿ ಸಿದವರ, ನ್ಯಾಯಕ್ಕಾಗಿ ನುಗ್ಗುನುಗ್ಗಾದವರ, ಧರ್ಮಕ್ಕಾಗಿ ದೇಹ ತೊರೆದವರ ಭಕ್ತರಾದರು ರೊಲಾ, ಮಿತ್ರರಾದರು, ಕೈವಾರಿಯಾದರು. ಅಂಥವರಿಗಾಗಿ ಒಬ್ಬನೇ ಆದರೂ, ಸೋಲು ಬರಲಿ, ಗೆಲವು ಬರಲಿ, ಹೋರಾಡುವುದು ಧರ್ಮ ಎಂದು ಮನವರಿತರು.

ಸಾಹಿತ್ಯದ ಕಡೆಗೆ

ಸಾಧನೆಯ ಕಾಲದಲ್ಲಿ ಅವರಲ್ಲಿ ಅಂಕುರಿಸಿದ ಹುಮ್ಮಸ್ಸು ಅವ ರನ್ನು ಸಾಹಿತ್ಯಸೃಷ್ಟಿಗೆ ಹುರಿದುಂಬಿಸಿತು. ಆದರೆ ಅಂದಿನ ಫ್ರಾನ್ಸದ ಸಾಹಿತ್ಯದಲ್ಲಿಯ ಕೊಳೆ ನೋಡಿ ಅವರು ಮತ್ತು ಅವರ ಕೂಡ ಓದಿದ ಗೆಳೆಯರು ನೊಂದರು. ಉಚ್ಚ ಆದರ್ಶವಿಲ್ಲದ, ಹೀನ, ಅಗ್ಗದ, ಮಾನವನ ಕೀಳು ವಿಕಾರ ಗಳನ್ನು ಉದ್ರೇಕಿಸುವ ಸಾಹಿತ್ಯವೇ ಸುತ್ತೆಲ್ಲ ಕಾಣುತ್ತಿತ್ತು. ಪ್ಯಾರಿಸದ ವೃತ್ತಪತ್ರಪ್ರಪಂಚವೆಲ್ಲ ಅಂಥ ಸಾಹಿತ್ಯವನ್ನೇ ಹೊಗಳುತ್ತಿತ್ತು. ಸಮಾಜ ಅದನ್ನೇ ಹಾರೈಸುತ್ತಿತ್ತು. ಇಂಥ ನಿರಾಶೆಯ ನಿರುತ್ಸಾಹಕರ

ಪರಿಸ್ಥಿತಿಯಲ್ಲಿಯೂ ಎದೆಗುಂದದೆ ಗೆಳೆಯರೆಲ್ಲ ಕೂಡಿ ಮನಸ್ಸನ್ನು ನಿರ್ಧಾರಕ್ಕೆ ತಂದರು. ನೀತಿಯ ನಿರ್ಮಲತೆ, ಸಹನಶೀಲತೆಯ ಶೌರ್ಯ ತ್ಯಾಗದ ಶಾಂತಿ ಇವೆಲ್ಲವುಗಳ ಸಾತ್ವಿಕ ಬಲದಿಂದ ಹೋರಾಟ ಸಾಗಿಸಿದರು. "Cashiers de la Quinzaine (ಕ್ಯಾಶೀರ್ಸ್ ದ ಲಾ ಕ್ವಿಂಝೀನ್)" ಎಂಬ ಪತ್ರಿಕೆಯನ್ನು ಹದಿನೈದು ವರ್ಷ ನಡೆಸಿದರು. ಜಾಹಿರಾತಿಗಾಗಿ ಒಂದು ಕಾಸು ಕೂಡ ವೆಚ್ಚ ಮಾಡಲಿಲ್ಲ. ಪ್ರಸಿದ್ಧ ಏಜೆಂಟರ ಅಂಗಡಿಗಳಲ್ಲಿ ಅದನ್ನು ಕಾಣುವುದು ಅಪರೂಪ. ಉಚ್ಚ ಆದರ್ಶಗಳಿಂದ ಸ್ಫೂರ್ತಿಹೊಂದಿದ ಆ ಪತ್ರಿಕೆಯಲ್ಲಿ ವ್ಯೈದೋರಿದ ಉದಾತ್ತ ಸಾಹಿತ್ಯವನ್ನು ವಿದ್ಯಾರ್ಥಿಗಳು, ವಿದ್ಯಾವಂತರು ಸದಭಿರುಚಿಯುಳ್ಳ ಸಮಾಜದಲ್ಲಿಯ ಕೆಲವರು ಮಾತ್ರ ಓದುತ್ತಿದ್ದರು. ರೊಲಾ ಬರೆದ ನಾಟಕಗಳೂ, "Beethoven" (ಬೀಥೊವೆನ್) "Michael Angelo" (ಮಾಯ್ಕೆಲ್ ಆಂಜೆಲೋ) ಎಂಬ ಜೀವನಚರಿತ್ರೆಗಳೂ, "Jeanne Chritsophe" (ಜೀನ್ ಕ್ರಿಸ್ಟಾಫಿ) ಎಂಬ ವಿಶ್ವವಿಖ್ಯಾತ ಕಾದಂಬರಿಯೂ ಆ ಪತ್ರಿಕೆಯಲ್ಲಿ ಕ್ರಮಶಃ ಪ್ರಕಾಶಿತವಾದವು. ಆ ಹತ್ತು-ಹದಿನೈದು ವರ್ಷಗಳ ಕಾಲದಲ್ಲಿ ರೊಲಾರ ಆರ್ಥಿಕ ಪರಿಸ್ಥಿತಿಯೇನು ಸಮಾಧಾನಕರವಿರಲಿಲ್ಲ. ಆದರೂ ಅವರು ತಮ್ಮ ಯಾವ ಬರೆಹಗಳಿಗೂ ಒಂದು ಕಾಸು ಕೂಡ ಬಯಸಲಿಲ್ಲ. ಅವರೂ ಅವರ ಸಹಕಾರಿಗಳೂ ಕೀರ್ತಿಯ ಮೋಹಕ್ಕೆ ಬಲಿಬೀಳಲಿಲ್ಲ. ಪತ್ರಿಕೆ ಲೋಕಪ್ರಿಯವಾಗಲೆಂದು ಜನಸಾಮಾನ್ಯರ ಕೀಳು ವಿಕಾರಗಳನ್ನು ತೃಪ್ತಿಪಡಿಸಲಿಲ್ಲ. ಅದು ಸುಮಾರು ಹದಿನೈದು ವರ್ಷ ನಡೆದು ನಿಂತು ಹೋಯಿತು. ಆದರೆ ಆ ರಸಿಕ ಕಲೋಪಾಸಕ ತರುಣ ತಂಡದ, ಆ ಮಿತ್ರ ಮಂಡಲದ ನಿರ್ಮಲ ನೀತಿಯ, ವಿಶಾಲ ಆಕಾಂಕ್ಷೆಯ, ಉಚ್ಚ ಆದರ್ಶದ, ಉದಾತ್ತ ಆಶಾವಾದದ, ಅತುಲ ತ್ಯಾಗದ, ಅಚಲ ಧೈರ್ಯದ, ಪವಿತ್ರ ಕರ್ತವ್ಯದ ಮತ್ತು ಉಜ್ವಲ ಸಾಹಿತ್ಯದ ಅಮರ ಸ್ಮಾರಕವಾಗಿದೆ ಆ ಪತ್ರಿಕೆ.

ಇನ್ನೂ ಒಂದು ಕ್ಷೇತ್ರದಲ್ಲಿ ರೊಲಾರ ಸತ್ವಪರೀಕ್ಷೆಯಾಯಿತು.

ರಂಗಭೂಮಿ

ಸಾಹಿತ್ಯವಂತೆಯೇ ಅಂದಿನ ಫ್ರೆಂಚ್ ರಂಗಭೂಮಿಯೂ ಕೀಳು ತರಗತಿಗೆ ಇಳಿದಿದ್ದಿತು. ಹೀನ ವಿಚಾರಗಳ ಕೀಳು ವಿಕಾರಗಳ ರಭಸದ ಜೀವನದಲ್ಲಿ ಸಮಾಜಕ್ಕೆ ಅನೀತಿಮಯ ಸ್ವೈರವಿಹಾರ, ಅನಿರ್ಬಂಧ ಆಚಾರ, ಸ್ವಚ್ಛಂದ ವಿಲಾಸ ಇವೆಲ್ಲ ಸೊಗಸಾಗಿ ಕಾಣುತ್ತವೆ. ಇಂಥ ಮೋಹಕವಾದ ಆದರ್ಶಹೀನ ಜೀವನಚಿತ್ರಗಳೇ ಪ್ಯಾರಿಸದ ರಂಗಭೂಮಿಯನ್ನು ಹಿಡಿದುಕೊಂಡಿದ್ದವು. ನಾಟ್ಯಸೃಷ್ಟಿಯಲ್ಲಿ ರಂಗಭೂಮಿಯಲ್ಲಿ ಹೊಸ ಕ್ರಾಂತಿಯನ್ನು ಹೂಡಿ ಸದಭಿರುಚಿಯನ್ನು ಹುಟ್ಟಿಸಿ ಜನತೆಯಲ್ಲಿ ನವಚೈತನ್ಯವನ್ನು ಹುಟ್ಟಿಸಬೇಕೆಂದು ರೊಲಾ ನಿಶ್ಚಯ ಮಾಡಿದರು. ನಾಟ್ಯಸೃಷ್ಟಿಯ ನಿಜವಾದ ಉದ್ದೇಶವೇನು, ಕಾರ್ಯವಾವುದು, ಅಂದಿನ ರಂಗಭೂಮಿಯ ಮೇಲೆ ಅವಶ್ಯವಾದ ಸುಧಾರಣೆ ಯಾವವು ಇವೆಲ್ಲವುಗಳ ವಿಷಯದಲ್ಲಿ ನಿಬಂಧಗಳನ್ನು ಬರೆದರು. ಪುಸ್ತಕಗಳನ್ನು ಪ್ರಕಟಿಸಿದರು. ವೃತ್ತಪತ್ರಗಳಲ್ಲಿ ಲೇಖಗಳನ್ನು ಪ್ರಸಿದ್ಧಿಸಿದರು. ಪ್ರಚಾರ ಮಾಡಿದರು. ತಮ್ಮ ವಿಚಾರಗಳನ್ನು ಉದಹರಿಸುವುದಕ್ಕಾಗಿ ನಾಟಕಗಳನ್ನು ರಚಿಸಿದರು. ಅವನ್ನು ರಂಗಭೂಮಿಯ ಮೇಲೂ ತಂದರು.

ಆದರೆ ಅವರ ಕಾರ್ಯಕ್ಕೆ ಉತ್ತೇಜನ ಸಿಕ್ಕಲಿಲ್ಲ. ವಿರೋಧಿಗಳ ಟೀಕೆ ಅವರ ಸಹಕಾರಿಗಳ ಉತ್ಸಾಹವನ್ನು ಕುಗ್ಗಿಸಿತು. ಬಲವನ್ನು ಹಿಮ್ಮೆಟ್ಟಿಸಿತು. ಎಲ್ಲರೂ ರೊಲಾರನ್ನು ತೊರೆದರು.

ಸಹಕಾರಿಗಳ ಮಾನವಸಹಜವಾದ ದುರ್ಬಲತೆಯಿಂದ ಕೈಕೊಂಡ ಕಾರ್ಯ ಸಫಲವಾಗಲಿಲ್ಲ. ನಿರಾಶೆ! ಡ್ರೆಫಸ್ ಪ್ರಕರಣದಲ್ಲಿ ಸಂಚುಗಾರಿಕೆಯ ಜನಜೀವನದ ಕೊಳೆಯನ್ನು ಕಂಡರು. ಅಲ್ಲಿಯೂ ನಿರಾಶೆ! ಜನತೆಯ ರಂಗಭೂಮಿ (Peoples Theatre) ಸಂಪ್ರದಾಯದಾಸರ ಮತ್ತು ವಿಲಾಸಪ್ರಿಯರ ಕುಹಕ ಅಸೂಯೆಗೆ ಬಲಿಯಾಯಿತು. ಇಲ್ಲಿಯೂ ನಿರಾಶೆ! ಮತ್ತು ಬೌದ್ಧಿಕ ಸಹಕಾರಿತೆಯ ಬಯಕೆಯಿಂದ

ಕಟ್ಟಲಾದ ದಾಂಪತ್ಯಜೀವನದ ಸೊಗಸಾದ ಕನಸು ಬಯಲಾಸೆಯಾಗಿ ದುರಂತದಲ್ಲಿ ಕೊನೆಗಂಡಿತು. ಎಲ್ಲೆಲ್ಲೂ ನಿರಾಶೆ! ಅವರು ಏಕಾಕಿಯಾಗಿ ನಿಂತರು! ಆದರೆ ಅವರ ಆಶಾವಾದ ಕುಗ್ಗಲಿಲ್ಲ! ಆದರ್ಶಗಳಲ್ಲಿಯ ಅವರ ಆಸಕ್ತಿ ಕುಸಿಯಲಿಲ್ಲ! ಬಾಳನ್ನು ಕಲೆಯಿಂದ ಗೆದ್ದ, ದುಃಖವನ್ನು ಕಾರ್ಯದಿಂದ ಗೆದ್ದ ಪ್ರಪಂಚದ ಮಹಾವಿಭೂತಿಗಳನ್ನು ನೆನೆದರು! ಅವರ ಚರಿತ್ರೆಗಳನ್ನು ಬರೆದರು! ಅವರ ಉಜ್ವಲ ಸಂದೇಶವನ್ನು ಸಾರಿದರು! ರಂಗಭೂಮಿಯನ್ನು ತೊರೆದರು! ಕಾಲೇಜಕ್ಕೆ ಶರಣು ಹೊಡೆದರು! ಏಕಾಂತವನ್ನು ಸೇರಿದರು!

**ಏಕಾಂತ-ಸಾಧನೆ**

ಹೋರಾಟದ ಹದಿನೈದು ವರ್ಷಗಳಲ್ಲಿ ಐದು ವರ್ಷಗಳನ್ನು ಜನಾಂತದಲ್ಲಿ ಕಳೆದರು. ಹತ್ತು ವರ್ಷಗಳನ್ನು ಏಕಾಂತದಲ್ಲಿ ಕಳೆದರು. ಜನಾಂತದಲ್ಲಿ ಸುಳಿದಾಗ ಪ್ಯಾರಿಸದ ಜನತೆ ಅವರನ್ನು ಏನೋ ಒಬ್ಬ ಸಂಗೀತಗಾರ, ಪ್ರೊಫೆಸರ್, ಇಂದಿಲ್ಲ ನಾಳೆ ಒಳ್ಳೆಯ ನಾಟಕಗಳನ್ನು ಬರೆಯಬಹುದಾದ ನಾಟಕಕಾರ ಎಂದು ಮಾತ್ರ ಅರಿತಿದ್ದಿತು. ಆಮೆಯಂತೆ ಅವರು ಏಕಾಂತದಲ್ಲಿ ಸೇರಿಕೊಂಡಾಗ ಜನತೆ ಅವರನ್ನು ಮರೆತೇ ಬಿಟ್ಟಿತು. ಪ್ರಪಂಚದಲ್ಲಿಯ ಉಜ್ವಲ ಸಾಹಿತ್ಯವನ್ನು ಅವರು ಸೃಷ್ಟಿಸುತ್ತಿರುವಾಗ ಸಾಹಿತ್ಯಕ್ಷೇತ್ರದಲ್ಲಿ, ಸಾಹಿತಿಮಂಡಲದಲ್ಲಿ ಅವರ ಹೆಸರು ಸಹ ಕೇಳದಂತಾಯಿತು. ಪ್ಯಾರಿಸದ, ಆ ಮಹಾಪಟ್ಟಣದ, ಜನಜೀವನದ ಸಂಸ್ಕೃತಿಯ ಅಮರ ಚಿತ್ರಗಳನ್ನು ತಮ್ಮ ಲೇಖನಿಯಿಂದ ಅವರು ತೆಗೆಯುತ್ತಿರುವಾಗ ಆ ಜನಸಮುದ್ರದಲ್ಲಿ ಅವರು ಎಲ್ಲಿಯೋ ಮುಳುಗಿ ಕಣ್ಣಿಗೆ ಕಾಣದಾಗಿದ್ದರು. ಏಕಾಂತದಲ್ಲಿ ತಮ್ಮ ಸಾಧನೆಯನ್ನು ಕೈಕೊಂಡಿದ್ದರು. ತಮ್ಮ ವ್ಯಕ್ತಿತ್ವವನ್ನು ರೂಪಿಸುವುದರಲ್ಲಿದ್ದರು.

**ಮೂರ್ತಿ-ಚಿತ್ರ**

ಪ್ಯಾರಿಸದ ಹೃದಯದ ಆಳದಲ್ಲಿ ಹಲವು ಅಂತಸ್ತುಗಳ ಮಹಲು. ಅದರ ಐದನೆಯ ಅಂತಸ್ತಿನಲ್ಲಿ ಮೂಲೆಯ ಎರಡು ಚಿಕ್ಕ ಬಾಡಿಗೆಯ ಕೋಣೆಗಳಲ್ಲಿ

ರೊಲಾರ ವಾಸ. ಅವೇ ಅವರ ಸಾಧನೆಯ ಕರ್ಮಭೂಮಿ. ಕೆಳಗಿನಿಂದ ಸುತ್ತಿ ಸುತ್ತಿ ಹತ್ತಿ ಮೇಲೆ ಹೋಗಲು ಕಟ್ಟಿಗೆಯ ಮೆಟ್ಟಲು. ಆ ಸಾಧನಾಮಂದಿರದಲ್ಲಿ ಕುಳಿತರೆ ಕೆಳಗಿನಿಂದ ಗಂಭೀರ ಸಮ್ಮಿಶ್ರ ಗರ್ಜನೆ ಕಿವಿಗೆ ಬಂದು ಅಪ್ಪಳಿಸುತಿದ್ದಿತು, ದೂರದ ಬಿರುಗಾಳಿಯ ಆರ್ಭಟೆಯಂತೆ. ಬೀದಿಯಲ್ಲಿ ಭಾರವಾದ ಬಸ್ಸು ಭರ್‌ರ್‌ರ್ರೆಂದು ಮುನ್ನುಗ್ಗುತ್ತಿರಲು ಮೇಜಿನ ಮೇಲಿನ ಗ್ಲಾಸು ಥರಥರಿಸಿ ದನಿಗೊಡುತ್ತಿದ್ದಿತು. ನೆರೆಯಿಲ್ಲ. ನಾರಿಯಿಲ್ಲ. ನೌಕರರಿಲ್ಲ.

ಆ ಕರ್ಮರಂಗದ ಕಿಟಕಿಯ ಹತ್ತರ ಸಣ್ಣದೊಂದು ದೇವದಾರು ಕಟ್ಟಿಗೆಯ ಮೇಜು, ಎರಡು ಖುರ್ಚಿ, ಒಂದು ಸಣ್ಣ ಸ್ಟವ್ಹ್. ಕಿಟಕಿಯಲ್ಲಿ, ಖುರ್ಚಿಗಳ ಮೇಲೆ, ಮೇಜಿನ ಮೇಲೆ, ಗೋಡೆಗಳ ಮೇಲೆ— ಎಲ್ಲೆಲ್ಲಿಯೂ ಬಳ್ಳಿ ಹಬ್ಬಿದಂತೆ ಹರಡಿದ ಪುಸ್ತಕಗಳು, ಕೈಬರೆಹದ ಪ್ರತಿಗಳು. ಗೆಳೆಯರ ಭಾವಚಿತ್ರ ಅಲ್ಲೊಂದು ಇಲ್ಲೊಂದು ಕಾಣುತ್ತಿವೆ. ಮೇಜಿನ ಮೇಲೆ ಭೀಥೊವೆನ್ನನ ಸಣ್ಣದೊಂದು ಅರ್ಧಮೂರ್ತಿ. ಎಲ್ಲಿಯೂ ಸಿರಿಯ ಸೋಂಕಿಲ್ಲ. ಸೊಗಸಿನ ವಿಲಾಸವಿಲ್ಲ. ಫ್ಯಾಶನ್ನಿನ ಆಡಂಬರವಿಲ್ಲ. ದರಿದ್ರ ವಿದ್ಯಾರ್ಥಿಯ ಅಭ್ಯಾಸದ ಕೋಣೆ, ಕಂಗಾಲ ಕಲೆಗಾರನ ಕರ್ಮಭೂಮಿ.

ಆ ಪುಸ್ತಕಗಳ ಕಾಡಿನಲ್ಲಿ ರೊಲಾ ಕುಳಿತಿರುವರು, ಸನ್ಯಾಸಿಯಂತೆ. ಬಡವಾದ ಎತ್ತರವಾದ ದೇಹ. ಬಯಲುಗಾಳಿಯಲ್ಲಿ ಬಿಸಿಲಿಗೆ ವಿಶೇಷವಾಗಿ ಹೋಗದೆ ಇದ್ದುದರಿಂದ ನಿಸ್ತೇಜವಾದ ಮೈಬಣ್ಣ. ಸಾಕಷ್ಟು ನಿದ್ದೆ ಕಾಣದ ಕೂಲಿಕಾರನ ಮೋರೆಯಂತೆ ಬತ್ತಿದ ಮತ್ತು ರೇಖೆ ಮೂಡಿದ ಮುದ್ರೆ. ತಲೆಯಮೇಲೆ ನರೆಯಹತ್ತಿದ ಕೂದಲು. ತುಟಿಯ ಮೇಲೆ ನೆರಳಿನಂತೆ ಬಿದ್ದ ಮೀಶೆ. ಸೊರಗಿದ ಸಣ್ಣ ಕೈ. ಸಾದಾ ಬಟ್ಟೆಬರೆ. ಮಿದುವಾದ ಮಾತು. ಅತ್ತಿತ್ತ ಸುಳಿದಾಡುವ ರೀತಿ ಮಿದುವಾದುದು, ಮಿತವಾದುದು. ರಭಸವಿಲ್ಲ. ಗಡಿಬಿಡಿಯಿಲ್ಲ. ನಡಿಗೆ ಮೆಲ್ಲಗೆ. ಅವರ ಸುತ್ತೆಲ್ಲ ಮಿದುವಾದ ರೇಶಿಮೆಯ ತೆಳುವಾದ

ಮುಸುಕು ಅಲೆಯಲೆಯಾಗಿ ತೇಲುತ್ತಿರುವಂತೆ ಭಾಸವಾಗುತ್ತಿದ್ದಿತು.

ಕುಳಿತಲ್ಲಿಯೇ ಕುಳಿತು ಪುಸ್ತಕದಲ್ಲಿಯ ಹುಳುವಿನಂತೆ ಬಾಳನ್ನು ಸಾಗಿಸುತ್ತಿರುವುದರಿಂದ ಅವರು ಮೊದಲನೋಟಕ್ಕೆ ನಿಸ್ತೇಜರಾಗಿ ದಣಿದವರಂತೆ ಕಾಣುವರು. ಆದರೆ ಅವರ ಮುಖ ಮುದ್ರೆಯನ್ನು ಸೂಕ್ಷ್ಮವಾಗಿ ನಿರುಕಿಸಿದರೆ, ಅವರ ಕಣ್ಣಲ್ಲಿ ಕಣ್ಣಿಟ್ಟು ನೊಡಿದರೆ ಅಲ್ಲಿ ಧೀರ ಗಂಭೀರ ಜ್ಯೋತಿ ಮಿನುಗುವುದು. ಆಳವಾದ ತಿಳಿನೀರಿನಂತೆ ತಿಳಿನೀಲಿ ಬಣ್ಣದ ಆ ಕಣ್ಣುಗಳಲ್ಲಿಯ ಬೆಳಕು ಮೋಡದಲ್ಲಿ ಮಿನುಕುವ ಮಿಂಚಿನಂತೆ ನೋಟಕ್ಕೆ ಪ್ರಸನ್ನತೆಯನ್ನು ಬೀರುತ್ತಿದ್ದಿತು. ಆ ಕಣ್ಣುಗಳಿಂದ ಹೊರಚಿಮ್ಮುವ ನೋಟದಿಂದ ಮೊಗದ ಮೇಲೆಲ್ಲ ಬೆಳಕು ಉಕ್ಕುತ್ತಿದ್ದಿತು. ಆ ನೀಳ ದೇಹಯಷ್ಟಿಯಿಂದೆಲ್ಲ ಬೆಳಕು ತರಂಗತರಂಗವಾಗಿ ಚಿಮ್ಮುತ್ತಿದ್ದಿತು.

ಸ್ವಿತ್‌ಝರ್ಲಂಡದ ಸ್ಮೋನೆಕ್ ಎಂಬ ಹಳ್ಳಿಯಲ್ಲಿ ಅವರನ್ನು ಕಂಡ ಶ್ರೀ ದಿಲೀಪ ಕುಮಾರ ರಾಯ್ ಹೇಳುತ್ತಾರೆ: "........ಕಳೆಗುಂದಿದ ಮುಖ. ತಿಳಿಹಸುರುಗಟ್ಟಿದ ಕಣ್ಣು. ಬೆನ್ನು ಕೊಂಚ ಬಾಗಿದೆ. ಬಲಗುಂದಿದ ದೇಹ. ದನಿಯಲ್ಲಿ ಮಿದುವಿದೆ, ಆಳವಿಲ್ಲ. ಮೊದಲ ನೋಟಕ್ಕೆ ನನಗೆ ನಿರಾಶೆಯೇ ಆಯಿತು........ಆದರೆ ನೋಡನೋಡುತ್ತ ಅವರ ಕಣ್ಣಲ್ಲಿಯ ಕಾಂತಿ ಮಾಟ ಬೀರಿದಂತೆನಿಸಿತು. ಅಲ್ಲಿ ತಪಸ್ಸಿನ ತೇಜ ಕಂಡಿತು. ಗೂಢ ಗಾಂಭೀರ್ಯ ಕಂಡಿತು. ನೋಡಿನೋಡಿದಂತೆಲ್ಲ, ಅವರನ್ನು ಅರಿತಂತೆಲ್ಲ ಆ ಕಣ್ಣುಗಳಲ್ಲಿಯ ದಿವ್ಯ ಮಂತ್ರ ನನ್ನ ಮನಸನ್ನು ಸೆಳೆಯಿತು........" ಒಟ್ಟಿನಲ್ಲಿ ಅವರು ಸಾಧನಾವಸ್ಥೆಯಲ್ಲಿಯ ಯೋಗಿಯಂತೆ ಕಾಣುತ್ತಿದ್ದರು.

ಇಂಥ ಏಕಾಂತ, ಇಂಥ ಶಾಂತ, ಇಂಥ ಯೋಗವೇ ವಿಶ್ವವಿಜಯಿಯಾದ ಬಲವನ್ನು ಹುಟ್ಟಿಸಬಲ್ಲದು. ಯುಗದ ಅತ್ಯಂತ ಪ್ರಭಾವಶಾಲಿಯಾದ ಲೇಖಕರಾದ ಅವರು ತಮ್ಮ ಕಲಾಸೃಷ್ಟಿಯ, ಸಾಹಿತ್ಯಸೃಷ್ಟಿಯ ಅತ್ಯುಚ್ಚ ಶಿಖರವನ್ನು ಏರುತ್ತಿರುವಾಗಲೂ ತಮ್ಮ

ಊರಲ್ಲಿಯೂ ಅಜ್ಞಾತರಂತಿದ್ದರು. ಆದರೆ ಆ ಏಕಾಂತದಲ್ಲಿ ಆ ಬಡ ಕಲು ಶರೀರದಲ್ಲಿ ಅವಿತುಕೊಂಡ ಆತ್ಮ ಸಾಧಿಸಿದ ಕಾರ್ಯವನ್ನು ಅಳೆಯಲು ಸಾಧ್ಯವೇ? ಯುಗಯುಗಗಳ, ನುಡಿನುಡಿಗಳ, ದೇಶದೇಶ ಗಳ ಇತಿಹಾಸ, ದರ್ಶನ, ಕಾವ್ಯ, ಸಂಗೀತ, ಸಂಸ್ಕೃತಿ ಇವೆಲ್ಲವನ್ನು ಅವರು ಅಭ್ಯಾಸ ಮಾಡಿದರು. ಆ ಶಾಂತಿಸಮಾಧಿಯಲ್ಲಿ ಅವರ ಆತ್ಮ ಜ್ಯೋತಿ ನಂದಾದೀಪದಂತೆ ಬೆಳಗುತ್ತಿದ್ದಿತು. ಅವರು ನಿದ್ದೆ ಮಾಡು ವುದು ನಿತ್ಯ ಐದು ಘಂಟೆ ಮಾತ್ರ. ಎಂದೋ ಏನೋ ತಿರುಗಾಡಲು ಹೊರಬೀಳುತ್ತಿದ್ದರು. ಯಾವಾಗಲೋ ಯಾವನೋ ಗೆಳೆಯನು ಆ ಐದು ಅಂತಸ್ತುಗಳ ಕಟ್ಟಿಗೆಯ ಮೆಟ್ಟಲು ಹತ್ತಿ ಬಂದು ಒಂದರ್ಧ ಘಂಟೆ ಮಾತನಾಡಿ — ಅಲ್ಲ, ಚರ್ಚಿಸಿ — ಹೋಗುತ್ತಿದ್ದನು. ಒಮ್ಮೊಮ್ಮೆ ಕೈಕೊಂಡ ಪ್ರವಾಸ ಸಂಶೋಧನೆಗಾಗಿಯೇ. ಇತಿಹಾಸದ ಅಭ್ಯಾಸ ಸಾಕೆನಿಸಿದಾಗ ದರ್ಶನ, ದರ್ಶನದ ಬೇಸರ ಬಂದರೆ ಕಾವ್ಯ, ಕಾವ್ಯದ ರಸದಿಂದ ತೃಪ್ತಿಯಾಗುತ್ತಲೆ ಪತ್ರಲೇಖನ — ಇದೇ ಅವರ ವಿರಾಮದ ರೀತಿ. ಆ ಏಕಾಂತದಲ್ಲಿಯೂ ಅವರು ಪ್ರಪಂಚದ ಹಿಂದಿನ ಇಂದಿನ ಮಹಾವಿಭೂತಿಗಳ ಕೂಡ ಆಪ್ತಾಲೋಚನೆ ಮಾಡುತ್ತಿದ್ದರು. ಆಗಾಗ ಬೆಳಗಿನ ಜಾವದಲ್ಲಿಯೋ ಸಂಜೆಯ ಸಮಯದಲ್ಲಿಯೋ ವಾದ್ಯದ ಜೊತೆಯಲ್ಲಿ ಮಧುರವಾದ ಯಾವುದೋ ದಿವ್ಯಲೋಕದಿಂದ ಸ್ವರ್ಗೀಯ ಸಂಗೀತದ ಭಾಗೀರಥಿಯನ್ನು ಆಮಂತ್ರಿಸಿ ಹರಿಸಿ ತಮ್ಮ ಆತ್ಮಕ್ಕೆ ಹೊಸ ಚೈತನ್ಯದ ಹೊಸ ಹುರುಪನ್ನು ತಂದುಕೊಳ್ಳುತ್ತಿದ್ದರು. ಇದೆಲ್ಲ ವನ್ನು ಮಾಡುತ್ತಿರುವಾಗಲೇ ವಿಚಾರ, ವಿಚಾರದ ಭಾವಸಮಾಧಿಯ ಲ್ಲಿಯೇ ಸಾಹಿತ್ಯಸೃಷ್ಟಿ. ಇದೇ ಅವರ ಹತ್ತುವರ್ಷಗಳ ಏಕಾಂತದ, ಯೋಗದ ಜೀವನಕ್ರಮ.

೧೯೧೦ನೇ ಇಸವಿಯ ಆವುದೋ ಒಂದು ದಿನ. ಪ್ಯಾರಿಸದ

ಕೀರ್ತಿ

ದೊಡ್ಡದೊಂದು ಬೀದಿ. ಮೋಟಾರ್ ಭರದಿಂದ ಸಾಗಿದೆ. ಕೂಗಾಟ! ಚೀರಾಟ! ಹಾರ್ನ್

ಬಾರಿಸಿ ಬ್ರೇಕ್ ಜಗ್ಗುವುದರಲ್ಲಿಯೇ ಬೀದಿಯನ್ನು ದಾಟುತ್ತಿರುವ ಮನುಷ್ಯನೊಬ್ಬನು ಗಾಲಿಗಳ ಕೆಳಗೆ ಸಿಕ್ಕು ಬಿದ್ದನು ! ನುಗ್ಗುನುಗ್ಗಾಗಿ ಎಚ್ಚರದಪ್ಪಿದ ಆ ಅಸ್ಥಿಮಾಂಸಗಳ ಹಂದರವನ್ನು ಹೊತ್ತೊಯ್ದರು ! ಆರೈಕೆಯಿಂದ ಬದುಕಿಸಿಕೊಂಡರು !

ಆ ಮನುಷ್ಯ ಆಗ ಸಾವಿಗೆ ತುತ್ತಾಗಿದ್ದರೆ ಎಲ್ಲಿಯೋ ವೃತ್ತಪತ್ರದ ಮೂಲೆಯಲ್ಲಿ ಮೃತ್ಯುವಾರ್ತೆ ಅಚ್ಚಾಗುತ್ತಿದ್ದಿತು: "ಸಾರ್ಬೋನ್ ಕಾಲೇಜದಲ್ಲಿ ಕೆಲ ಕಾಲ ಪ್ರೊಫೆಸರನೆಂದು ಕೆಲಸ ಮಾಡಿದ ರೊಮೆ ರೊಲಾ ಮೋಟರ್ ಅಪಘಾತದಿಂದ ಮರಣ ಹೊಂದಿದನು. ಮೃತನ ಆತ್ಮಕ್ಕೆ ಶಾಂತಿಯಿರಲಿ". ಗೊತ್ತಿದ್ದ ಕೆಲ ಜನ ಗೆಳೆಯರು ಹಳಹಳಿಸುತ್ತಿದ್ದರು. ಸಮುದ್ರದಲ್ಲಿ ಸಣ್ಣದೊಂದು ತೆರೆ ತಲೆಯೆತ್ತಿ ಮರಳಿ ಮುಳುಗಿ ಮಾಯವಾದಂತೆ,ಅವರು ಕಣ್ಣಿಗೆ ಕಾಣದಾಗಿ ಮರೆತು ಹೋಗುತ್ತಿದ್ದರು. ಮುಂದೆ ಎರಡೇ ವರ್ಷಗಳಲ್ಲಿ ಪ್ರಪಂಚಕ್ಕೇ ಹೆಸರಾಗಲಿರುವ ಅವರನ್ನು ಪ್ಯಾರಿಸ್ ಇಷ್ಟು ಅಲಕ್ಷಿಸಿದ್ದತು. ಮುಂದೆ ಅವರಿಗೆ ಕೀರ್ತಿ ತಂದ ಕೆಲಸದ ಹೆಚ್ಚಾದ ಭಾಗವನ್ನು ಆಗಲೇ ಮಾಡಿ ಬಿಟ್ಟ ಆ ಯುಗಪುರುಷರ ಹೆಸರು ಎರಡೇ ವರ್ಷಗಳ ಮುಂಚೆ ಎಲ್ಲಿಯೋ ಮೂಲೆಗುಂಪಾಗಿದ್ದಿತು.

ಕೀರ್ತಿಯ ಮೋಹಕ್ಕೆ ಅವರು ಬಲಿ ಬೀಳಲಿಲ್ಲ. ಕೀರ್ತಿಯ ಲಾಲಸೆಗಾಗಿ ಅವರು ಯೇನ ಕೇನ ಪ್ರಕಾರೇಣ ಸಮಾಜದಲ್ಲಿ ಪ್ರತಿಷ್ಠೆ ಪಡೆಯಲು, ಬಲ ಗಳಿಸಲು, ಅಧಿಕಾರವನ್ನು ಹಿಡಿದುಕೊಳ್ಳಲು ಹವಣಿಸಲಿಲ್ಲ. ಕೀರ್ತಿಯ ಕಲ್ಪನೆಯನ್ನು ಕೂಡ ಕಡೆಗಣಿಸಿದರು. ಆದರೆ ಕಷ್ಟಪರಂಪರೆಯ ನಂತರ ಕೀರ್ತಿ ಅವರಲ್ಲಿ ನಡೆದುಕೊಂಡು ಬಂದಿತು. ಅವರನ್ನು ಹುಡುಕಿಕೊಂಡು ಬಂದಿತು. ಕೀರ್ತಿ ಬಂದ ಕಾಲ ಮಾತ್ರ ಸುದೈವದ ಸಂಧಿ ಎನ್ನಬೇಕು. ಆ ಕೀರ್ತಿಯ ಎತ್ತರವಾದ ಪೀಠವನ್ನು ಏರಿ ನಿಂತು ಅವರು ಪ್ರಪಂಚಕ್ಕೆ ತಮ್ಮ ಸಂದೇಶವನ್ನು ಸಾರಿದರು. ೧೯೧೪ರ ಯುದ್ಧದ ಬೇಗೆ ಹೊತ್ತಿದ ಕ್ಷಣವೇ ಅವರ ಏಕಾಂತಜೀವನ

ಮುಗಿಯಿತು. ಅಂದಿನಿಂದ ಅವರ ಜೀವನಚರಿತ್ರೆ ಪ್ರಪಂಚದ ಜೀವನ ಚರಿತ್ರೆಯ ಪ್ರಕರಣವಾಯಿತು. ಏಕಾಂತಸಾಧಕರು ಹೊರಬಿದ್ದು ಪ್ರಪಂಚದ ಕರ್ಮರಂಗಕ್ಕೆ ಬಂದು ಈಶನಿಯೋಜಿತವಾದ ತಮ್ಮ ಪಾತ್ರವನ್ನು ವಹಿಸಿಕೊಂಡರು. ಅಂದಿನಿಂದ ಅವರು ಕೇವಲ ಸಾಹಿತಿಗಳಲ್ಲ, ಕವಿಗಳಲ್ಲ ! ಕಲೆಗಾರರಲ್ಲ! ಆದರೆ ಸಮರ ಯಾತನೆಗಳಿಂದ ಕಂಗಾಲಾದ ಯುರೋಪಕ್ಕೆ ಪ್ರೀತಿ, ಬಂಧುತ್ವ ಮತ್ತು ಶಾಂತಿಯ ಉಜ್ವಲ ಸಂದೇಶವನ್ನು ಸಾರಲು ನಿಂತ ಧೀರ ವೀರ ದೇವದೂತರಾದರು. ಪ್ರಪಂಚದ ಸದಸದ್ವಿವೇಕಬುದ್ಧಿಯಾದರು. ಅಂತಃಸಾಕ್ಷಿಯಾದರು.

ಕರ್ಮಯೋಗದ ಓಂ

೧೮೭೦ ರಲ್ಲಿ ಜರ್ಮನಿಯ ಕೂಡ ನಡೆದ ಕಾಳಗದಲ್ಲಿ ಫ್ರಾನ್ಸ್ ಸೋತು ಹೋಯಿತು. ರಾಷ್ಟ್ರದ ಶೌರ್ಯದ ಧೈರ್ಯದ ಬಲದ ಆಸೆ, ನೆತ್ತರವೆಲ್ಲ ಹರಿದು ಹುಡಿಗೂಡಿತು. ಎದೆ ಕುಂದಿತು. ಬೆನ್ನು ಬಾಗಿತು. ಬಲ ಕುಸಿಯಿತು. ಹುಮ್ಮಸ್ಸು ಕುಗ್ಗಿತು. ಶ್ರದ್ಧೆಯ ಜ್ಯೋತಿ ಅಡಗಿತು. ತ್ಯಾಗದ ತೇಜ ನಂದಿತು. ಉಚ್ಚ ಆದರ್ಶ ಮಾಯವಾಯಿತು. ಶೌರ್ಯಸಾಹಸದ ಗಾಳಿ ಬೀಸದಾಯಿತು. ಎಲ್ಲೆಲ್ಲೂ ಹೇಡಿತನ, ಸ್ವಾರ್ಥಾಂಧತೆ, ಅಸೂಯೆಗಳ ಕತ್ತಲೆಯೇ ಕವಿಯಿತು. ನಿರಾಸೆಯ ಮಬ್ಬು ಮುಸುಕಿತು.

ರೊಲಾರ ಗೆಳೆಯರು ಮತ್ತು ರಾಷ್ಟ್ರೀಯ ಪಕ್ಷದ ಮುಂದಾಳುಗಳು ೩೦ ವರ್ಷ ಹೆಣಗಿದರು. ಬರ್ಚಿಬಾಣಗಳಿಂದ ತಿವಿತಿವಿದು ರಾಷ್ಟ್ರದ ಸ್ವಾಭಿಮಾನವನ್ನು ಕೆರಳಿಸಿದರು. "ಹಿಂದೆ ಹೋದುದು ಹೋಯಿತು. ಹೋಗಲಿ ! ಹುಗಿದು ಹೋಗಲಿ! ಇನ್ನು ಎದ್ದೇಳುವಾ! ಹಗೆತನದ ರೊಚ್ಚಿನಿಂದ ಹಗೆಯನ್ನು ಸೀಳುವಾ ! ಹಿಂದಿನ ಸೋಲನ್ನು ಮರೆಯುವಾ! ಇಂದಿನ ಮುಯ್ಯಕ್ಕೆ ಟೊಂಕ ಕಟ್ಟುವಾ ! ಮುಂದಿನ ಗೆಲುವನ್ನು ಸೆಳೆಯುವಾ !" ಎಂದು ನಾಡಿಗೆ ಸೇಡಿನ ರುದ್ರಸಂದೇಶ ಸಾರಿ ೩೦ ವರ್ಷ ಒಂದೇ ಸವನೆ ಹುರಿದುಂಬಿಸಿದರು ! ಹಗೆಯ ಮೇಲೆ ಹಲ್ಲು ಕಡಿಯುತ್ತ ಕತ್ತಿಯನ್ನು ಹಿಡಿದು ರಾಷ್ಟ್ರವು ಸಿಡಿದು ನಿಂತಿತು.

ಗೆಲುವಿನ ಆಶೆಯಿಂದ ರಾಷ್ಟ್ರಕ್ಕೆ ರೋಲಾ ಹುರಿ ಹಾಕಲಿಲ್ಲ. ನ್ಯಾಯ, ನೀತಿ, ನಿರ್ಮಲತೆ, ಶಾಂತಿ, ಬಂಧುತ್ವ, ಶ್ರದ್ಧೆ, ಆಶಾವಾದ, ಆದರ್ಶ ಇವೆಲ್ಲ ಮಂತ್ರಗಳಿಂದ ರಾಷ್ಟ್ರದಲ್ಲಿ ಆತ್ಮೋದ್ಧಾರದ ಪವಿತ್ರ ಜ್ಯೋತಿಯನ್ನು ಹೊತ್ತಿಸಲು ಹವಣಿಸಿದರು. ಸ್ವದೇಶಾಭಿಮಾನದ— ಸ್ವದೇಶದ ಸ್ವಾರ್ಥದ ದುರಭಿಮಾನದ, ಅಂಧ ಅಭಿಮಾನದ, ದುರಾವೇಶದ— ರಾಕ್ಷಸೀ ರೊಚ್ಚು ಬೇಡ. ಸೋಲಿನಿಂದ ಸವೆಯದೆ, ನೋವಿನಿಂದ ನವೆಯದೆ, ಕಷ್ಟದಿಂದ ಕಂಗೆಡದೆ, ವಿಧಿಯ ವಜ್ರಾಘಾತದಿಂದ ಜರ್ಜರಿತರಾಗದೆ, ಸೋಲಿನ ಸೌದೆಯನ್ನು ಸುಟ್ಟು ರಾಷ್ಟ್ರದ ಹೃದಯವನ್ನು ಕಷ್ಟದ ಕುಲುಮೆಯಲ್ಲಿ ಕುದಿಸಿ, ಸದಭಿಮಾನದ ಸುತ್ತಿಗೆಯ ಹೊಡೆತದಿಂದ ವಜ್ರದಂತೆ ಮಾಡುವಾ. ಬರೀ ಇಂದಿನ ಸೇಡಿನ ಸೂತ್ರವನ್ನು ಪಠಿಸುತ್ತ ಮುಂದಿನ ಯುಗದ, ಅನಂತದ ಆದರ್ಶಗಳನ್ನು ಹೋಮಿಸುವುದು ಬೇಡ. ವೀರರಾಗುವಾ. ವಿಜಯಿಯಾಗುವಾ ಆದರೆ ವೈರಿಯಾಗುವುದು ಬೇಡ. ಈ ರೀತಿ ರೊಲಾ ಒಂದೇ ಸವನೆ ನಿತ್ಯ ಸತ್ಯ ಧರ್ಮದ ಶುದ್ಧ ಸಾತ್ವಿಕ ಸೋಜ್ವಲ ಸಂದೇಶವನ್ನು ಸಾರಿದರು. ಅವರ ಸಾಹಿತ್ಯಸೃಷ್ಟಿಯೆಲ್ಲ ಆ ಸಂದೇಶಕ್ಕೆ ಮೀಸಲಾಯಿತು.

ಆದರೆ ಸಾಹಿತ್ಯದಲ್ಲಿ ಸಾರಿದ ಆ ಸಂದೇಶ ಸಾರ್ಥಕವಾಗಲಿಲ್ಲ !

ಮಹಾಯುದ್ಧದ ಬೇಗೆ

೧೯೧೪ ನೇ ಇಸವಿಯಲ್ಲಿ ಯುರೋಪ ಖಂಡದ ಬಸಂತದ ಬನಸಿರಿಗೆಲ್ಲ ಬೆಂಕಿಹತ್ತಿತು ! ತೋಪು ತುಬಾಕಿಗಳ ಸಿಡಿಗುಂಡುಗಳಿಂದ ನೆಲವನ್ನು ನೇಗಿಲು ಹೊಡೆದು ಹರಗಲಾಯಿತು ! ಸೇಡಿನ ಸುಟ್ಟುರಿಗಾಳಿ ಬೀಸಿತು ! ನೆತ್ತರದ ಸುರಿಮಳೆಯಾಯಿತು ! ಹಗೆತನದ ಬೀಜ ಬಿತ್ತಲಾಯಿತು ! ಕೊಲೆಸುಲಿಗೆಗಳ ಹುಲುಸಾದ ಬೆಳೆ ಬಂದಿತು. !

ಯುದ್ಧದ ಬೆಂಕಿ ಭುಗಿಲ್ಲೆಂದು ಹೊತ್ತಿದಾಗ ರೊಲಾ ಸ್ವಿತ್ಝರ್ಲಂಡ್‌ದಲ್ಲಿದ್ದರು. ಮರಳಿ ಫ್ರಾನ್ಸಕ್ಕೆ ಬರುವುದು ಸಾಧ್ಯವಾಗಲಿಲ್ಲ. ಆ ಪ್ರಲಯಸಂಹಾರದ

ಸ್ವಿತ್ಝರ್ಲಂಡದಲ್ಲಿ

ಆರ್ಭಟೆಯಲ್ಲಿ ಮುಳುಗಿಹೋದ ತಮ್ಮ ಸಂದೇಶವನ್ನು ಅವರು ತಮ್ಮ ಮುಂದಿನ ಕಾರ್ಯದಲ್ಲಿ ರೂಪಿಸಿದರು. ಅವರ ಬಾಳು ಅವರ ಸಂದೇಶದ ಸಜೀವ ಮೂರ್ತಿಯಾಯಿತು. ಸಾಹಿತಿ, ಕವಿ, ಕಲೆಗಾರ, ಯುಗ ಪುರುಷ ರೊಲಾ ತಮ್ಮ ವಿಚಾರ, ತಮ್ಮ ತತ್ವ, ತಮ್ಮ ಸಂದೇಶಗಳನ್ನು ಆಚರಣೆಯಲ್ಲಿ ತರುವ ಪವಿತ್ರ ಕರ್ತವ್ಯವನ್ನು ಹೇಗೆ ಕೊನೆಗಾಣಿಸ ಬಲ್ಲರೆಂಬ ವಿಷಯದಲ್ಲಿ ಅವರ ಜೀವನ ಅಮರ ಸ್ಮಾರಕ. ತಮ್ಮ ಕೀರ್ತಿ, ಶಕ್ತಿ, ಕಲೆ ಎಲ್ಲವನ್ನೂ ತಮ್ಮನ್ನೂ, ರೊಲಾ ಬಲಿದಾನ ಮಾಡಿದರು. ಅವರ ಕಾದಂಬರಿ "ಜೀನ್ ಕ್ರಿಸ್ಟಾಫಿ" ಪ್ರಪಂಚದಲ್ಲಿಯೇ ಅತ್ಯಂತ ಶ್ರೇಷ್ಠವಾದುದೆಂದು ಗೊತ್ತಾಗಿ ಅವರಿಗೆ ನೋಬೆಲ್ ಪಾರಿತೋಷಕ ದೊರೆಯಿತು. ಸುಮಾರು ಒಂದೂವರೆ ಲಕ್ಷ ರೂಪಾಯಿ. ಆ ಹಣವನ್ನು ತಮಗಾಗಿ ಬಳಸಲು ಅವರು ಒಪ್ಪಲಿಲ್ಲ. ಯುದ್ಧದಲ್ಲಿ ಜರ್ಜರಿತರಾದ ಜನರ ಸೇವೆಗೆ ಮುಡಿಪಾಗಿ ಆ ಹಣವನ್ನೆಲ್ಲ ಕೊಟ್ಟರು!

ಆ ಮಹಾಯುದ್ಧ ಸುಮಾರು ೫ ವರ್ಷ ನಡೆಯಿತು. ಆ ಅವಧಿಯಲ್ಲಿ ದೇಶ ದೇಶಗಳ, ವೀರವೀರರ ಹಗೆಹಗೆಗಳ ಕಾಳಗದ ಕೋಲಾಹಲವೇ ಕೋಲಾಹಲ ! "ಹೊಡಿ ! ಬಡಿ ! ಕಡಿ ! ಕೊಲ್ಲು ಸುಡು ! ಸುಲಿ ! " ಎಂಬ ಕೂಗಾಟ ಚೀರಾಟ ! ಆ ಪ್ರಳಯ ಕೋಲಾಹಲದ ಚೀರಾಟ ಭೋರಾಟವನ್ನೆಲ್ಲ ಮೆಟ್ಟಿ ಮೇಲೇರಿ ರೊಲಾರ ಶಾಂತಿಮಂತ್ರ ಪ್ರಪಂಚಕ್ಕೆಲ್ಲ ಕೇಳಿಸಿತು. ಲಕ್ಷಾಂತರ ಜನರನ್ನು ಬಲಿಗೊಂಡ ಸಾಮ್ರಾಜ್ಯಗಳನ್ನೂ ನೆಲಕ್ಕುರುಳಿಸಿದ ಆ ರಾಕ್ಷಸೀ ಶಕ್ತಿಗಳು, ಅವರ ಪ್ರೇಮ, ಬಂಧುತ್ವ, ಶಾಂತಿ ಎಂಬ ತತ್ವಗಳ ಪವಿತ್ರ ಜ್ಯೋತಿಯನ್ನು ನಂದಿಸಲಾರದೆ ಹೋದವು. ಹಗೆತನದ ಹುಮ್ಮಸ್ಸಿನ ಹುಚ್ಚು ಹೊಳೆ ಎಲ್ಲೆಲ್ಲೂ ಭೋರ್ಗರೆದು ಹರಿಯುತ್ತಿರುವಾಗ ತಮ್ಮ ಅಚಲ ಶ್ರದ್ಧೆಯ ಕಲ್ಲುಬಂಡೆಯ ಮೇಲೆ ಕೆಚ್ಚೆದೆಯಿಂದ ಕದಲದೆ ನಿಂತು, ಮಾನವ ಕುಲದ ಅಮರ ಆದರ್ಶಗಳ ಧ್ರುವನಕ್ಷತ್ರವನ್ನು ಕಣ್ಣಲ್ಲಿ ಕಣ್ಣಿಟ್ಟು ನೋಡುತ್ತ, ಪ್ರಪಂಚಕ್ಕೆ ತೋರಿಸುತ್ತ,

ರೋಲಾ ವಿಶ್ವವಿರಾಟ್ ದೀಪಸ್ತಂಭರಾದರು ! ಕಂದಕದಲ್ಲಿ, ಕಣಿವೆ ಯಲ್ಲಿ, ಮುಗಿಲಲ್ಲಿ, ಬಯಲಲ್ಲಿ, ಕದನದ ಕೋಲಾಹಲದಲ್ಲಿ ಶಸ್ತ್ರವೀರರು ಮಾಡುವ ಶೌರ್ಯಸಾಹಸಕ್ಕಿಂತ ಸಾವಿರ ಪಾಲು ಶ್ರೇಷ್ಠವಾದ ಸತ್ವಶಾಲಿಯಾದ ಶೌರ್ಯವನ್ನು ಅವರು ಬೆಳಗಿದರು ! ಯುದ್ಧದ ಉನ್ಮಾದದಿಂದ ಮೈಮರೆತು ಸುತ್ತಲಿನ ಜನಸಮುದ್ರವೆಲ್ಲ ಅಲ್ಲೋಲ ಕಲ್ಲೋಲವಾಗಿ ಹುಚ್ಚೆದ್ದು ಕುಣಿಯುವಾಗ, ಮೋಡ ಮುತ್ತದ ಮಬ್ಬು ಮುಸುಕದ ಚಂದಿರನಂತೆ ಅವರು ಪ್ರಪಂಚದ ಮೇಲೆಲ್ಲ ಶಾಂತಿಯು, ಪ್ರೀತಿಯು, ಸತ್ಯದ, ನಿರ್ಮಲತೆಯ ಬೆಳ್ದಿಂಗಳನ್ನು ಸೂಸಿದರು !

೨೨-೯-೧೯೧೪ನೇದಿನ ಸ್ವಿತ್ಝರ್ಲಂಡದ ಒಂದು ವೃತ್ತಪತ್ರಿಕೆಯಲ್ಲಿ "Above the Battle" ಎಂಬ ಘೋಷಣೆ ಮಾಡಿದರು. ಕಾಳಗದ ಬೇರೆಬೇರೆ ಬಯಲುಗಳಲ್ಲಿ ಗಾಯಗೊಂಡವರ ಮತ್ತು ಸಾವಿನ ದವಡೆಯಲ್ಲಿ ಸಿಲ್ಕಿದವರ ಕರುಣ ಕೂಗು, ಸಾವಿಗೆ ತುತ್ತಾದವರ ನಿಶ್ಶಬ್ದವಾದರೂ ಕಿವಿಯ ಮೇಲೆ, ಎದೆಯ ಮೇಲೆ ಅಪ್ಪಳಿಸುವ ಅತಿಕರುಣ ಕೂಗು, ಅಂಥ ಅಸಂಖ್ಯ ಜನರ ಮನೆಮನೆಗಳಲ್ಲಿ ತಂದೆ ತಾಯಿ ಅಣ್ಣ ತಮ್ಮ ಅಕ್ಕ ತಂಗಿ ಹೆಂಡತಿಮಕ್ಕಳ ಕೊರಗಿನ ಕೂಗು— ಇವೆಲ್ಲ ಕಳವಳದ ಕೂಗುಗಳಿಂದ ಒಡೆದು ಹೋದ ಅವರ ಹೃದಯದಿಂದ ಹೊರಹೊಮ್ಮಿದ ಆಕ್ರೋಶ ಆ ಘೋಷಣೆಯೆಂದರೆ ! ತಾಳಲಾರದ ತಳಮಳದ ಆ ಕುದಿಯಲ್ಲಿಯೂ ಅಕ್ಕರೆಯ ಅಮೃತ ವಾಣಿಯಿದೆ ! ಅಮರ ಆಶಾವಾದವಿದೆ. !

" Above the Battle"
"ಕಾಳಗದ ಕಾಮೋಡದ ಮೇಲೆ"

" ಓ ತರುಣರೆ, ಹಸಿದ ನೆಲಕ್ಕೆ ನಿಮ್ಮ ಬಿಸಿ ನೆತ್ತರವನ್ನು ಹನಿಸುವುದರಲ್ಲಿ ನಿಮ್ಮದು ಎಂತಹ ಹರ್ಷ ! ಎಂತಹ ಔದಾರ್ಯ ! ಈ ಬಸಂತದ ಸೊಬಗಿನ ಸೂರ್ಯ ಕಣ್ಣು ಬಿಟ್ಟು ನೋಡುತ್ತಿರುವುದೇನು ? ಹಿಂಸೆಯ, ವಿನಾಶದ ಎಂಥ ಹುಲುಸಾದ ಬೆಳೆಯಿದು ! ಪ್ರಪಂಚದ ಶೌರ್ಯವೇ ಮೈವೆತ್ತು ಬಂದು ನಿಂತಂತೆ ಎಸೆಯುವ ಎಲ್ಲ

ರಾಷ್ಟ್ರಗಳ ತರುಣರೇ, ನಿಮ್ಮೆಲ್ಲರ ಆದರ್ಶ ಒಂದೇ.... ಆ ಆದರ್ಶಕ್ಕಾಗಿ ಸಾವನ್ನೂ ಲೆಕ್ಕಿಸದೆ ಹಿಗ್ಗಿನಿಂದ ಹೆಜ್ಜೆಯಿಕ್ಕುತ್ತಿರುವಿರಿ. ನೀವೆಲ್ಲರೂ—ಸೋಲುವವರಾಗಲಿ ಗೆಲುವವರಾಗಲಿ, ಎಲ್ಲರೂ ನನಗೆ ಒಲವಿನವರು !.... ರಾಷ್ಟ್ರರಾಷ್ಟ್ರಗಳ ಸೂತ್ರಧಾರಿಗಳೇ, ಇಂಥ ಸಜೀವ ಸಂಪತ್ತನ್ನು, ನಿಮ್ಮ ಕೈಗೆ ನಿಲುಕಿದ ಈ ಶೌರ್ಯದ ಲಕ್ಷ್ಮಿಯನ್ನು ಏಕೆ ಸೂರೆ ಮಾಡಲಿರುವಿರಿ ? ಬಲಿದಾನಕ್ಕೆ ಅಣಿಯಾಗಿ ನಿಂತ ಈ ಹರೆಯದ ಹುಡುಗರಿಗೆ ನೀವು ಯಾವ ಗುರಿಯನ್ನು ತೋರಿಸುತ್ತಿರುವಿರಿ ? ಪರಸ್ಪರ ಸಂಹಾರ ! ಖಂಡಖಂಡವನ್ನೇ ಮುರಿದು ಮುಕ್ಕಲು ನಿಂತ ಪ್ರಲಯಭಯಂಕರ ಕಾಳಗ !........ ಲಕ್ಷಾಂತರ ತರುಣರನ್ನು ಒಬ್ಬರೊಬ್ಬರ ಮೇಲೆ ನೂಕಿ ಕೊಲ್ಲಹಚ್ಚಿದುದು ಬರೀ ಹಗೆತನದ ಹುಮ್ಮಸ್ಸೇ ? ಒಬ್ಬರನ್ನೊಬ್ಬರು ಎದುರಿಸಿ ನಿಂತ ಆ ಹುಡುಗರಲ್ಲಿ ಯಾವ ವೈರವಿದೆ? ರಾಷ್ಟ್ರರಾಷ್ಟ್ರಗಳಲ್ಲಿಯ ಕಾವ್ಯ, ಧರ್ಮ, ವಿಜ್ಞಾನ, ಬುದ್ಧಿ, ಶ್ರದ್ಧೆ, ಧನ—ಈ ಎಲ್ಲ ಬಲವೂ ಕಾಳಗಕ್ಕೆ ಕೆಚ್ಚಿನಿಂದ ಅಣಿಯಾಗಿ ನಿಂತಿವೆಯಲ್ಲ!............ ತಮ್ಮ ಪಕ್ಷವೇ ಸ್ವಾತಂತ್ರ್ಯದ, ನ್ಯಾಯದ, ಧರ್ಮದ, ಮಾನವಕುಲದ ಪ್ರಗತಿಯ, ಪರಮಾತ್ಮನ ಪಕ್ಷವೆಂದು ಸಾರಿ ಹೇಳದ ಮುಂದಾಳು ಒಬ್ಬನೂ ಇಲ್ಲವಲ್ಲ ! ಬೇರೆ ರಾಷ್ಟ್ರಗಳ ತಿರಸ್ಕಾರ, ಅಸೂಯೆ, ಹಗೆತನಗಳಿಂದಲೇ ರಾಷ್ಟ್ರಪ್ರೇಮಕ್ಕೆ ತೃಪ್ತಿಯೇ ? ತಮ್ಮ ತಮ್ಮ ರಾಷ್ಟ್ರಗಳನ್ನು ಸಂರಕ್ಷಿಸಲು ಸರ್ವಸ್ವವನ್ನು, ಜೀವವನ್ನು ಸಹ ಬಲಿಗೊಡಲು ನಿಂತವರನ್ನು ಕೊಲ್ಲುವುದರಲ್ಲಿಯೇ ರಾಷ್ಟ್ರಧರ್ಮಕ್ಕೆ ಸಂತಸವೇ ? ಇದೆಂಥ ಅಸಂಬದ್ಧ ರಾಷ್ಟ್ರಪ್ರೇಮ ! ಇದೆಂಥ ರಾಕ್ಷಸೀ ರಾಷ್ಟ್ರಧರ್ಮ ! ಇದನ್ನು ನಾನು ಎಂದಿಗೂ ಒಪ್ಪಲಾರೆ ! ತಮ್ಮ ರಾಷ್ಟ್ರವನ್ನು ಪ್ರೀತಿಸುವ ಧೀರ ವೀರ ತ್ಯಾಗಿಗಳನ್ನು ಕಂಡು ಹಗೆತನ ಕಾರೆಂದು ನನ್ನ ರಾಷ್ಟ್ರಪ್ರೇಮ ಹೇಳದು ! ನನ್ನ ರಾಷ್ಟ್ರಧರ್ಮ ಹೇಳದು ! ಆದರೆ ಅವರನ್ನು ಗೌರವಿಸೆಂದು, ಮಾನವ ಕುಲದ ಕಲ್ಯಾಣಕ್ಕಾಗಿ ಅವರ ಕೈಯಲ್ಲಿ ಕೈಹಾಕೆಂದು ನನ್ನ ರಾಷ್ಟ್ರ

ಪ್ರೇಮದ ನನ್ನ ರಾಷ್ಟ್ರಧರ್ಮದ ಪವಿತ್ರ ಮಂತ್ರ !........ಮಾನವರೆಲ್ಲ ಒಂದೇ ಮಾನವಕುಲ ! ಇದನ್ನು ಅರಿಯದವನು ಕಾಡು ಮಿಕ ! ಅಸಂಸ್ಕೃತ ಜೀವ !........ ಆದರೆ ಈ ಕಾಳಗದ ಕತ್ತಲೆಯಲ್ಲಿಯೂ ಕಲ್ಯಾಣದ ಒಂದು ಕಿರಣ ಬೆಳಗುತ್ತಿದೆ. ರಾಷ್ಟ್ರಗಳ ದ್ವೇಷ ತ್ವೇಷ ಗಳ ಕೋಲಾಹಲದಲ್ಲಿ ನಾವು ಎಂದೂ ಪಾಲುಕಾರರಾಗೆವು ಎನ್ನು ವವರನ್ನು ಈ ಕಾಳಗ ಒಂದುಗೂಡಿಸಿದೆ. ಎಂದೂ ದಣಿಯದ, ಎಂದೂ ಹಣಿಯದ ಶ್ರದ್ಧೆಯಿಂದ ಆ ಎಲ್ಲ ಧೀರವೀರರ ಉತ್ಸಾಹ ವನ್ನು ಸ್ಫೂರ್ತಿಯನ್ನು ಒಂದುಗೂಡಿಸಿ ಭದ್ರವಾಗಿಸಿದೆ. ಮಾನವ ಕುಲದ ಐಕ್ಯ ಬರಲಿದೆಂಬ ವಿಷಯದಲ್ಲಿ ಎಷ್ಟೂ ಸಂದೇಹವಿಲ್ಲ. ಕಾಳ ಗದ ಈ ರಕ್ತಸ್ನಾನ ಆ ಐಕ್ಯದ ದೀಕ್ಷಾಸ್ನಾನ !.......”

ಈ ಘೋಷಣೆಗಾಗಿ, ಈ ವಿಷಯದ ಕಾರ್ಯಕ್ಕಾಗಿ ಫ್ರಾನ್ಸದ ದೇಶಭಕ್ತರು ರೋಲಾರನ್ನು ದೇಶದ್ರೋಹಿಯೆಂದರು. ಬಹಿಷ್ಕರಿಸಿದರು.

ದೇಶದ್ರೋಹಿ !

ನ್ಯಾಯ, ನೀತಿ, ದಯೆ, ಧರ್ಮ, ಪ್ರೇಮ, ತ್ಯಾಗ ಮುಂತಾದ ಅಪರಾಧಗಳಿಗಾಗಿ ರಾಷ್ಟ್ರದ ಮುಂದಾಳುಗಳು ಅವರನ್ನು ಹಳಿದರು. ಹಗೆಯೆಂದರು. ಆದರೆ ಎಲ್ಲ ದೇಶವಿದೇಶಗಳ ಸ್ವತಂತ್ರ ಬುದ್ಧಿಯ ಉದಾತ್ತ ಹೃದಯದ ಧೀರರು ಅವರನ್ನು ಪ್ರೀತಿಸಿದರು, ವಂದಿಸಿದರು, ಅವರಿಂದ ಸ್ಫೂರ್ತಿ ಹೊಂದಿ ದರು., ಸಂತೈಸು ಎಂದು ಕೂಗಿಕೊಂಡರು. ಕಂದಕಗಳಿಂದ ಸೈನಿಕರು ಅವರಿಗೆ ಕಾಗದ ಬರೆದರು. ದೇಶಭಕ್ತರಿಗೆ ತಿಳಿಯದಂತೆ ತಾಯಿಂದಿರು ಕಾಗದ ಬರೆದರು. ಹಲವರು ಅಂಕಿತ ಹಾಕದೆ ಹೆಸರು ಹೇಳದೆ ಕಾಗದ ಬರೆದರು. ರೋಲಾ ಎಲ್ಲರನ್ನೂ ಸಂತಯಿಸಿದರು. “ಎದೆಗುಂದದಿರಿ. ನಿಮ್ಮ ಸದಸದ್ವಿವೇಕಬುದ್ಧಿಯನ್ನು ಅನುಸರಿಸಿರಿ. ಸತ್ಯವನ್ನು ಅನುಸ ರಿಸಿರಿ. ನಿಮ್ಮ ಬೆಳಕನ್ನು ನೀವೇ ಕಂಡುಕೊಳ್ಳಿರಿ. ವಿಶ್ವವೇ ವಿರೋ ಧಿಸಿದರೂ ಲೆಕ್ಕಿಸದೆ ಆ ಬೆಳಕಿನ ಬೆನ್ನು ಹತ್ತಿರಿ.” ಮುಂತಾಗಿ ಅವ ರೆಲ್ಲರಿಗೆ ಸಾವಿರಾರು ಕಾಗದ ಹಾಕಿದರು. ಆಶೆಯ ಸಂದೇಶ ಕಳಿಸಿದರು.

ಒಲವಿನ ಮಾತು ಹೇಳಿದರು. ಧೈರ್ಯ ಕೊಟ್ಟರು. ಕವಿಯ ಕಾವ್ಯ, ಕತೆಗಾರನ ಕತೆ, ಸಾಹಿತಿಯ ಸಾಹಿತ್ಯ, ಕರುಣಾಳುವಿನ ಕಳವಳ, ಆಶಾವಾದಿಯ ಆದರ್ಶ—ಎಲ್ಲವನ್ನೂ ಆ ಸಾವಿರಾರು ಕಾಗದದಲ್ಲಿ ಕಾಣಬಹುದು.

ರೆಡ್‌ಕ್ರಾಸ್ ಕೆಲಸಗಾರರ ದಲವನ್ನು ಸೇರಿದರು ರೋಲಾ. ಒರಟಾದ ಒಂದು ಸ್ಟೂಲು ಅವರ ಆಸನ. ಎದುರಿಗೆ ಒರಟಾದ ಒಂದು ದೇವದಾರು ಕಟ್ಟಿಗೆಯ ಟೇಬಲ್. ಸುತ್ತೆಲ್ಲ ಟೈಪ್‌ರಾಯಿಟರರ ಗಲಾಟೆ. ಗಜಿಬಜಿಸಿ ಹೋದ ಆ ರೆಡ್‌ಕ್ರಾಸ್ ಛಾವಣಿ ಅವರ ಕರ್ಮಭೂಮಿ. ದುಃಖಿತರ ದುಃಖ ನಿವಾರಣೆ, ಕಷ್ಟದಲ್ಲಿದ್ದವರ ಕಷ್ಟಪರಿಹಾರ, ಸಮರಾಂಗಣಗಳಲ್ಲಿಯ ಸೈನಿಕರ ಸುದ್ದಿಯನ್ನು ಅವರ ಮನೆಯಲ್ಲಿರುವ ಬಂಧು-ಬಳಗದವರಿಗೆ ಮತ್ತು ಆ ಬಂಧುಬಳಗದವರ ಅಕ್ಕರೆಯನ್ನು, "ದೇವರು ನಿನ್ನನ್ನು ಕಾಯಲಿ !" ಎಂಬ ಕಂಬನಿದುಂಬಿದ ಹರಕೆಗಳನ್ನು ಸೈನಿಕರಿಗೆ ಮುಟ್ಟಿಸುವುದು, ಕಾಳಗ ಅಗಲಿಸಿದ ತಾಯಿಮಕ್ಕಳನ್ನು ಗಂಡಹೆಂಡಂದಿರನ್ನು ಬಂಧುಬಳಗದವರನ್ನು ತಂದು ಕೂಡಿಸುವುದು—ಇದೇ ಅವರ ಕರ್ಮಯೋಗ. ರೆಡ್‌ಕ್ರಾಸ್‌ದಲದ ಕಾರ್ಯಾಲಯದಲ್ಲಿಯೂ ಕೀರ್ತಿಯನ್ನು ಎಲ್ಲರ ಕಣ್ಣಲ್ಲಿ ನೆಡುವಂತಹ ದೊಡ್ಡ ಹುದ್ದೆಯನ್ನು ಅವರು ಬಯಸಲಿಲ್ಲ. ಲೀನರಾಗಿ ಭಕ್ತಿಯಿಂದ ದುಃಖಿತರ ಸೇವೆಯನ್ನು—ಈಶ ಸೇವೆಯನ್ನು—ನಿಷ್ಕಾಮ ಕರ್ಮಯೋಗವನ್ನು ಮಾಡಿದರು.

ರೆಡ್‌ಕ್ರಾಸ ಕೆಲಸಗಾರ

ಆದರೆ ಆ ಜನಸೇವಕರು ಈಶಸೇವಕರು ನಿಜವಾಗಿಯೂ ದಿಕ್ಕುಗಾಣದ ದುರ್ದೈವಿ. ಏಕಾಕಿ. ಪರದೇಶಿ. ಬಂಧುಬಾಂಧವರಿಲ್ಲ. ಜೊತೆಗಾರ್ತಿಯ ಜೊತೆ ತಪ್ಪಿ ಹೋಗಿದೆ. ಮನೆಗೆ ಹೋಗಿ ತಂದೆಯನ್ನು ತಂಗಿಯನ್ನು ಕಾಣಬೇಕೆಂದರೆ ದೇಶ ಕದ ಹಾಕಿದೆ. ಅವರ ಪತ್ರ, ಪತ್ರಿಕೆ, ಪುಸ್ತಕಗಳಿಗೆ ಕೂಡ ಅಲ್ಲಿ ಬಂದಿಯಾಗಿದೆ. ಹೊರಗಿನ ಪ್ರಪಂಚವೆಲ್ಲ ಆಲ್ಲೋಲ

ಏಕಾಕಿ !

ಕಲ್ಲೋಲವಾಗಿದೆ. ಅವರ ಏಕಾಂತದ, ಶೂನ್ಯತೆಯ, ಪರಿತ್ಯಕ್ತ ಜೀವನದ ಆ ಮಬ್ಬು ಮನಸ್ಸನ್ನು ಮುತ್ತಿ ಉಸಿರನ್ನು ಕಟ್ಟುವಂತಹದಿತ್ತು!

ಆದರೆ ಆ ಕಟು ಅನುಭವದಿಂದಲೂ ಅವರ ಮನಸು ಕಹಿಯಾಗಲಿಲ್ಲ. ಆ ಸತ್ವಪರೀಕ್ಷೆ ಅವರ ಶ್ರದ್ಧೆಯನ್ನು ಇನ್ನೂ ಬಲಪಡಿಸಿತು. ಅವರ ಆಶಾವಾದ ಇನ್ನೂ ಹೆಚ್ಚಾಗಿ ಬೆಳಗಿತು. ಸಾವಿರಾರು ಜನಕ್ಕೆ ಬಲವನ್ನಿತ್ತ ಸಮಾಧಾನವನ್ನಿತ್ತ ಅವರ ಆದರ್ಶವಾದ, ಅವರ ಅಮೃತವಾಣಿ ಎಂತಹ ಕ್ಲೇಶದ ಯಾತನೆಯ ಕಾಲದಲ್ಲಿ ಹೊರಹೊಮ್ಮಿತೆನ್ನುವುದನ್ನು ನೆನೆದರೆ ಆ ಆತ್ಮದ ಅದೆಂತಹ ಧೈರ್ಯ! ಅದೆಂತಹ ಶೌರ್ಯ! ಅದೆಂತಹ ಘನತೆ! ಎಂದು ಅಚ್ಚರಿಯಿಂದ ಆದರದಿಂದ ಮಾನವನ ತಲೆ ತೂಗುತ್ತದೆ! ಬಾಗುತ್ತದೆ!

ಆಶಾವಾದಿ

ಯುದ್ಧ ನಿಂತಿತು. ಅವರು ದೂರದೃಷ್ಟಿಯಿಂದ ನುಡಿದಂತೆ ಆ ಕುಲಕ್ಷಯದ ಕ್ಲೇಶಕ್ಕೆ ಕೊನೆಯಾಯಿತು. ಆದರೆ ಅವರು ಹಿಗ್ಗಲಿಲ್ಲ. ಗೆಲುವಿನಲ್ಲಿಯೂ ಅದೆಂತಹ ಕಹಿ ಇದೆಯೆಂಬುದನ್ನು ಅವರ ದೂರದೃಷ್ಟಿ ಕಂಡು ಹಿಡಿಯಿತು. ಶಸ್ತ್ರದಿಂದ ಕಸಿದು ತಂದ ಯಶ ಮಾನವಕುಲಕ್ಕೆ ಶಾಂತಿಯನ್ನು ತರದು. ಗೆದ್ದವನ ಗರ್ವದಿಂದ ನಿಷ್ಕರುಣೆಯಿಂದ, ಸೋತವನ ಸಂತಾಪ ಕೆರಳಿ ಹಗೆತನ ಹೆಚ್ಚಿ ಮುಗಿದ ಕಾಳಗವನ್ನು ಮುಗಿಸಿದ ಒಪ್ಪಂದ ಮುಂದಿನ ಕಾಳಗದ ಬೀಜ ಬಿತ್ತುತ್ತದೆ. ಸೇಡು ತೀರಿಸಿಕೊಳ್ಳಬೇಕೆನ್ನುವ ಉನ್ಮತ್ತ ವಿಕಾರ ಬಿರುಗಾಳಿಯನ್ನೆಬ್ಬಿಸಿತು. ಈ ಯುದ್ಧ ಸ್ವಾತಂತ್ರ್ಯಕ್ಕಾಗಿ, ಸತ್ಯಕ್ಕಾಗಿ, ನ್ಯಾಯಕ್ಕಾಗಿ ಎಂದು ಸಾರಿದ ಮುಂದಾಳುಗಳು ಆ ಬಿರುಗಾಳಿಯ ಆರ್ಭಟೆಯಲ್ಲಿ ಆ ತತ್ವಗಳನ್ನು ತೂರಿಬಿಟ್ಟರು. ಸೋತ ಹಗೆಯನ್ನು ಬಗ್ಗಿಸಿ, ಅವನ ಮುಖ ತಗ್ಗಿಸಿ ಅವನ ಮೇಲೆ ಒತ್ತಾಯದ ಕ್ರಮ ಹೇರಬೇಕೆಂಬ ಸಂಧಿಯ(?) ಸೂಚನೆ ಸುಳಿಯಹತ್ತಿದವು. ಕೊನೆಯ ಗಳಿಗೆಯಲ್ಲಿ ರೊಲಾ ವುಡ್ರೊ

ಯುದ್ಧ ನಿಂತಿತು ಶಾಂತಿ ?

ವಿಲ್ಸನ್ನರಿಗೆ ಒಂದು ಅನಾವೃತ ಪತ್ರ ಬರೆದರು. ಅದರಲ್ಲಿ ತಮ್ಮ ಹೃದಯದ ಕೂಗನ್ನು ನಿವೇದಿಸಿದರು. ಪ್ರಪಂಚದ ನಾಗರಿಕ ಅಮೇರಿಕೆಯ ಅಧ್ಯಕ್ಷರಿಗೆ ಬರೆದರು.

ಅನಾವೃತ ಪತ್ರ

"ಪ್ರಿಯ ಅಧ್ಯಕ್ಷ ಮಹಾಶಯರೇ, ರಾಷ್ಟ್ರಗಳ ಧೋರಣದ ಸೂತ್ರಗಳನ್ನು ಹಿಡಿದ ಎಲ್ಲರಲ್ಲಿಯೂ ಪ್ರಪಂಚದಲ್ಲೆಲ್ಲ ನಿಮ್ಮ ನೈತಿಕ ಅಧಿಕಾರ ದೊಡ್ಡದಿದೆ. ಎಲ್ಲರದೂ ನಿಮ್ಮಲ್ಲಿ ವಿಶ್ವಾಸ. ಹಂಬಲದ ಈ ಬಯಕೆಗಳಿಗೆ ನಿಮ್ಮಿಂದ ಮಾರ್ನುಡಿ ಬೇಕು! ಎತ್ತಿ ಮುಂದೆ ಚಾಚಲಾದ ಕೈಗಳನ್ನು ಒಂದರಲ್ಲೊಂದು ಹಾಕಿ ಕುಲುಕಿಸಿರಿ! ಒಬ್ಬರನೊಬ್ಬರು ಅಪ್ಪುವಂತೆ ಅವರಿಗೆ ನೆರವಾಗಿರಿ! ನಿಮ್ಮ ಒಪ್ಪಂದದ ಕೆಲಸ ಕೆಟ್ಟರೆ ಎಂಥ ಅನಾಹುತವಾದೀತು! ನೆತ್ತರದ ಹೊಳೆ ಹರಿದೀತು! ಅರಾಜಕತೆಯ ಮಡುವಿನಲ್ಲಿ ಮಾನವಕುಲ ಮುಳುಗೀತು! ಜಾರ್ಜವಾಶಿಂಗ್‌ಟನ್ ಅಬ್ರಹಾಮ್ ಲಿಂಕನ್ನರ ಉತ್ತರಾಧಿಕಾರಿಗಳೇ, ಒಂದು ಪಕ್ಷದ ಒಂದು ಜನಾಂಗದ ಬೆನ್ನು ಕಟ್ಟಬೇಡಿರಿ. ಎಲ್ಲರೂ ನಿಮ್ಮವರೇ. ಎಲ್ಲರೂ ಒಂದೇ. ಮಾನವ ಕುಲದ ಮಹಾಮಂಡಲಕ್ಕೆ ಎಲ್ಲ ಪ್ರತಿನಿಧಿಗಳನ್ನು ಕರೆಸಿರಿ. ನಿಮ್ಮ ಉದಾತ್ತ ನೈತಿಕ ದೃಷ್ಟಿಯ ಬಲದಿಂದ ಅಮೇರಿಕೆಯ ಭವ್ಯ ಭವಿಷ್ಯವನ್ನು ಅನುಲಕ್ಷಿಸಿರಿ. ನೀವು ಆ ಮಹಾಮಂಡಲದ ಅಧ್ಯಕ್ಷರಾಗಿರಿ. ಘೋಷಿಸಿರಿ. ಪ್ರಪಂಚಕ್ಕೆಲ್ಲ ಘೋಷಿಸಿರಿ. ವರ್ಗಗಳ, ಪಕ್ಷಗಳ, ರಾಷ್ಟ್ರಗಳ ಮೇರೆ ಮೀರಿ ದಿಗಂತಕ್ಕೆಲ್ಲ ಸಾರುವ ಘೋಷಣೆಗಾಗಿ ಪ್ರಪಂಚವೆಲ್ಲ ಹಸಿದು ನಿಂತಿದೆ. ಮುಕ್ತ ಜನರ ಸ್ವತಂತ್ರ ಪ್ರಪಂಚದ ಕೈವಾರಿಯಾಗಿರಿ. ಮಹಾಶಾಂತಿದೂತರೆಂದು ಭವಿಷ್ಯ ನಿಮ್ಮ ಜಯಜಯಕಾರ ಮಾಡಲಿ!"

ನೇಡಿನ ಆರ್ಭಟೆಯಲ್ಲಿ ರೋಲಾರ ಕೂಗು ಮುಳುಗಿ ಹೋಯಿತು. ಅವರ ಅಂಜಿಕೆಯೇ ನಿಜವಾಯಿತು. ಮನುಷ್ಯರಲ್ಲಿ ಮನುಷ್ಯತೆ ಇಲ್ಲವೆಂಬ ಘೋಷಣೆಯಾಯಿತು! ನೆರೆಹೊರೆಯವರನ್ನು ಸದೆಬಡಿಯುವ

ತಾಮಸೀ ಹುಮ್ಮಸ್ಸೇ ಗೆದ್ದಿತು ! ಯುದ್ಧವನ್ನು ತೊಡೆದು ಹಾಕುವುದಕ್ಕಾಗಿ ಹೂಡಿದ ಯುದ್ಧ ಶಾಂತಿಯನ್ನು ತೊಡೆದು ಹಾಕುವ ಶಾಂತಿಯಲ್ಲಿ ಕೊನೆಗಂಡಿತು. ಇತಿಹಾಸದಿಂದ ಮಾನವಕುಲ ಯಾವ ಪಾಠವನ್ನೂ ಕಲಿಯುವುದಿಲ್ಲೆಂಬ ಪಾಠವನ್ನು ಮನುಷ್ಯ ಕಲಿತನು !

ಎಲ್ಲ ನಿರಾಶೆಗಳನ್ನು ಮೆಟ್ಟಿ ಮೇಲಕ್ಕೇರಿ ನಿಂತರು ರೋಲಾ. ಕುಗ್ಗದೆ, ಕುಸಿಯದೆ, ಕದಲದೆ ರೋಲಾ ಪ್ರಪಂಚದ ಜನತೆಯ ಸಿಂಹಾಸನದ ಎದುರಿನಲ್ಲಿ ನಿಂತು ಸಂಗಡಿಗರ ಜೊತೆಯಲ್ಲಿ ಶಾಂತಿಯ, ಮೈತ್ರಿಯ, ಬಂಧುತ್ವದ, ಸತ್ಯದ, ಸ್ವಾತಂತ್ರ್ಯದ ಘೋಷಣೆ ಮಾಡಿದರು. ೧೯೧೯ರ ಜೂನ್ ೨೬ನೇ ದಿನ ಆ ಘೋಷಣೆಯನ್ನು ಪ್ರಪಂಚಕ್ಕೆ ಪ್ರಕಟಿಸಿದರು. "Declaration of the Independence of Mind" (ಮನಸ್ಸ್ವಾತಂತ್ರ್ಯದ ಘೋಷಣೆ). ಎಲ್ಲ ರಾಷ್ಟ್ರಗಳ ಶ್ರೇಷ್ಠ ಕವಿ, ಕಲೆಗಾರ, ಸಾಹಿತಿ, ಸಮಾಜಸೇವಕರು, ನೂರಾರು ಜನ ಆ ಘೋಷಣೆಗೆ ತಮ್ಮ ಅಂಕಿತ ಹಾಕಿದ್ದರು. ಭಾರತದ ಪರವಾಗಿ ದಿವಂಗತ ಕವೀಂದ್ರ ರವೀಂದ್ರನಾಥ ಠಾಕೂರ ಮತ್ತು ಡಾಕ್ಟರ್ ಆನಂದಕುಮಾರಸ್ವಾಮಿಯವರು ಅಂಕಿತ ಹಾಕಿದ್ದರು. ಪ್ರಪಂಚದ್ಯ ಇತಿಹಾಸದಲ್ಲಿ ಹಿಂದೆ ನಡೆದು ಹೋದ ಮತ್ತು ಇಂದು ನಡೆದ ಆಂದೋಲನವನ್ನು ಮಾರ್ಮಿಕವಾಗಿ ವಿಮರ್ಶಿಸಿ ಮುಂದಿನ ಯುಗದ ಬಗೆಗೆ "ಸಾವಧಾನ ! ಸಾವಧಾನ ! ! ಸಾವಧಾನ ! ! !" ಎಂದು ಘೋಷಿಸಲಾಗಿದೆ:- "........ಎದ್ದೇಳಿರಿ. ಸತ್ಯ ಸತ್ಯವನ್ನೇ ನಾವು ಅಭಿನಂದಿಸುತ್ತೇವೆ. ಅಭಿವಂದಿಸುತ್ತೇವೆ. ಸತ್ಯ ಮುಕ್ತವಿದೆ. ಅದಕ್ಕೆ ಬಂಧನವಿಲ್ಲ. ಮೇರೆಯಿಲ್ಲ. ವರ್ಗ, ವರ್ಣ, ಕುಲ, ಪಂಥ, ಜಾತಿ, ಜನಾಂಗ ಯಾವ ಬಂಧನವೂ ಅದನ್ನು ಬಿಗಿಯಲಾರದು. ನಾವು ಮಾನವಕುಲದ ಸೇವಕರು. ಜನ, ಜನಾಂಗ, ಜಾತಿ ಯಾವುದನ್ನೂ ನಾವು ಅರಿಯೆವು. ಜನತೆ—ಪ್ರಪಂಚಕ್ಕೇನೇ

"Declaration of the Independence of Mind" "ಮನಸ್ಸ್ವಾತಂತ್ರ್ಯದ ಘೋಷಣೆ"

ಒಂದೇ ಆದ ಜನತೆ—ಕಷ್ಟಪಡುವ, ಹೋರಾಡುವ, ಬೀಳುವ, ಏಳುವ, ತನ್ನ ಬೆವರು ನೆತ್ತರಗಳಿಂದ ಕೆಸರುಕೆಸರಾದ ಹಾದಿಯ ಮೇಲೆ ಹೆಜ್ಜೆ ಯಿಕ್ಕುತ್ತ ಮುಂದೆ ಸಾಗಿದ ಜನತೆ, ಮಾನವಕುಲ ಎಲ್ಲವೂ ಒಂದೇ. ಎಲ್ಲರೂ ಬಂಧುಗಳು. ಎಲ್ಲರೂ ಇದನ್ನು ಅರಿಯಲೆಂದು, ಅರಿತು ಆಚ ರಿಸಲೆಂದು ನಾವು ನಮ್ಮ ಪವಿತ್ರ ಧ್ವಜವನ್ನು ಮೇಲಕ್ಕೆತ್ತಿ ಹಿಡಿದಿ ರುವೆವು. 'ಮಾನವ ಕುಲವೆಲ್ಲ ಒಂದೇ! ಮಾನವಕುಲದ ಮನವೆಲ್ಲ, ವಿವೇಕವೆಲ್ಲ, ಬುದ್ಧಿಯೆಲ್ಲ ಒಂದೇ! ಎಲ್ಲವೂ ಮುಕ್ತ, ಅನಂತ!....' ಇದೇ ನಮ್ಮ ಧ್ವಜದ ಘೋಷಣೆ! ಈ ಧ್ವಜದ ಅಡಿಯಲ್ಲಿ ಮಾನವ ಕುಲವೆಲ್ಲ ಬರಲಿ! ಬಂದು ನಿಲ್ಲಲಿ!! ನಿಂತು ನೆಮ್ಮದಿ ಹೊಂದಲಿ!!!........"

ಓಂ ಶಾಂತಿಃ ಶಾಂತಿಃ ಶಾಂತಿಃ !

ಯುದ್ಧ ಮುಗಿದಮೇಲೆ ಫ್ರಾನ್ಸಕ್ಕೆ ಹೋಗಲು ರೋಲಾರಿಗೆ ಅನುವು ದೊರೆಯಿತು. ೧೯೨೨ರ ಎಪ್ರಿಲ್‌ದಲ್ಲಿ ಮತ್ತೆ ಸ್ವಿಟ್ಝರ್ಲಂಡಕ್ಕೆ ಹೋದರು. ಸುಮಾರು ಮುಂದಿನ ೧೬ ವರ್ಷಗಳನ್ನು ಅವರು ಬಹಳ ಮಟ್ಟಿಗೆ ಅಲ್ಲಿಯೇ ಕಳೆದರು. ಪ್ರಪಂಚದಲ್ಲಿ ನಡೆದ ದೊಡ್ಡ ದೊಡ್ಡ ರಾಜಕೀಯ ಮತ್ತು ಸಾಮಾಜಿಕ ಆಂದೋಲನಗಳನ್ನು ಪರಿಶೀಲಿಸು ತ್ತಿದ್ದರು. ಬಂಡವಾಳಪ್ರಧಾನ ಸಮಾಜದಲ್ಲಿ ಮನಸ್ವಾತಂತ್ರ್ಯ ಮತ್ತು ವಿಚಾರಸ್ವಾತಂತ್ರ್ಯ ಸಾಧ್ಯವಿಲ್ಲೆಂದು ಅವರ ಕಾಮ್ಯುನಿಸ್ಟ ಮಿತ್ರರು ವಾದಿಸಿದರು. ರಶಿಯದ ರಾಜ್ಯಕ್ರಾಂತಿ ಮತ್ತು ಆ ಮೂಲಕ ಲೆನಿನ್ ಮತ್ತು ಅವನ ಅನುಯಾಯಿಗಳು ಮಾಡಿದ ಕಾರ್ಯ ಬಹಳ ದೊಡ್ಡದು, ಆದರೆ ವಿಚಾರಸ್ವಾತಂತ್ರ್ಯಕ್ಕೆ ಅಲ್ಲಿಯೂ ಎಡೆಯಿಲ್ಲೆಂದು ರೋಲಾ ನಿರ್ಧಾರವಾಗಿ ನಿರ್ದಾಕ್ಷಿಣ್ಯವಾಗಿ ಹೇಳಿದರು. ೧೯೩೩ರ ಜೂನದಲ್ಲಿ ಆಂತರರಾಷ್ಟ್ರೀಯ ಫ್ಯಾಸಿಸ್ಟವಿರೋಧಿ ಸಮಿತಿಯ ಗೌರವಾಧ್ಯಕ್ಷ ರಾದರು. ೧೯೩೮ರಲ್ಲಿ ಫ್ರಾನ್ಸದಲ್ಲಿ ತಮ್ಮ ಜನ್ಮಭೂಮಿಯಾದ ಬರ್ಗಂಡಿ ಪ್ರಾಂತದಲ್ಲಿ ವೆಝೆಲೆ ಎಂದು ಅನಾದಿಕಾಲದಿಂದ ಹೆಸರಾದ ಚಿಕ್ಕ

ಬೆಟ್ಟದ ಮೇಲೆ ಸಣ್ಣದೊಂದು ಮನೆ ಕಟ್ಟಿಕೊಂಡು ಅಲ್ಲಿ ಉಳಿದ ಬಾಳನ್ನೆಲ್ಲ ಕಳೆದರು. ಮುಂದೆ ೧೯೩೯ರಲ್ಲಿ ಎರಡನೆಯ ಮಹಾ ಯುದ್ಧದ ಬೇಗೆ ಹೊತ್ತಿತು. ಮತ್ತೆ ಕೊಲೆ, ಸುಲಿಗೆ, ಹೋರಾಟ, ಚೀರಾಟ, ಸಾವು, ನೋವು, ದೇಶಾಂತರ, ಬಂದಿವಾಸ—ಎಲ್ಲ ಹಾ ಹಾಕಾರ ಎದ್ದಿತು ! ಆದರೆ ಅವರ ಶ್ರದ್ಧೆಯು ನಂದಾದೀಪ ನಂದಲಿಲ್ಲ. ಮೊದಲಿನ ಮಹಾಯುದ್ಧದಿಂದ ಮುಂದೆ ೨೫ ವರ್ಷ ದೇಹ ಬಿದ್ದು ಹೋಗುವವರೆಗೂ ವಿಶ್ವಬಂಧುತ್ವದ, ವಿಚಾರಸ್ವಾತಂತ್ರ್ಯದ ಧ್ವಜವನ್ನು ಎತ್ತಿ ಹಿಡಿದರು. ಪ್ರಪಂಚದ ಹಿಂದಿನ ಮತ್ತು ಇಂದಿನ ಮಹಾವಿಭೂತಿಗಳ ಜೀವನ ಮತ್ತು ಸಂದೇಶಗಳ ದಿವ್ಯ ಅಮೃತವನ್ನು ಸವಿದು ಪ್ರಪಂಚಕ್ಕೂ ಪುಸ್ತಕರೂಪದಲ್ಲಿ ನೀಡಿದರು. ಪ್ರಪಂಚಕ್ಕೆ ಹಾದಿ ತೋರುವಂಥ ಲೇಖನದ ಕರ್ಮಯೋಗವನ್ನು ಕೊನೆವರೆಗೂ ಮಾಡಿದರು. ಇಂತು ಈ ವೀರಸಾಹಿತಿ ಈ ಧೀರ ಕಲಾಯೋಗಿ, ಮತ್ತು ಉದಾರ ವಿಶ್ವಕುಟುಂಬಿ ಬೆಳಕಿನಲ್ಲಿ ಬಾಳಿ ಹೆರವರಿಗೆ ಬೆಳಕುದೋರಿ ಫ್ರಾನ್ಸದ “ವೆಝುಲೆ” ಎಂಬಲ್ಲಿ ೩೦-೧೨-೧೯೪೪ನೇ ದಿನ ತಮ್ಮ ಜೀವನ ಯಾತ್ರೆಯನ್ನು ಮುಗಿಸಿದರು.

## ಸಾಹಿತ್ಯ

೧೮೯೦ರಿಂದ ೧೮೯೩ರ ವರೆಗೆ ಕೆಲ ನಾಟಕಗಳನ್ನು ಗ್ರೀಸ್ ರೋಮಗಳ ಪುರಾತನ ಕಥೆಗಳ ವಿಷಯವಾಗಿ ರೋಲಾ ಬರೆದರು.

ಹುಗಿದು ಹೋದ ನಾಟಕಗಳು.

ಆದರೆ ತಾವು ಬರೆದುದೆಲ್ಲ ಅಚ್ಚಿನಲ್ಲಿ ಎಂದು ಕಂಡೀತು ಎನ್ನುವ ಅವಸರದ ಹವ್ಯಾಸ ಅವರಿಗೆ ಇರಲಿಲ್ಲ. ಬೆಲೆ ಬಾಳುವ, ಬದುಕಲು ತಕ್ಕ ಸಾಹಿತ್ಯ ಯಾವುದು ಎಂಬ ವಿಮರ್ಶೆಯ ತೂಕ ಆ ವಯಸ್ಸಿನಲ್ಲಿಯೂ ಅವರಲ್ಲಿಯೂ ಬಂದಿದ್ದಿತು. ಹಸಿಬಿಸಿಯಾದ ಗಡಿಗೆಮಡಿಕೆಗಳನ್ನು ಕುಶಲ ಕುಂಬಾರ ಮುರಿದು ಹಾಕುವಂತೆ, ಆ ನಾಟಕಗಳನ್ನು ರೊಲಾ

ಪ್ರಪಂಚದ ಕಣ್ಣಿಗೆ ಹಾಕಲಿಲ್ಲ.

೧೮೯೫-೯೮ರಲ್ಲಿ "ಸೇಂಟ್ ಲೂಯಿ" ಮತ್ತು "ಏಆರ್ಟ" ಎಂಬ ಎರಡು ನಾಟಕಗಳನ್ನು ರೊಲಾ ಬರೆದರು. ಆ ನಾಟಕಗಳಲ್ಲಿ ಅವರು ತಾವು ಕಂಡ ಬಾಳ ಗುರಿಯನ್ನು ಬೆಳಗಿದ್ದಾರೆ. ಬಾಳನ್ನು ಮೇಲಿನ ಮಟ್ಟಕ್ಕೆ ಎತ್ತುವುದೇ ಬೆಲೆ ಬಾಳುವ ಸಾಹಿತ್ಯ. ಚೈತನ್ಯಮಯ ಸತ್ಯವನ್ನು ಕಲೆಯಲ್ಲಿ ರೂಪಿಸಲು ನಂದದ ನಲ್ಮೆ ಬೇಕು. ಹಣಿಯದ ಹುಮ್ಮಸ್ಸು ಬೇಕು. ಕುಗ್ಗದ ಕೆಚ್ಚು ಬೇಕು. ಬತ್ತದ ಶ್ರದ್ಧೆ ಬೇಕು. ಮಾನವನ ಆತ್ಮಬಲವು ಸೋಲಿಸದ ಸೋಲಿಲ್ಲ, ಗೆಲ್ಲದ ಗೋಳಿಲ್ಲ. ವಿಧಿಯು ಹೊಡೆತ ತಿಂದೂ ನೆಲಕ್ಕೆ ಬೀಳದೆ ಗಟ್ಟಿಮುಟ್ಟಾಗಿ ನಿಂತು ಮುಂದೆ ಸಾಗುವವನು ಗುರಿಯನ್ನು ಸಾಧಿಸದಿದ್ದರೂ ಸೋತರೂ ಗೆದ್ದಂತೆಯೇ ಸರಿ. ವಿಧಿಯ ವಿಜಯಿಯೇ ಸರಿ. ಈ ಮರ್ತ್ಯಲೋಕದಲ್ಲಿ ಗುರಿಯನ್ನು ಕಾಣದೆ ಸಾವನ್ನು ಕಂಡರೂ ಶ್ರದ್ಧೆಯುಳ್ಳ ವೀರನು ಆ ಸಾವಿನಿಂದ ಅಮರನಾಗುತ್ತಾನೆ. ಬಾಳೂ ಅಮರವಾಗುತ್ತದೆ. ಧೀರನ ದುರಂತ ಹೊಸ ಹುಮ್ಮಸ್ಸನ್ನು ಪ್ರಪಂಚದಲ್ಲಿ ಹೊತ್ತಿಸುತ್ತದೆ. ಯುಗಯುಗಗಳಲ್ಲೂ ಅವನ ಹುಮ್ಮಸ್ಸಿನ ಗುಡಿಯನ್ನು ಎತ್ತಿ ಹಿಡಿದು ಹಾರಿಸಿ ಗುರಿಯನ್ನು ಕಾಣಲು ಹಲವರನ್ನು ಹುಟ್ಟಿಸಿ ಹುರುಪುಗೊಳಿಸುತ್ತದೆ.

"Saint Louis" ಮತ್ತು "Aert"
"ಸೇಂಟಲೂಯಿ" ಮತ್ತು "ಏಆರ್ಟ"

ಕಣ್ಣಿಗೆ ಕಾಣುವ ಗುರಿ ನಿಜವಾಗಿಯೂ ಅಲ್ಪ ವಿಷಯ. ಆದರೆ ಆ ಗುರಿಯನ್ನು ಸಾಧಿಸಲು ಬೆಳಗುವ ಶ್ರದ್ಧೆ ದಿವ್ಯವಾದುದು. ಅದು ಅದ್ಭುತ ಕಾರ್ಯ ಮಾಡಬಲ್ಲದು. ಸತ್ಯಂ ಶಿವಂ ಸುಂದರಂ ನಿರ್ಮಿಸಬಲ್ಲದು. ಅದು ಗೆಲುವಿಗಾಗಿ ಹಂಬಲಿಸದು. ಗೆಲುವನ್ನು ಕಸಿದೊಯ್ದು ವಿಧಿ ಗೋಳನ್ನು ಎಸೆದರೂ, ಧೀರ ತನ್ನ ಆತ್ಮದಲ್ಲಿಯ ಶ್ರದ್ಧೆಯ ಜ್ಯೋತಿಯಿಂದಲೇ ಬೆಳಕು ಕಾಣುತ್ತಾನೆ. ಆ ಶ್ರದ್ಧೆಯಿಂದ ಬಾಳು ಬೆಳಗುತ್ತದೆ. ಆ ಶ್ರದ್ಧೆ ಪ್ರಪಂಚವನ್ನು ಗೆಲ್ಲುತ್ತದೆ. ನಲ್ಮೆ ಹಗೆಯನ್ನು

ಗೆಲ್ಲುತ್ತದೆ. ಈ ದಿವ್ಯ ಅನಂತ ಸತ್ಯವನ್ನು ರೊಲಾ ಆ ಎರಡು ನಾಟಕಗಳಲ್ಲಿ ಚಿತ್ರಿಸಿರುವರು. ಒಂದರಲ್ಲಿ ಧರ್ಮವಿಜಯಕ್ಕಾಗಿ ಸರ್ವಸ್ವವನ್ನು ತೊರೆದ ಫ್ರಾನ್ಸದ ಅರಸು ಸೇಂಟ್‌ಲೂಯಿ, ಇನ್ನೊಂದರಲ್ಲಿ ಧ್ಯೇಯಸಾಧನೆಗಾಗಿ ದೇಹವಿಟ್ಟ ಹಾಲಂಡದ ಅರಸುಮಗ ಏಅರ್ಟ್ ಇವರೇ ಮುಖ್ಯ ನಾಯಕರು.

ಫ್ರಾನ್ಸದ ಅಂದಿನ ರಂಗಭೂಮಿಯು ಪರಿಸ್ಥಿತಿ ಹೇಗಿತ್ತೆಂಬುದನ್ನು ಮೇಲೆ ಹೇಳಿದೆ. ಅಂಥ ಉತ್ಸಾಹವಿಲ್ಲದ ಆದರ್ಶವಿಲ್ಲದ ಹೀನ ಪರಿಸ್ಥಿತಿಯಲ್ಲಿ ಇಂಥ ನಾಟಕಗಳಿಗೆ ಉತ್ತೇಜನ ಸಿಗುವ ಬಗೆ ಹೇಗೆ? ರಂಗಭೂಮಿ Moral institution (ನೀತಿಯ ನೆಲೆಗಟ್ಟು) ಇರಬೇಕೆಂದು ಜರ್ಮನ್ ಕವಿ ಸ್ಕಿಲರ್ ಎಂಬವನ ಆದರ್ಶ. ಹಾಗೆ ಇರದೆ ರಂಗಭೂಮಿ ಸ್ವೈರ ವಿಕಾರಗಳನ್ನು ಉದ್ರೇಕಿಸುವ ವಿಲಾಸ ಮಂದಿರವಾದರೆ, ಇಂಥ ನಾಟಕ ರಚಿಸುವುದೆಂತು? ಜನತೆಯ ಅಭಿರುಚಿಯನ್ನೇ ಮಾರ್ಪಡಿಸಿ ಒಂದು ಆದರ್ಶ ರಂಗಭೂಮಿಯನ್ನು ನಿರ್ಮಿಸಬೇಕೆಂದು ರೊಲಾ ಹೆಣಗಿದರು. "Peoples Theatre" ("ಜನತೆಯ ರಂಗಭೂಮಿ") "Revolution of the Theatre" ("ರಂಗಭೂಮಿಯ ಕ್ರಾಂತಿ") ಎಂಬ ಪುಸ್ತಕಗಳಲ್ಲಿ ತಮ್ಮ ವಿಚಾರಗಳನ್ನು ಮಂಡಿಸಿದರು. ಆದರ್ಶವನ್ನು ಸಾರಿದರು. "ನಮ್ಮ ರಾಷ್ಟ್ರದ ಉಜ್ವಲ ಚರಿತ್ರೆಯೊಳಗಿನಿಂದ ತನ್ನ ವಸ್ತುವನ್ನು ಜನಪ್ರಿಯ ಕಲೆ ಆರಿಸಿಕೊಳ್ಳುವಂತೆ ಕಲಿಸುವುದೇ ನಮ್ಮ ಕಾರ್ಯ........ಬೇರೆ ರಾಷ್ಟ್ರಗಳ ವೀರ ವಿಭೂತಿಗಳನ್ನೂ ಅವರ ಧೀರ ಜೀವನವನ್ನೂ ನಾವು ನಮ್ಮ ರಂಗಭೂಮಿಯ ಮೇಲೆ ನಮ್ಮ ನಾಟ್ಯ ಸೃಷ್ಟಿಯಲ್ಲಿ ರೂಪಿಸಬೇಕು" ಎಂದು ರೊಲಾ ಕೂಗಿಕೊಂಡರು.

ರಂಗಭೂಮಿಯ ಕ್ರಾಂತಿ

೧೭೮೯ರಲ್ಲಿ ನಡೆದು ಹೋದ ಫ್ರಾನ್ಸದ ರಾಜ್ಯಕ್ರಾಂತಿ ಆ ರಾಷ್ಟ್ರದ ಚರಿತ್ರೆಯಲ್ಲಿ ಅತ್ಯಂತ ಸ್ಫೂರ್ತಿದಾಯಕ ಭಾಗ. ಆ ಕ್ರಾಂತಿಯ

"The 14th of July
"೧೪ ನೇ ಜುಲೈ"

ಮಹಾಭಾರತವನ್ನು ರೋಲಾ ಹತ್ತು ನಾಟಕಗಳಲ್ಲಿ ರೂಪಿಸಬೇಕೆಂದರು. ಆದರೆ ಆರು ಮಾತ್ರ ಬರೆದರು. ಅದರಲ್ಲಿ ಮೊದಲನೆಯದು "೧೪ನೇ ಜುಲೈ." ಆ ದಿನ ಕ್ರಾಂತಿಯ ಕಹಳೆ ಕೂಗಿದವು. ನಿಸರ್ಗದಲ್ಲಿಯ ಉತ್ಪಾತದಂತೆ ಕ್ರಾಂತಿ ಎದ್ದು ಬಂದಿತು. ಬಹಳ ದಿನದ ಒಳಸಂಚು ಇರಲಿಲ್ಲ. ಯಾವನೊಬ್ಬ ಮುಂದಾಳು ಅದಕ್ಕೆ ದಾರಿ ತೋರಲಿಲ್ಲ. ತಿಳಿಯಾದ ಮುಗಿಲಿನಿಂದ ಸಿಡಿಲು ಘುಡುಘುಡಿಸಿ ಮೊಳಗುವಂತೆ, ಜನತೆಯ ಹೃದಯದಲ್ಲಿ ಕಾಣದಂತೆ ಹೊತ್ತುತ್ತಿದ್ದ ಭೀಕರ ಆವೇಶ ಭುಗ್ ಭುಗ್ ಭುಗಿಲ್ಲೆಂದು ಒಮ್ಮೆಲೇ ಹೊರಹೊಮ್ಮಿತು. ಆ ಸಿಡಿಲು ಮೊದಲು ಬ್ಯಾಸ್ಟಿಲ್ ಎಂಬ ಸರಕಾರದ ಸೆರೆಮನೆಯ ಮಹಾದ್ವಾರಗಳನ್ನು ಮುರಿದಿಕ್ಕಿತು. ಸಾವಿರಾರು ಸೆರೆಯಾಳುಗಳು ಕ್ರಾಂತಿಯ ಘೋರ ಗರ್ಜನೆಯನ್ನು ಮಾಡುತ್ತ ಹೊರಬಿದ್ದರು. ಎಲ್ಲೆಲ್ಲೂ ಸಿಡಿಲೊಡೆದು ಇಡೀ ರಾಷ್ಟ್ರವೇ ಉರಿದೆದ್ದಿತು.

ಈ ಎಲ್ಲ ಅಲ್ಲೋಲ ಕಲ್ಲೋಲವನ್ನು ರೊಲಾ "೧೪ನೇ ಜುಲೈ" ಎಂಬ ನಾಟಕದಲ್ಲಿ ಕುದಿಯುವ ಹೃದಯದ ಬಣ್ಣಗಳಿಂದ ಚಿತ್ರಿಸಿದರು. ಅದರಲ್ಲಿ ಯಾವನೊಬ್ಬ ನಾಯಕನಿಲ್ಲ. ಭೋರ್ಗರೆವ ಜನಸಮುದ್ರವೇ ನಾಯಕ. ರಂಗಭೂಮಿಯ ಮೇಲಿನ ಜನಸಮುದ್ರದ ರುದ್ರ ಹರ್ಷಾವೇಶದಿಂದ ಪ್ರೇಕ್ಷಕ ಸಮುದ್ರವೆಲ್ಲ ಮೈಮರೆತು ಉಕ್ಕೇರಬೇಕೆಂದು ರೊಲಾ ಆಶಿಸಿದ್ದರು. ಆದರೆ ತನ್ನ ಭವ್ಯ ಚರಿತ್ರೆಯನ್ನು ಮರೆತು ಬಿಟ್ಟ ಫ್ರಾನ್ಸ ದೇಶದ ಮುಖ್ಯ ಪಟ್ಟಣವಾದ ಆ ಪ್ಯಾರಿಸದ ಜನಜಂಗುಲಿಯ ಗಲಾಟೆಯಲ್ಲಿ ರೊಲಾರ ರುದ್ರ ಆನಂದಗೀತ ಮಾರ್ದನಿಯಿಲ್ಲದೆ ಮುಳುಗಿ ಹೋಯಿತು!

"ಡಾಂಟನ್" ಎಂಬುದೊಂದು ಎರಡನೆಯ ನಾಟಕ. ಕ್ರಾಂತಿಯ ಏರು ಮತ್ತು ಇಳಿತಗಳ ನಡುವಿನ ಮುಷ್ಟಿದ ಚಿತ್ರ ಅದರಲ್ಲಿದೆ.

"Danton"
"ಡಾಂಟನ್"

ಸಾತ್ವಿಕ ಹುಮ್ಮಸ್ಸಿನಿಂದ ತ್ಯಾಗದ ಬಲದಿಂದ ಕ್ರಾಂತಿಯು ಏರಿನಲ್ಲಿ ಸ್ವಾತಂತ್ರ್ಯದ ಹೋರಾಟ ಸಾಗುತ್ತದೆ. ಗೆಲುವಿನ ಗುರಿಯನ್ನು ಮುಟ್ಟುತ್ತಲೆ ಇಳಿತಕ್ಕೆ ಆರಂಭವಾಗುತ್ತದೆ. ಆಗ ತೆರೆಗಳ ತಾಕಲಾಟಗಳ ಮೇಲೇರಿ ಮಹತ್ವಾಕಾಂಕ್ಷೆಯಾದ ಮುಂದಾಳು ತನ್ನ ಸ್ವಾರ್ಥ ಸಾಧಿಸುತ್ತಾನೆ. ಗೆಲುವಿನ ಈ ದುರಂತ ಪ್ರತಿಯೊಂದು ಮಹಾ ಆಂದೋಲನದ ಇತಿಹಾಸದಲ್ಲಿ ಕಾಣಬರುತ್ತದೆ. ಗೆಲುವಿನಿಂದ ಬಂದ ಬಲ ಕೆಲವರ ಕೈಯಲ್ಲಿ ಮಾತ್ರ ಶೇಖರಿಸಿ ಅವರಲ್ಲಿ ಸತ್ತೆಯ ಲಾಲಸೆ ಅಂಕುರಿಸುತ್ತದೆ. ಅಂಧ ಜನತೆ ಇಂಥವರ ಬೆನ್ನೀ ಹತ್ತುತ್ತದೆ. ಬಣ ಬಣಗಳು ಪಕ್ಷ ಪಕ್ಷಗಳು ತಲೆಯೆತ್ತಿ ಬೇರೆ ಬೇರೆ ಗೊತ್ತುಗುರಿಗಳನ್ನು ಕಾರ್ಯಕ್ರಮಗಳನ್ನು ಸಾರುತ್ತವೆ. ಆ ಕಾರ್ಯಕ್ರಮಗಳಲ್ಲಿ ತಿಕ್ಕಾಟಕ್ಕೆ ಆರಂಭವಾಗುತ್ತದೆ. ಸ್ವಾರ್ಥಸಾಧಕರ ಆಟವೇ ಸಾಗುತ್ತದೆ. ಆಗ ಆದರ್ಶ ಪ್ರೇಮಿಗಳು ತ್ಯಾಗವೀರರು ಬದಿಗೆ ಸರಿಯಬೇಕಾಗುತ್ತದೆ. ಅವರಿಗೆ ಆದರ್ಶವೇ ಎಲ್ಲವೂ. ಗೆಲುವು, ಬಲ, ಸತ್ತೆ ಯಾವುದಕ್ಕೂ ಅವರು ಹಂಬಲಿಸುವುದಿಲ್ಲ.

ಫ್ರಾನ್ಸದ ಕ್ರಾಂತಿಯ ಆಂದೋಲನದಲ್ಲಿ ಇಂಥದೊಂದು ಮಟ್ಟ ಬಂದಾಗ ರಾಬಿಸ್ಪಿಯರ್ ಮುಂತಾದ ಮುಂದಾಳುಗಳ ಪಕ್ಷ ಸತ್ತೆಯ ಸೂತ್ರಗಳನ್ನು ಕೈವಶಪಡಿಸಿಕೊಂಡು ಕುಣಿಯುತ್ತದೆ. ಆಗ ಡಾಂಟನ್ ಎಂಬೊಬ್ಬ ಆದರ್ಶವಾದಿ ಕ್ರಾಂತಿವೀರನು ಅಧಿಕಾರ ಲಾಲಸೆಯ ಆ ಹೋರಾಟಕ್ಕೆ ಹೇಸಿಕೊಳ್ಳುತ್ತಾನೆ. ಸತ್ತಾಧೀಶರ ಹತ್ಯಾಕಾಂಡದ ಕ್ರೂರ ಕರ್ಮಗಳಿಗೆ ಬೇಸರಿಯುತ್ತಾನೆ. ಅವನು ದ್ರೋಹಿಯೆಂದು ಕೂಗಾಟಕ್ಕೆ ಆರಂಭವಾಗುತ್ತದೆ. ಇದರ ಕೊನೆಯನ್ನು ಬೇರೆ ಹೇಳಬೇಕಾಗಿಲ್ಲ.

೧೯೦೦ನೇ ಇಸವಿಯ ಡಿಸೆಂಬರ್ ೨೦ನೇ ದಿನ ಈ ನಾಟಕವನ್ನು ರೊಲಾ ರಂಗಭೂಮಿಯ ಮೇಲೆ ತಂದರು. ಪ್ಯಾರಿಸದ ಪ್ರೇಕ್ಷ

ಕರ ಪ್ರಪಂಚ ಅದನ್ನು ನೋಡಿತು. ೭ಳ ಘಂಟೆಗಳಲ್ಲಿ ಮುಖ ತಿರುವಿ ಮರೆತುಬಿಟ್ಟಿತು!

“Triumph of Reason”
“ವಿವೇಕದ ವಿಜಯ”

‘ತನ್ನ ಆದರ್ಶವೋ ತನ್ನ ದೇಶವೋ?’—ಎಂಬ ಸಮಸ್ಯೆ ಈ ನಾಟಕದ ವಿಷಯ. ಪ್ರಪಂಚದಲ್ಲಿ ಸ್ವದೇಶಾಭಿಮಾನದ ಹುಚ್ಚು ತಲೆಗೇರಿದೆ, ವಿಶೇಷತಃ ಪಾಶ್ಚಾತ್ಯ ರಾಷ್ಟ್ರಗಳಲ್ಲಿ. ಆ ಹುಚ್ಚರು—ಅಂಥ ದೇಶಾಭಿಮಾನಿಗಳು—ಇಬ್ಬರನ್ನೇ ಬಲ್ಲರು, ದೇಶಭಕ್ತ ಮತ್ತು ದೇಶದ್ರೋಹಿ. ಮೂರನೆಯವನು ಅವರ ಕಣ್ಣಿಗೆ ಕಾಣನು. ಸತ್ಯವನ್ನು, ಸ್ವಾತಂತ್ರ್ಯವನ್ನು (ಇನ್ನೊಬ್ಬರ), ಸದಸದ್ವಿವೇಕ ಬುದ್ಧಿಯನ್ನು—ಎಲ್ಲವನ್ನೂ ಬಲಿಗೊಡುವವನೇ ದೇಶಭಕ್ತ. ಮಿಕ್ಕವರೆಲ್ಲರೂ ದೇಶದ್ರೋಹಿ. ಇದೇ ಅವರ ದೇಶಭಕ್ತಿಯ ವ್ಯಾಖ್ಯೆ. ಈ ನಾಟಕದಲ್ಲಿ ಇಂಥ ತತ್ವದ ಹುಚ್ಚರು ಒಂದು ಕಡೆಗೆ. ಇನ್ನೊಂದು ಕಡೆಗೆ ಅವರಿಗೆ ವಿರೋಧವಾಗಿ ನಿಂತ ಆದರ್ಶಪ್ರೇಮಿಗಳ ಧೀರರ ಸಣ್ಣ ಗುಂಪು. ಎಲ್ಲಿಯೋ ಆಗಲಿ, ಆ ಹುಚ್ಚರೇ ಹೆಚ್ಚು. ಅವರದೇ ಬಹುಮತ. ಅವರದೇ ಬಲ. ಅವರ ಕೈಯಲ್ಲಿಯೋ ಸತ್ತೆಯ ಸೂತ್ರ. ಅವರಿಗೇ ಗೆಲುವು. ಆ ಹುಚ್ಚರನ್ನು ಎದುರಿಸಿ ಸತ್ಯ, ನ್ಯಾಯ, ಧರ್ಮ ಎಂದು ಕೂಗಾಡುವುದೆಂದರೆ ಸೋಲನ್ನು, ಸಾವನ್ನು ಕೈಮಾಡಿ ಕರೆದಂತೆ ಎಂದು ಆದರ್ಶವಾದಿಗಳು ಸತ್ಯಾಗ್ರಹಿಗಳು ಬಲ್ಲರು. ಆದರೆ ಇಂಥ ಹೋರಾಟದಲ್ಲಿ ಸೋಲಿನಲ್ಲಿಯೇ ಸತ್ಯದ ಗೆಲುವಿದೆ. ತನ್ನ ದೇಶವೋ ಅಥವಾ ತನ್ನ ಆದರ್ಶವೋ ಎಂಬ ಧರ್ಮಸಂಕಟದಲ್ಲಿ ದೇಶಕ್ಕಾಗಿ ಹೋರಾಡಿ ಗೆಲ್ಲುವುದೆಂದರೆ ದೇಶಕ್ಕಿಂತ ಶ್ರೇಷ್ಠವಾದ ಸತ್ಯದ ದ್ರೋಹ, ದೇಶಕ್ಕಿಂತ ಪವಿತ್ರವಾದ ನ್ಯಾಯದ ದ್ರೋಹ, ದೇಶದ ಮೇರೆ ಮೀರಿದ ಪರಮ ಪವಿತ್ರ, ಅನಂತ, ಅಮರವಾದ ಭಗವಂತನ ಧರ್ಮಸಾಮ್ರಾಜ್ಯಕ್ಕೆ ದ್ರೋಹ. ಇಂಥ ಗೆಲುವಿಗಾಗಿ ಹಂಬಲಿಸದೆ, ಇಂಥ ದ್ರೋಹಕ್ಕೆ ಬೆಚ್ಚಿ ಬೀಳದೆ, ಸತ್ಯಧರ್ಮದ ನಾಡ

ಗುಡಿಯನ್ನೆತ್ತಿಹಿಡಿದ ಸತ್ಯಾಗ್ರಹಿಯು ದೇಶಭಕ್ತರಿಗೆ ಸಾರಿ ಹೇಳುತ್ತಾನೆ. "ನಿಮ್ಮ ಗೆಲುವಿನ ಕಲಂಕ ತಗಲದಂತೆ ನಮ್ಮ ಆದರ್ಶವನ್ನು ನಾವು ಕಾಯ್ದೆವು. ನಮ್ಮ ನಿಷ್ಕಲಂಕ ಸೋಲಿನಲ್ಲಿಯೇ ಎಂದೂ ಕುಂದದ ಗೆಲುವಿದೆ ! ನಿಮ್ಮ ಗೆಲುವನ್ನು ನಮ್ಮ ಸೋಲಿನಿಂದ ಗೆದ್ದೆವು ! ಎಲ್ಲರಿಗೂ ಎದುರಾಗಿ ಏಕಾಕಿಯಾಗಿ ಹೋರಾಡುವುದೇ ಬಲ ! ಅದೇ ಗೆಲುವು !" ಹೀಗೆ ಘೋಷಿಸಿ ಸತ್ಯಾಗ್ರಹಿಗಳು ಸಾವನ್ನು ಅಪ್ಪುತ್ತಾರೆ. ಸಾವನ್ನು ಗೆಲ್ಲುತ್ತಾರೆ. ಇಂಥ ವಿಜಯವೇ, ವಿವೇಕವಿಜಯವೇ ಈ ನಾಟಕದ ಮಂತ್ರ.

"The Wolves"
"ತೋಳಗಳು"

ಮೇಲೆ ಹೇಳಿದ ಡ್ರೈಫಸ್ ಪ್ರಕರಣದಲ್ಲಿ ಅಡಕವಾದ ಹೋರಾಟವೇ ಈ ನಾಟಕದ ಕಥಾವಸ್ತು. ಟ್ಯೂಲಿಯರ್ ಒಬ್ಬ ವಿದ್ಯಾವಂತ, ಆದರ್ಶವಾದಿ. ಡಿಆಯರನ್ ಅವನ ಹಗೆ. ಹಗೆಯ ಮೇಲೆ ಅನ್ಯಾಯವಾಗಿ ದೇಶದ್ರೋಹದ ಆರೋಪ ಬಂದಿದೆ ಎಂದು ಅವನು ಬಲ್ಲನು. ಆ ಹಗೆಯ ನ್ಯಾಯವಾದ ಪಕ್ಷವನ್ನು ಎತ್ತಿ ಹಿಡಿದು ಹೋರಾಡುತ್ತಾನೆ. ಹೋರಾಟದ ಕೊನೆಯನ್ನೂ ಬಲ್ಲನು. ಆದರೂ ಸೋಲೇನು ಗೆಲುವೇನು, ಸಾವೇನು ಜೀವೇನು, ಎಂದು ಪರಿವೆಯಿಲ್ಲದೆ ಹೋರಾಡುತ್ತಾನೆ. ಕ್ರಾಂತಿಯು ಕೂಗಿನಿಂದ ಹುಚ್ಚೆದ್ದು ಕುಣಿಯುವ ಅಂಥ ದೇಶಭಕ್ತಿಗೇನೇ ಕೊನೆಗೆ ಮೇಲುಗೈ. ಸತ್ಯಾಗ್ರಹಿಗೆ ಸೋಲು, ಸಾವು !

ಕನಸು ಬಯಲಾದವು!

ರೊಲಾ ಬರೆದ ೧೨ ನಾಟಕಗಳಲ್ಲಿ ಇಂಥವೇ ಹೆಚ್ಚು. ಧರ್ಮಸಂಕಟಗಳ ಸಮಸ್ಯೆಗಳನ್ನು ನಿರೂಪಿಸುವುದರಲ್ಲಿ ಅವರದು ಪಳಗಿದ ಕೈ. ಅವರ ನಾಟಕಗಳಲ್ಲಿ ಆದರ್ಶದ ಜ್ಯೋತಿ ಬೆಳಗುತ್ತದೆ. ಕಲೆಯ ಕಾಂತಿ ಮಿನುಗುತ್ತದೆ. ಆದರೆ ಯಾವ ನಾಟಕಗಳೂ ಲೋಕಪ್ರಿಯವಾಗಲಿಲ್ಲ. ಕೆಲವು ಪ್ರಯೋಗಗಳ ನಂತರ ಜನ ಬೇಸರಿಯಿತು. ವಿರೋಧಿಯಾದ ವಿಮರ್ಶಕರ ಟೀಕೆ ಮತ್ತು ಜನತೆಯ ಔದಾಸೀನ್ಯ ಇವುಗಳ ಪರಿಣಾ

ಮವಾಗಿ ಕೆಲವು ನಾಟಕಗಳಂತೂ ಒಂದೊಂದು ಪ್ರಯೋಗವಾಗುತ್ತಲೆ ಮೂಲೆಗುಂಪಾದವು. ಸರಕಾರದಿಂದಲೂ ಉತ್ತೇಜನ ಸಿಕ್ಕಲಿಲ್ಲ.

ಅವರ ಒಂದೊಂದು ಕನಸೂ ಕುಸಿದು ಕುಪ್ಪಳಿಸಹತ್ತಿತು. ಅದೆಂತಹ ಸೊಗಸಿನ ಆಸೆಯ ಕನಸಿನಿಂದ ಮೊದಲಾಯಿತು ಅವರ ದಾಂಪತ್ಯ ಜೀವನ. ಆ ಕನಸೂ ಹಾಳಾಗಿ ಹೋಯಿತು. ಆದರೆ ಆ ದಾರುಣ ದುರಂತದ ನಿಟ್ಟುಸಿರಿನ ನೆಳಲು ಸಹ ಅವರ ಸಾಹಿತ್ಯದಲ್ಲಿ ಸುಳಿಯುವುದಿಲ್ಲ. ಏಕಾಂತದ ತಮ್ಮ ಕರ್ಮಭೂಮಿಯಲ್ಲಿ ತಮ್ಮ ಶ್ರದ್ಧೆಯ ಆದರ್ಶದ ನಂದಾದೀಪ ನಿರಾಸೆಯ ಬಿರುಗಾಳಿಯಲ್ಲಿ, ಕ್ಲೇಶದ ಕತ್ತಲೆಯಲ್ಲಿ ನಂದದಂತೆ ಅವರು ಹೋರಾಡಿದರು !

ನೋವು ಮಾನವಕುಲದ ಮಹಾಗುರು ಎಂದು ಸ್ವಾಮಿ ವಿವೇಕಾನಂದ ಹೇಳಿರುವರು. ಪ್ರಪಂಚದಲ್ಲಿ ಮಹಾಕವಿ, ಮಹಾಸಾಹಿತಿ, ಮಹಾವಿಭೂತಿ ಇವರೆಲ್ಲರ ಬಾಳಿನ ಆಳವನ್ನು ತಳಸೋಸಿ ನಿರುಕಿಸಿದರೆ ಆ ಆಳದಲ್ಲಿ ಅಳಲಿನ ಕುದಿ ಕಾಣುವುದು. ಆ ಕುದಿಯಿಂದಲೇ ಅವರ ಬಾಳು ಅಮೃತದ ಪಾಕಕ್ಕಿಳಿಯುವುದು. ಮಾನವನು ಹೆಚ್ಚೆಚ್ಚು ಮೇಲಿನ ಮಟ್ಟಕ್ಕೆ ಹೋದಂತೆ ಇನ್ನೂ ಹೆಚ್ಚಿನ ಸತ್ವಪರೀಕ್ಷೆಯೇ ಅವನ ಪಾಲಿಗೆ ಬರುವುದು. ಹಾಗೆ ನೋವಿನ ಕುಲುಮೆಯಲ್ಲಿ ಕುದಿದಂತೆಲ್ಲ ಅವನ ಬಾಳು ಶುದ್ಧ ಅಪರಂಜಿಯಾಗಿ ಬೆಳಗುತ್ತದೆ. ನೋವಿನಿಂದಲೇ ನಲವು. ನೋವಿನಲ್ಲಿಯೇ ಕಲೆಯ ಹುಟ್ಟು. ಅಮರವಾದ ಕಲೆಯ ಕಿಡಿ.

ನೋವು ಮಾನವನ ಮಹಾಗುರು !

ಬಾಳ ಆಘಾತಗಳಿಂದ ನೆಲಕ್ಕುರುಳದೆ ರೊಲಾ ಸಿಡಿದೆದ್ದು ಗರ್ಜಿಸಿದರು:— "ಬಾಳಿನ ದುರಂತದ ಎದುರಿಗೆ ಹೇಡಿತನದಿಂದ ಕಣ್ಣು ಮುಚ್ಚುವುದು ಆದರ್ಶವಲ್ಲ. ........ ಪ್ರಪಂಚದಲ್ಲಿ ಒಂದೇ ಒಂದು ಶೌರ್ಯವಿದೆ, ಶ್ರೇಷ್ಠ ಶೌರ್ಯವಿದೆ. ಬಾಳಿನ ತಿರುಳನ್ನು ತಿಳಿಯುವುದು, ಕಣ್ಣಾರೆ ಕಾಣುವುದು, ತಳಮಳವನ್ನು ತಾಳುವುದು ಮತ್ತು ಬಾಳನ್ನು ಮೆಚ್ಚಿ ನಲಿಯುವುದು ! ........ ಮಹಾತ್ಮರು ದೊಡ್ಡ ಬೆಟ್ಟಗಳ

ತುದಿಗಳಂತೆ ! ಬಿರುಗಾಳಿ ಅವನ್ನು ಸೆಳೆಯುತ್ತದೆ. ಕಾರ್ಮೋಡ ಮುತ್ತುತ್ತದೆ. ಆದರೆ ಅವನ್ನೆಲ್ಲ ಮೆಟ್ಟಿ ಮೇಲೇರಿ ಮೆರೆಯುವ ಆ ಶಿಖರಗಳ ಮೇಲೆ ಪ್ರಸನ್ನತೆಯ ಸಾಮ್ರಾಜ್ಯ ಹಬ್ಬಿದೆ. ಆ ಶುದ್ಧ ಶಾಂತಿಯ ಸಾಮ್ರಾಜ್ಯದಲ್ಲಿ ಎದೆಯ ಗಾಯ, ನೋವು ಮಾಯುತ್ತವೆ. ಬಿರುಗಾಳಿ ನಿಂತು,ಮೋಡ ಮರೆಯಾಗುತ್ತಲೆ ಮಾನವಕುಲವೆಲ್ಲ ಕಣ್ಣಿಗೆ ಕಾಣುವುದು !"

ಇಂಥ ಮಹಾತ್ಮರ ಧೀರೋದಾತ್ತ ವೀರರ ಜೀವನ ಚರಿತ್ರೆಗಳನ್ನು ಬರೆದು ರೊಲಾ ತಮ್ಮನ್ನು ಮತ್ತು ತಮ್ಮಂತೆ ತೊಳಲುವ ಅಸಂಖ್ಯ ದುಃಖಿತರನ್ನು ಸಂತಯಿಸಲು ಹೆಣಗಿದರು.

ಜೀವನ ಚರಿತ್ರೆಗಳನ್ನು ಹಲವರು ಬರೆಯುತ್ತಾರೆ. ಜೀವನದಲ್ಲಿ ನಡೆದ ಸಂಗತಿಗಳನ್ನು ಇದ್ದಕ್ಕಿದ್ದಂತೆ ಬಣ್ಣಿಸುತ್ತಾರೆ. ಆದರೆ ರೊಲಾ ಬರೆಯುವ ರೀತಿಯಲ್ಲಿ ಕಲೆಯಿದೆ.

ಜೀವನಚರಿತ್ರೆ-ಕಲೆ

ಕತೆ, ಕಾದಂಬರಿ, ನಾಟಕ ಮುಂತಾದ ಕಲಾಕೃತಿಗಳಲ್ಲಿ ಕಾಣಬರುವ ಕಲೆಯನ್ನು ಅವರು ಜೀವನಚರಿತ್ರೆಗಳನ್ನು ಬರೆಯುವಲ್ಲಿ ಬಳಸಿರುವರು, ಬೆಳೆಸಿಕೊಂಡು ಬಂದಿರುವರು. ಕಥಾನಿರ್ವಹಣ, ವಸ್ತುವಿನ್ಯಾಸ, ಪಾತ್ರಪೋಷಣೆ, ಪರಿಸರನಿರ್ಮಾಣ, ಸಂವಿಧಾನದ ಓಟ, ಸೂಕ್ಷ್ಮ ಕ್ರಿಯಾತಂತ್ರ— ಇವೆಲ್ಲ ಕಲಾಕೃತಿಗಳಲ್ಲಿ ಕಂಡಂತೆ, ರೊಲಾ ಬರೆದ ಜೀವನಚರಿತ್ರೆಗಳಲ್ಲಿಯೂ ಕಾಣಬಹುದು. ಬುದ್ಧಿಭಾವನೆಗಳನ್ನು ಮೇಳಯಿಸಿ, ಸತ್ಯ ಮತ್ತು ಕಲ್ಪನೆಗಳನ್ನು ಹೆಣೆದು, ಅವರು ತೆಗೆದ ವ್ಯಕ್ತಿಚಿತ್ರ ಕುಶಲ ಕಲಾಕೃತಿಗಳಾಗಿವೆ. ವ್ಯಕ್ತಿಯ ಆಂತರ ಜೀವನ, ಬುದ್ಧಿಯ ವಿಕಾಸ ಭಾವನೆಯ ಬೆಳವಣಿಗೆ, ವ್ಯಕ್ತಿತ್ವದ ಪೋಷಣೆ - ಎಲ್ಲವೂ ನಮ್ಮ ಕಣ್ಮುಂದೆ ಕಟ್ಟಿದಂತಾಗಿ ವ್ಯಕ್ತಿಚಿತ್ರ ಜೀವಕಳೆಯಿಂದ ತುಂಬುತ್ತದೆ.

ರೊಲಾ ಬರೆದ ಜೀವನಚರಿತ್ರೆಗಳ ವಿಷಯವಾಗಿ ಇನ್ನೊಂದು ಮಹತ್ವದ ಮಾತು. ಅವರು ಬರೆದ ಜೀವನ ಚರಿತ್ರೆಗಳ ನಾಯಕರಂತೆ

ಜೀವನಚರಿತ್ರೆ-
ಆತ್ಮಚರಿತ್ರೆ

ಅವರೂ ಧೀರೋದಾತ್ತ ವೀರರು. ಅವರ ವ್ಯಕ್ತಿ ಚಿತ್ರವೂ ಒಂದು ಮಹಾಕಾವ್ಯವೇ. ಅವರು ನೋವಿನಲ್ಲಿ ನಲಿವನ್ನು ಕಂಡು ಮಾನವಕುಲದ ಸೇವೆಯಲ್ಲಿ ಶಾಂತಿಯನ್ನು ಸಾಧಿಸಿದ ಆದರ್ಶವಾದಿ. ಬಾಳಿನ ಬೇರೆ ಬೇರೆ ಸನ್ನಿವೇಶಗಳಲ್ಲಿ ಹಲವು ಹೊಡೆತ ಬಿದ್ದು ಅವರ ವ್ಯಕ್ತಿತ್ವ ರೂಪಗೊಂಡಿದೆ, ಮೂರ್ತಿಶಿಲ್ಪಿಯ ಕೈಯಲ್ಲಿ ಉಳಿಯ ಕೆತ್ತನೆಯಿಂದ ರೂಪಿಸಲಾದ ಅಮೃತಶಿಲೆಯ ಮೂರ್ತಿಯಂತೆ. ಬಾಳಿನ ಒಂದೊಂದು ಹೊಡೆತ ಬಿದ್ದಾಗ ಒಂದೊಂದು ಸಮಸ್ಯೆ ಭೀಕರವಾಗಿ ಎದುರಿನಲ್ಲಿ ಬಂದು ನಿಂತಾಗ, ಅಂಥ ಹೊಡೆತಕ್ಕೆ ಹಣಿಯದ ವೀರರನ್ನು ರೊಲಾ ನೆನೆದರು. ಅಂಥ ಸಮಸ್ಯೆಯನ್ನು ಬಿಡಿಸಿ ಶಾಂತಿಯನ್ನು ಸಾಧಿಸಿದ ಧೀರರನ್ನು ನೆನೆದರು. ನೆನೆನೆನೆದಂತೆ ಅವರ ಚರಿತ್ರೆಗಳನ್ನು ಬರೆದರು. ಅವರು ಬರೆದ ನಾಟಕಗಳಲ್ಲಿ, ಕಾದಂಬರಿಗಳಲ್ಲಿ, ಜೀವನಚರಿತ್ರೆಗಳಲ್ಲಿ ಅವರ ವ್ಯಕ್ತಿತ್ವದ ಅವರ ಆಂತರ ಜೀವನದ ಬೆಳವಣಿಗೆಯ ಸೂತ್ರ ಬದ್ಧ ಇತಿಹಾಸವನ್ನು ಕಾಣಬಹುದು.

ಸೋಮನಾಥಪುರದ ಕೇಶವ ದೇವಾಲಯ ಕನ್ನಡಿಗರ ಶಿಲ್ಪಕಲೆಯ ಅಮರ ಸ್ಮಾರಕವಾಗಿ ನಿಂತಿದೆ. ನಡುವೆ ಅದೃಶ್ಯ ಕೇಶವನ ಗರ್ಭಗುಡಿ.

ದೇವಮನುಷ್ಯನ
ದೇವಾಲಯ

ಸುತ್ತೆಲ್ಲ ದೇವಾಲಯದ ಹೊರಮೈ ಮೇಲೆಲ್ಲ ಕುಶಲ ಕುಸುರಿನ ದಿವ್ಯಕಲೆಯ ಮೂರ್ತಿಗಳಂತೆ ಬ್ರಹ್ಮ, ಶಿವ, ಇಂದ್ರ, ಮುಂತಾದ ದಿಕ್ಪಾಲಕರು ಹೀಗೆಲ್ಲ ನಿಲ್ಲಿಸಲಾಗಿದೆ. ಮಾನವಕುಲವೇ ರೊಲಾರ ಉಪಾಸ್ಯ ದೈವತ. ಅದ ಕ್ಕಾಗಿ ರೊಲಾ ತಮ್ಮ ಸಾಹಿತ್ಯದ ಭವ್ಯ ದೇವಾಲಯವನ್ನು ಕಟ್ಟಿ ರುವರು. ತಮ್ಮ ಕುದಿಯುವ ಭಾವನೆಯ ರಸದಲ್ಲಿ ಎರಕಹೊಯ್ದು ಕಲೆಯ ಉಳಿಯಿಂದ ರೂಪಿಸಿ ಜೀವನದ ದಿವ್ಯ ವಿಭೂತಿಗಳನ್ನು-ಬೀಥೊ ವೆನ್, ಮಾಯಕೆಲ್ ಆಂಜೆಲೋ, ಟಾಲ್ಸ್ಟಾಯ್, ಗಟೆ, ಗಾಂಧಿ, ರಾಮಕೃಷ್ಣ, ವಿವೇಕಾನಂದ ಮುಂತಾದವರನ್ನು-ದೇವಾಲಯದ ಹೊರ

ಮೈಮೇಲೆ ನಿಲ್ಲಿಸಿರುವರು.

ಬೀಥೋವೆನ್ ಜರ್ಮನಿಯ ಹೆಸರಾದ ಸಂಗೀತಗಾರ. ಅವನು ಮಾನವನಲ್ಲಿಯ ಆತ್ಮಜ್ಯೋತಿಯ ಬೆಳಕನ್ನು ಬೀರುವುದೇ ಸಂಗೀತದ ಕಾರ್ಯವೆಂದನು. ಭಗವಂತನ ದಿವ್ಯಜ್ಯೋತಿಯ ಬೆಳಕನ್ನು ತಂದು ಮಾನವಕುಲದ ಮೇಲೆ ಬೆಳಗುವುದೇ ಸಂಗೀತದ ಗುರಿಯೆಂದನು. ಪ್ರಪಂಚದ ಎಲ್ಲ ವಿದ್ಯೆ ಎಲ್ಲ ದರ್ಶನಗಳಿಗಿಂತ ಹೆಚ್ಚಾಗಿ ಭಗವಂತನ ಆವಿಷ್ಕಾರವನ್ನು ಮಾನವಕುಲಕ್ಕೆ ಸಂಗೀತವೇ ಮಾಡುವುದೆಂದು ಸಾರಿದನು. ದೀನದುಃಖಿತರ ಶಾಂತಿಸಂತೋಷಗಳಿಗಾಗಿ ನನ್ನ ಕಲೆಯ ಅವತಾರವೆಂದನು.

Beethoven-
ಬೀಥೋವೆನ್

ಇವನು ಬಾಳಿ ಬದುಕಿದ ಅರ್ಧಶತಮಾನವೆಲ್ಲ ಕಷ್ಟದಲ್ಲಿ ಕಳೆದು ಹೋಯಿತು. ಕುಡುಕ ತಂದೆ ತಾಯಿಮಕ್ಕಳನ್ನು ದಿಕ್ಕಿಲ್ಲದವರನ್ನಾಗಿ ಮಾಡಿ ಸತ್ತು ಹೋದನು. ಹೊಟ್ಟೆ ಹೊರಕೊಳ್ಳಲು, ಬಾಳಿ ಬದುಕಲು ಬೀಥೋವೆನ್ನನಿಗೆ ಸಂಗೀತವೇ ಸಾಧನವಾಯಿತು. ಪ್ರೀತಿಯ ತಮ್ಮ ತೀರಿಹೋದನು. ನೆಚ್ಚಿದ ಬಂಧುಬಾಂಧವರು ಮೋಸಮಾಡಿದರು. ಪ್ರಣಯಭಂಗದಿಂದ ಎದೆ ಬೆಂದುಹೋಯಿತು. ಜನತೆ ಇವನ ಸಂಗೀತವನ್ನು ಮೆಚ್ಚಲಿಲ್ಲ. ಒಮ್ಮೆ ಏನೋ ಕೀರ್ತಿಯ--ಜನದ ಪ್ರಶಂಸೆಯ— ಶಿಖರವನ್ನೇರಿದನು. ಮರುಕ್ಷಣವೇ ಕೆಳಕ್ಕೆ ಉರುಳಿದನು. ೧೮೧೬ರ ಸುಮಾರಿಗೆ ಕಿವಿ ಪೂರ ಕಿವುಡಾದವು. ೧೮೧೭ರಲ್ಲಿ ಎದೆಶೂಲಿ ಆರಂಭವಾಯಿತು. ೧೮೧೭—೧೮ರಲ್ಲಿ ಕ್ಷಯದ ಭಾವನೆಯಾಯಿತು. ೧೮೨೦ರಲ್ಲಿ ಸಂಧಿವಾತದ ಶೂಲಿ ಅತಿಯಾಯಿತು. ೧೮೧೧ರಲ್ಲಿ ಕಾಮಾಲೆಯಾಯಿತು. ೧೮೨೫ರಲ್ಲಿ ಇನ್ನೂ ಏನೇನೋ ಆದವು. ಮುಂದೆ ಮೂರು ನಾಲ್ಕು ಸಲ ಅವನ ದೇಹ ಶಸ್ತ್ರಕ್ರಿಯೆಗೆ ಗುರಿಯಾಗಬೇಕಾಯಿತು. ೨೬–೩–೧೮೨೭ನೇ ದಿನ ದೇಹವಿಟ್ಟನು! ಇಂಥ ಈ ಅಲ್ಪ ಅವಧಿಯಲ್ಲಿ ಅನಂತ ಯಾತನೆಗಳಿಗೆ ತುತ್ತಾದನು! ಆದರೆ "ನನಗೆ ಯಾರೂ ಇಲ್ಲ! ಇಲ್ಲದಿರಲಿ!

ನನ್ನ ಹೃದಯುದಲ್ಲಿ ಭಗವಂತನೊಬ್ಬನಿದ್ದಾನೆ!" ಎಂದು ಎದೆಯುಬ್ಬಿಸಿದನು! "ಧರ್ಮ ಮತ್ತು ಕಲೆ ಆತ್ಮಹತ್ಯೆಯಿಂದ ನನ್ನನ್ನು ಉಳಿಸಿವೆ!" ಎಂದು ಸಾರಿದನು. "ಹೋಮಿಸಿರಿ! ಬಾಳಿನ ಕೀಳು ಕಾಮನೆಗಳನ್ನೆಲ್ಲ ಕಲೆಯು ಮತ್ತು ಭಗವಂತನ ಅಡಿಯಲ್ಲಿ ಹೋಮಿಸಿರಿ!" ಎಂಬ ಮಂತ್ರ ಘೋಷ ಮಾಡಿದನು. ದುಃಖವೇ ಇವನ ಬಾಳಿನ ಆದಿ! ದುಃಖವೇ ಇವನ ಬಾಳಿನ ಮಧ್ಯ! ದುಃಖವೇ ಇವನ ಬಾಳಿನ ಅಂತ! ಕಷ್ಟವೇ ಮೈವೆತ್ತು ನಿಂತಂತಾದ ಈ ಕಲಿಯು ಈ ಧೀರನ ಅಮೃತವಾಣಿಯಿದು: "ದೀನ ಮಾನವನಿಗಾಗಿ,ದುಃಖಿಯಾದ ಮಾನವನಿಗೆ ಧೈರ್ಯಕೊಡಲು, ಇಂದಿನ ಮುಂದಿನ ಮಾನವನ ಆನಂದಕ್ಕಾಗಿ ಸೇವೆಗಾಗಿ ನನ್ನ ಕಲೆ ಭಗವಂತ ನನಗೆ ಒಪ್ಪಿಸಿದ ಪವಿತ್ರ ಕರ್ತವ್ಯ!" ತನ್ನ ಭವ್ಯ ಆತ್ಮದ ವಾದ್ಯಕ್ಕೆ ಹೃದಯುದ ತಂತಿಗಳನ್ನು ಬಿಗಿದು, ಮೇಲೆ ಕಷ್ಟದ ಕಮಾನು ಕತ್ತರಿಸಿ ಎಳೆದು, ದಿವ್ಯಸಂಗೀತದ ಭಾಗೀರಥಿಯನ್ನು ಬೀಥೋವೆನ್ ಭೂತಲದ ಮೇಲೆ ಹರಿಸಿದನು! ಪಾಶ್ಚಾತ್ಯ ಸಂಗೀತಕಲೆಯು ಅರ್ವಾಚೀನ ಇತಿಹಾಸದಲ್ಲಿ ಅವನೊಬ್ಬ ಅಮರ ಕಲಾಯೋಗಿ. ಧೀರ ಕರ್ಮಯೋಗಿ. ಭಾವಿಕ ಭಕ್ತಿಯೋಗಿ. ಕಷ್ಟಪರಂಪರೆಯ ಕುಲುಮೆಯಲ್ಲಿ ಕುದಿಯುತ್ತಿರುವಾಗ, ರುಗ್ಣ ಶಯ್ಯೆಯಲ್ಲಿ ನರಳುತ್ತಿರುವಾಗ, ರೋಗಗಳಲ್ಲಿ " Ode to Joy in the Ninth Symphony " ಎಂಬ ಅಮರ ಆನಂದಗೀತವನ್ನು ಹಾಡಿದನು! ಮೃತ್ಯುಶಯ್ಯೆಯ ಮೇಲೆ ಒರಗಿದಾಗ "Joy through Suffering" ! ನೋವಿನಲ್ಲಿ ನಲಿವು! ಎಂದು ಉಸುರಿದನು!

ಬೀಥೋವೆನ್ ಹುಟ್ಟಿದ, ಬೆಳೆದ, ಬಾಳಿದ, ಬೆಳಗಿದ, ಹಾಡಿದ, ಬಾಡಿದ ಸ್ಥಳಗಳಿಗೆಲ್ಲ ರೊಲಾ ಭಕ್ತರಂತೆ ಯಾತ್ರಿಕರಂತೆ ಸಂಚರಿಸಿದರು. ಅವನ ಜೀವನವನ್ನು ಸಂಶೋಧಿಸಿದರು. ಅವನ ಹಾಡು ಹಾಡಿದರು. ಅವನ ಮೂರ್ತಿಯನ್ನು ನೆನೆದರು. ಆ ಸಂಗೀತಯೋಗಿಯ ದಿವ್ಯ ವ್ಯಕ್ತಿಚಿತ್ರವನ್ನು ರೊಲಾ ಉಜ್ವಲವಾಗಿ ರೂಪಿಸಿರುವರು.

ಆಂಜೆಲೊ ಕುಶಲ ಕಲಾಯೋಗಿಯಹುದು. ಆದರೆ ಧೀರ ವೀರ ವಿಭೂತಿಯಲ್ಲ. ಅವನ ಆತ್ಮ ಉನ್ನತವಾದುದಲ್ಲ. ಮಾನವಸಹಜ ದೌರ್ಬಲ್ಯದಿಂದ ಅವನು ಅಸುಖಿ, ಅಶಾಂತ. ಬಾಳಿನ ಬೇಸರ ಅವನಿಗೆ. ಆದರೆ ಆ ಅಸುಖವನ್ನು ಆ ಅಶಾಂತಿಯನ್ನು, ಆ ಬೇಸರವನ್ನು ಅವನು ಕಲಾಯೋಗದಿಂದ ಗೆದ್ದನು. ಪ್ರಪಂಚದಲ್ಲಿ ಆ ಮೂರ್ತಿಶಿಲ್ಪಿಯದು ಅಮರ ಕೀರ್ತಿ. ಅವನು ಹೆಸರಾದ ಚಿತ್ರಶಿಲ್ಪಿಯೂ ಸರಿ. ಅಂಥ ಕಲಾವಂತನ ವ್ಯಕ್ತಿಚಿತ್ರವನ್ನು ರೊಲಾ ತಮ್ಮ ಪುಸ್ತಕದಲ್ಲಿ ಮನಸೆಳೆಯುವಂತೆ ತೆಗೆದಿರುವರು.

Michael Angelo
ಮಾಯ್ಕೆಲ್
ಆಂಜೆಲೋ

ವಿಧಿ ತಂದ ವೇದನೆಗಳನ್ನು ಗೆದ್ದು ವಿಜಯಿಯಾದ ವೀರ ಕಲಾಯೋಗಿ ಬೀಥೊವೆನ್, ತನ್ನ ದೌರ್ಬಲ್ಯವನ್ನೆಲ್ಲ ಕಲಾಯೋಗದಲ್ಲಿ ಕಳೆದುಕೊಂಡ ಕಲಾವಂತ ಮಾಯಕೆಲ್ ಆಂಜೆಲೊ—ಅವರು ಕಲೆಯ ಮೇಘಮಂಡಲದಲ್ಲಿ ಗಾಳಿಗೋಪುರಗಳನ್ನು ಕಟ್ಟಿದ ವಿಶ್ವಕರ್ಮಗಳು. ಆದರೆ ಕಲೆ ಕೇವಲ ಕಲೆಗಾಗಿಯೇ ? ಬಾಳಿನ ಕೂಗಿಗೆ ಕಿವಿಗೊಡಬೇಡವೇ ? ಬಾಳಿನ ನಗ್ನ ಸತ್ಯದ, ಕಣ್ಣಾರೆ ಕಾಣಬರುವ ಕುರೂಪದ ತಿರುಳನ್ನು ಅರಿಯಬೇಡವೇ ? ಅದನ್ನು ಅರಿಯಲು ಹಂಬಲಿಸಿದ ಟಾಲ್ಸ್ಟಾಯ್ ಕಲೆಯನ್ನು ಬಿಸುಡಿದನು. ಬರಿಗಾಲಿನಿಂದ ಪಶ್ಚಾತ್ತಾಪದ ಹೆಜ್ಜೆಯನ್ನು ತುಳಿಯುತ್ತ ತಪಸ್ಸಿನ ಶಾಂತಿಯನ್ನು ಸಾಧಿಸಲು ಹೊರಟನು. ಕುಟುಂಬದ ಬಂಧನಗಳನ್ನು ಹರಿದೊಗೆದನು. ದೇಹವನ್ನು ಕೊರಗಿಸಿದನು. ಮನವೆಂಬ ಮರ್ಕಟವ ತಡೆದನು. ಸತ್ಯಾಗ್ರಹಿಯಾದನು. ತಪಸ್ವಿಯಾದನು. ಮಾನವನು ಹುಟ್ಟಿದುದೇಕೆ ? ಹೋಗುವುದೆಲ್ಲಿ ? ಮುಂದಿನ ಹಾದಿ ಯಾವುದು ? ಮಾನವನಿಗೆ ಈ ಯಾತನೆಯೇಕೆ ? ಅವನಿಗೆ ಅನಂತ ಶಾಂತಿಯೆಲ್ಲಿ ? ಇವೇ ಮುಂತಾದ ಚಿರಂತನ ಸಮಸ್ಯೆಗಳಿಗೆ ಉತ್ತರಗಳನ್ನು ಹುಡುಕಹತ್ತಿದನು.

Tolstoy
ಟಾಲ್ಸ್ಟಾಯ್

ರೊಲಾರನ್ನೂ ಇಂಥ ಸಮಸ್ಯೆ ಎದುರಿಸಿದ್ದವು. ಆಗ ಟಾಲ್ಸ್ಟಾಯನ ಜೀವನವನ್ನು ಅಭ್ಯಾಸಮಾಡಿ, ಚರಿತ್ರೆಯನ್ನು ಬರೆದರು. ಗುರುದಕ್ಷಿಣೆಯನ್ನು ತೀರಿಸಿದರು.

ಭಾರತದ ಕಡೆಗೆ

ಆದರೆ ಟಾಲ್ಸ್ಟಾಯನು ಆ ಸಮಸ್ಯೆಗಳನ್ನು ಬಿಡಿಸಿ ಶಾಂತಿಯನ್ನು ಸಾಧಿಸಲಿಲ್ಲ. ಸತ್ಯಂ ಶಿವಂ ಎಂದು ಕೂಗುತ್ತ ಕಲೆಯನ್ನು ಸೌಂದರ್ಯವನ್ನು ಕಾಲಕಸವೆಂದು ಕಿತ್ತೊಗೆದನು. ಬಾಳಿಗೆ ಬೇಸತ್ತನು. ಸನ್ಯಾಸಿಯಾದನು ಶೂನ್ಯವಾದಿಯಾದನು. ನಿಷ್ಕ್ರಿಯನಾದನು. ಬಾಳಿನ ಚೆಲುವನ್ನು ಕಾಣಲಿಲ್ಲ. ಬಾಳಿನ ತಿರುಳನ್ನು ಅರಿಯಲಿಲ್ಲ. ಬಾಳಿನ ಹೋರಾಟದಲ್ಲಿಯೂ ಶಾಂತಿಯನ್ನು ಸಾಧಿಸಿದವರಾರು ? ಬಾಳನ್ನೇ ಕಲೆಯನ್ನಾಗಿ ಮಾಡಿ ಆನಂದವನ್ನು ಸವಿದ ವೀರನಾರು ?

ಮೊದಲನೆಯ ಮಹಾಯುದ್ಧ ತಂದೊಡ್ಡಿದ ಸಮಸ್ಯೆಗಳಿಂದಲೂ ರೊಲಾ ಗಾಸಿಯಾಗಿದ್ದರು. ಆ ಸಮಸ್ಯೆಗಳಿಗೂ ಅವರು ಉತ್ತರ ಹುಡುಕುತ್ತಿದ್ದರು. ಪಡುವಣದ ಬಾಳಿನಲ್ಲಿ ದಾರಿಗಾಣದ ಅವರಿಗೆ ಮೂಡಣದಲ್ಲಿ ಬೆಳಕು ದಾರಿದೋರಿತು. ಶಾಪೆನ್‌ಹೂರ್, ಮಾಕ್ಸ್‌ಮುಲರ್ ಪಾಲ್‌ಡಾಯುಸನ್ ಮುಂತಾದ ಜರ್ಮನಿಯ ಮತ್ತು ಯುರೋಪದ ಜಿಜ್ಞಾಸುಗಳು ಮೂಡಣದ ಬೆಳಕಿನಲ್ಲಿ, ಭಾರತದ ತತ್ವದರ್ಶನಗಳಲ್ಲಿ ದಾರಿ ಕಂಡಂತೆ ರೊಲಾ ಸಹ ಕಂಡರು. "ಜೀನ್ ಕ್ರಿಸ್ಟಾಫಿ" ಎಂಬ ಕಾದಂಬರಿಯಲ್ಲಿ ಆಲಿವ್ಹಿಯರ್ ಎಂಬವನು (ಆ ಪಾತ್ರದಲ್ಲಿ ರೊಲಾ ತಮ್ಮ ಕೆಲ ಅಂಶಗಳನ್ನು ರೂಪಿಸಿರುವರು) ಕ್ರಿಸ್ಟಾಫಿಗೆ ಒಂದೆಡೆಯಲ್ಲಿ ಅನ್ನುತ್ತಾನೆ: "ಪಡುವಣಕ್ಕೆ ಬೆಂಕಿ ಹತ್ತಿದೆ! ಅದು ಉರಿದು ಹೋಗಹತ್ತಿದೆ! ....ಇಷ್ಟರಲ್ಲಿ ದೂರ ಆ ಮೂಡಣದಲ್ಲಿ ಬೇರೆ ಜ್ಯೋತಿ ಬೆಳಗಲಿವೆ !" ಮತ್ತೊಂದೆಡೆಯಲ್ಲಿ ಇಬ್ಬರೂ ಮಾತನಾಡುತ್ತಿರುವಾಗ ಹಲಗೆಯ ಮೇಲಿನ ಒಂದು ಪುಸ್ತಕ ತೆಗೆದು ಆಲಿವ್ಹಿಯರ್ ಓದುತ್ತಾನೆ:"ಎದ್ದೇಳು. ಧೀರನಾಗು. ಸುಖದುಃಖ ಸರಿಸಮವೆನ್ನು. ಲಾಭಹಾನಿ, ಸೋಲು

ಗೆಲವು ಎಲ್ಲವೂ ಸಮವೆನ್ನು, ಮತ್ತು ನಿನ್ನ ಬಲವನ್ನೆಲ್ಲ ಕೆರಳಿಸಿ ಕಾಳಗಕ್ಕೆ ಅಣಿಯಾಗು. ಹೋರಾಡು!......."ಕ್ರಿಸ್ತಾಫಿ ಹಿಗ್ಗಿ ಮೈಮರೆತು ಪುಸ್ತಕ ಕಸಿದುಕೊಂಡು ಓದಹತ್ತಿದನು.“........ಇಲ್ಲಿ ನಾನು ಮಾಡಲೇಬೇಕೆಂಬುದು ಆವುದೂ ಇಲ್ಲ. ನನ್ನದಾವೂದೂ ಇಲ್ಲ. ಆದರೂ ನಾನು ಕರ್ಮದಿಂದ ನಿವೃತ್ತನಾಗಿಲ್ಲ. ಹಣಿಯದೆ ದಣಿಯದೆ ನಾನು ಕರ್ಮ ಮಾಡದಿದ್ದರೆ ಜನವೆಲ್ಲ ನನ್ನ ಬೆನ್ನು ಹತ್ತುವುದು. ಒಂದು ಕ್ಷಣಮಾತ್ರವೂ ನಾನು ನಿಷ್ಕರ್ಮಿಯಾದರೆ ಪ್ರಪಂಚವನ್ನೆಲ್ಲ ಪ್ರಲಯದ ಅನವಸ್ಥೆಯಲ್ಲಿ ನೂಕಿ ನಾನು ಬಾಳನ್ನು ಹಾಳುಗೆಡವಿದಂತಾದೀತು!........" ಆ ಪುಸ್ತಕ ಗೀತೆಯ ಫ್ರೆಂಚ್ ಅನುವಾದವೆಂದು ಬೇರೆ ಹೇಳಬೇಕಾಗಿಲ್ಲ.

ಮಹಾಯುದ್ಧಕ್ಕಿಂತ ಮುಂಚೆಯೇ ಆ ಕಾದಂಬರಿ ಪ್ರಸಿದ್ಧವಾಗಿದ್ದಿತು. ಮಹಾಯುದ್ಧದ ಕಾಲದಲ್ಲಿ ಸ್ವಿತ್ಝರ್ಲಂಡ್‌ದಲ್ಲಿದ್ದಾಗ ರೊಲಾ ಪೌರ್ವಾತ್ಯ ಸಾಹಿತ್ಯವನ್ನು ಬಹಳವಾಗಿ ಓದಿಕೊಂಡರು. ಭಾರತೀಯ ತತ್ವಶಾಸ್ತ್ರ, ಕಲೆ, ಸಾಹಿತ್ಯ, ಕಾವ್ಯ, ಸಂಸ್ಕೃತಿ—ಎಲ್ಲ ವಿಷಯವಾಗಿ ತಿಳಿದುಕೊಂಡರು. ಡಾಕ್ಟರ್ ಆನಂದಕುಮಾರ ಸ್ವಾಮಿ, ಕವೀಂದ್ರ ರವೀಂದ್ರ ಮುಂತಾದವರ ಪುಸ್ತಕಗಳನ್ನು ಓದಿಕೊಂಡರು. ರವೀಂದ್ರರ "The Message of India to Japan" (ಜಪಾನಕ್ಕೆ ಭಾರತದ ಸಂದೇಶ) ಎಂಬ ಉಪನ್ಯಾಸವನ್ನು ಫ್ರೆಂಚ್ ಭಾಷೆಯಲ್ಲಿ ಅನುವಾದಿಸಿ ೧೯೧೬ರಲ್ಲಿ ಪ್ರಸಿದ್ಧಿಸಿದರು. ೧೯೧೯ರಲ್ಲಿ ರವೀಂದ್ರರಿಗೆ ಕಾಗದ ಬರೆದು "Declaration of the Independence of Mind" ಇದಕ್ಕೆ ಅಂಕಿತ ಹಾಕಲು ಬಿನ್ನವಿಸಿದರು. ರವೀಂದ್ರರು ದೇಹವಿಡುವವರೆಗೂ ಅವರೀರ್ವರ ಪತ್ರವ್ಯವಹಾರ ನಡೆದಿದ್ದಿತು. ೧೯೧೮ರಲ್ಲಿ ಇಟಲಿಯ "ಆವ್ಹಾಂಟ್" ಎಂಬ ವೃತ್ತಪತ್ರದಲ್ಲಿ ರೊಲಾ ಬರೆದರು: "ರಾಷ್ಟ್ರಗಳ ಈ ಕದನದೊಳಗಿಂದ ಎರಡು ಮಹಾ ಪ್ರಭಾವಶಾಲಿಯಾದ ದೇಶ ತಲೆಯೆತ್ತುವವು, ಅಮೇರಿಕಾ ಮತ್ತು ಏಶಿಯಾ. ಯುರೋಪ

ಖಂಡವು ಯಾವುದಕ್ಕಾದರೂ ಶರಣು ಹೋಗುವುದು........ನಾನೇನು ಭವಿಷ್ಯವಾದಿಯಲ್ಲ. ಯಾವ ಪ್ರವಾಹ ಯುರೋಪಖಂಡದ ಮೇಲೆ ಹರಿದೀತೆಂದು ಯಾರೂ ಹೇಳಲಾರರು. ಆದರೆ ಏಶಿಯದಿಂದಲೇ ಮಾನವಕುಲದ ಉದ್ಧಾರ, ಮುಂದಿನ ಯುಗದ ಐಕ್ಯದ ಆಶೆ ಎಂದು ಮಾತ್ರ ನಾನು ನಂಬಿದ್ದೇನೆ." ೧೧-೬-೧೯೨೩ನೇ ದಿನ ರವೀಂದ್ರರಿಗೆ ಬರೆದ ಕಾಗದದಲ್ಲಿ ರೊಲಾ ಅನ್ನುತ್ತಾರೆ: "ಪ್ರಿಯ ಮಿತ್ರರೆ, ಹಿಂದುಸ್ತಾನಕ್ಕೆ ಹೋಗಿ ಅಲ್ಲಿ ನಿಮ್ಮನ್ನು ಕಾಣಬೇಕೆಂಬ ಅದೆಂತಹ ಹಂಬಲ ನನ್ನದು! ನನ್ನ ಮನಸೆಲ್ಲ ಅತ್ತ ಹರಿಯುತ್ತಿದೆ.... ಶಾಂತಿನಿಕೇತನದಲ್ಲಿ ಕೆಲ ಕಾಲ ಇದ್ದು ಬರಬೇಕೆಂದು ಜೀವ ಹವಣಿಸುತ್ತಿದೆ............ ನಿಮ್ಮಿಂದ ನಾನು ಅದೆಷ್ಟು ಕಲಿಯಬೇಕಾಗಿದೆ!— ಹಿಂದುಸ್ತಾನ ನನಗೆ ಪರದೇಶವಲ್ಲ. ಅದು ಎಲ್ಲ ದೇಶಗಳಲ್ಲಿ ಅತ್ಯಂತ ಶ್ರೇಷ್ಠ ದೇಶ. ಆ ಪುರಾತನ ಪುಣ್ಯಭೂಮಿಯಿಂದ ನಾನು ಹಿಂದೆಂದೋ ಬಂದೆ. ಭಾರತಮಾತೆ ನನ್ನೊಳಗೆ ಆಳದಲ್ಲಿ ಇರುವಳು. ಒಳಗಣ್ಣಿಗೆ ಕಾಣುತ್ತಾಳೆ!"

"Mahatma Gandhi" ಮಹಾತ್ಮಾ ಗಾಂಧಿ

ಹೀಗೆಲ್ಲ ನಿಧಿಧ್ಯಾಸ ಹತ್ತಿದಾಗ ಭಾರತದ ಜ್ಯೋತಿಯೊಂದನ್ನು ಕಂಡರು. ೧೯೨೦ರ ಆಗಸ್ಟ್ ತಿಂಗಳಲ್ಲಿ ಸ್ವಿತ್ಝರ್ಲಂಡದ ಸ್ಕ್ಯೋನೆಕ್ ಎಂಬ ಹಳ್ಳಿಯಲ್ಲಿ ಕೂಡಿದಾಗ ಅವರ ಮಿತ್ರ ಶ್ರೀದಿಲೀಪಕುಮಾರ ರಾಯ್ ಅವರು ಮಹಾತ್ಮಾ ಗಾಂಧಿಯವರ ವಿಷಯವಾಗಿ ಹೇಳಿದರು. ಅದೇ ಮೊದಲನೆಯ ಸಲ ಗಾಂಧಿಯವರ ವಿಷಯ ಅವರ ಎದೆ ತಟ್ಟಿದುದು. ಮುಂದೆ ಪ್ಯಾರಿಸ್‌ದಲ್ಲಿ ರವೀಂದ್ರರಿಂದ (೧೯೨೧ರಲ್ಲಿ) ಕಾಲಿದಾಸನಾಗರಿಂದ (೧೯೨೨ರಲ್ಲಿ) ಮತ್ತು ಆ ವಿಷಯವನ್ನು ಕೇಳಿ ತಿಳಿದುಕೊಂಡರು. ಮದ್ರಾಸದ ಗಣೇಶನ್ ಕಂಪನಿಯವರು ಪ್ರಸಿದ್ಧಿಸಿದ ಮಹಾತ್ಮಾ ಗಾಂಧಿಯವರ ಲೇಖನ ಮತ್ತು ಭಾಷಣಗಳ ಪುಸ್ತಕವನ್ನು ನೋಡಿಕೊಂಡರು. ಹೀಗೆ ಮಹಾತ್ಮಾಜಿಯವರ ಜೀವನ ಮತ್ತು

ತತ್ವಗಳ ಅಭ್ಯಾಸ ಮಾಡಿ ಫೆಬ್ರುವರಿ ೧೯೨೩ರಲ್ಲಿ "ಯುರೋಪ" ಎಂಬ ಪ್ರಖ್ಯಾತ ವಿಮರ್ಶಾತ್ಮಕ ನಿಯತಕಾಲಿಕ ಪತ್ರಿಕೆಯಲ್ಲಿ ಗಾಂಧೀಜಿಯವರ ವಿಷಯವಾಗಿ ಒಂದು ದೊಡ್ಡ ಲೇಖ ಬರೆದರು. ಅದನ್ನು ಮುಂದೆ ಅದೇ ವರ್ಷ ಪುಸ್ತಕರೂಪದಲ್ಲಿ ಪ್ರಕಟಿಸಿದರು. ಅದರಲ್ಲಿ ತಪ್ಪುತಡೆ ಏನಾದರೂ ಇದ್ದರೆ ತಿದ್ದಬೇಕೆಂದು ಬಿನ್ನವಿಸಿ ಮಹಾತ್ಮಾಜಿಯವರಿಗೆ ಆ ಪುಸ್ತಕ ಕಳಿಸಿದರು. ೧೯೨೪ರ ಮಾರ್ಚ ೨೨ನೇ ದಿನಾಂಕದ ಪತ್ರದಲ್ಲಿ ಗಾಂಧೀಜಿ ಅವರಿಗೆ ಬರೆದರು: "ಅಲ್ಲೊಂದು ಇಲ್ಲೊಂದು ಸಣ್ಣ ಪುಟ್ಟ ತಪ್ಪು ಇರುವವಾದರೂ ಮಹತ್ವವೇನು? ಇಷ್ಟು ಸ್ವಲ್ಪ ತಪ್ಪು ಇವೆ ಎನ್ನುವುದೇ ಬಲು ಸೋಜಿಗದ ಸಂಗತಿ ಸರಿ. ದೂರ ದೂರ ಬೇರೆ ವಾತಾವರಣದಲ್ಲಿದ್ದೂ ನೀವು ನನ್ನ ವಿಚಾರಗಳನ್ನು ಸರಿಯಾಗಿ ಮಂಡಿಸುವುದರಲ್ಲಿ ಯಶಸ್ವಿಯಾಗಿರುವಿರಿ. ದೇಶವಿದೇಶಗಳಲ್ಲಿ ಅರಳುವ ಮಾನವಸ್ವಭಾವದಲ್ಲೆಲ್ಲ ಒಂದು ಮೂಲಭೂತ ಏಕತ್ವವಿದೆಯೆನ್ನುವುದು ಇದರಿಂದ ಗೊತ್ತಾಗುತ್ತದೆ."

ಇದಕ್ಕೂ ಆ ಪುಸ್ತಕದ ವಿಷಯವಾಗಿ ಇಲ್ಲಿ ಹೆಚ್ಚೇನು ಹೇಳುವುದು? ಮಹಾತ್ಮಾಜಿಯವರ ವಿಷಯದಲ್ಲಿ ರೊಲಾ ಆಡಿದ ಒಂದೆರಡು ಮಾತು ಮಾತ್ರ ಇಲ್ಲಿ ಹೇಳುವುದು ಸರಿಯಾದುದು. "ನಮ್ಮ ಯುರೋಪದ ಕ್ರಾಂತಿಕಾರರಂತೆ ಕೇವಲ ಕಾಯದೆ ಮಾಡಿ ಫರ್ಮಾನ್ ಹೊರಡಿಸುವವರಲ್ಲ ಗಾಂಧಿ. ಅವರು ಹೊಸಯುಗದ ಸೃಷ್ಟಿಕರ್ತರು!" "ರಾಜಕೀಯ ರಂಗದಲ್ಲಿ ಸತ್ಯಾಗ್ರಹವೆಂಬ ಅಸ್ತ್ರವನ್ನೂ ತಂತ್ರವನ್ನೂ ಪ್ರಚುರಗೊಳಿಸಿ ಗಾಂಧಿ ಮಾನವ ಕುಲದ ಅನಂತ ಕಲ್ಯಾಣ ಮಾಡಿದರು." ಶ್ರೀ. ದಿಲೀಪಕುಮಾರರ ಕೂಡ ಮಾತನಾಡುವಾಗ ರೊಲಾ ಒಮ್ಮೆ ಅಂದರು: "ಮಹಾತ್ಮಾ ಗಾಂಧಿ ನಿಜವಾಗಿಯೂ ಅದ್ಭುತ ಅದ್ಭುತ ವ್ಯಕ್ತಿ! ಮಿಕ್ಕ ಎಲ್ಲ ಕಿಡಿಗಳ ನಡುವೆ ಅವರೊಂದು ಜ್ಯೋತಿರ್ಮಂಡಲ! ಅಲ್ಲೋಲಕಲ್ಲೋಲವಾದ ಸಮುದ್ರದ ಮೇಲೆ ಮಾರ್ಗದರ್ಶಕ ದೀಪಸ್ತಂಭ! ಅವರ ಶಾಂತಿ, ಅಹಿಂಸೆ, ಶುದ್ಧ—ನಿಷ್ಕಲಂಕ

ಜೀವನ, ನಿರ್ಮಲ ಅಂತಃಕರಣ— ಏನೆಂದು ಹೇಳಲಿ! ಆ ಎಲುವಿನ ಹಂದರದಲ್ಲಿ ಅದೆಂಥ ಭವ್ಯ ಆತ್ಮ! ನಮ್ಮ ಸಂಕುಚಿತ ಸ್ವಾರ್ಥದ ಅಧೀರತೆಯ ಈ ಯುಗದಲ್ಲಿ ಅವರಲ್ಲಿ ಬೆಳಗಿದ ಶ್ರದ್ಧೆಯ ಜ್ಯೋತಿ!— ನಿಜವಾಗಿಯೂ ಇದು ಮಾನವ ಪ್ರಾಣಿಗೆ ಸಾಧ್ಯವೇ?"

ಶ್ರದ್ಧೆ ಮತ್ತು ಕರ್ಮಗಳ ಸಮನ್ವಯವನ್ನು ಗಾಂಧಿಯವರಲ್ಲಿ ಕಂಡ ರೊಲಾ ಶ್ರೀರಾಮಕೃಷ್ಣ ವಿವೇಕಾನಂದರಲ್ಲಿ ಆಧ್ಯಾತ್ಮಿಕ ಅನುಭಾವ ಮತ್ತು ಲೌಕಿಕ ಕರ್ಮಗಳ ಸಮನ್ವಯವನ್ನು ಕಂಡರು. ರೊಲಾರ ಆತ್ಮದ ಉತ್ಕ್ರಾಂತಿಯ ಹಾದಿಯಲ್ಲಿ ಈ ಹೆಜ್ಜೆ ಈ ಮಟ್ಟದ ಮುಂದೆ ಬರುವುದು ಸ್ವಾಭಾವಿಕವೇ ಆಗಿದೆ. ಇದೇ ಕೊನೆಯದೆಂದು, ಇಲ್ಲಿ ಆ ಉತ್ಕ್ರಾಂತಿಯ ಸಿದ್ಧಿಯೆಂದು ಅನ್ನಬಹುದು. ಬೀಥೊವೆನ್ ಬದರೀನಾಥವಾದರೆ, ಮಾಯ್‌ಕೆಲ್ ಆಂಜೆಲೋ ಅಮರನಾಥ, ಟಾಲ್‌ಸ್ಟಾಯ್ ಗಟಿ ಮುಂತಾದವರು ಕೇದಾರನಾಥ, ಗಾಂಧಿ ಕಾಂಚನ ಗಂಗಾ, ಆದರೆ ಶ್ರೀರಾಮಕೃಷ್ಣ ವಿವೇಕಾನಂದರು ಗೌರಿಶಂಕರ!— ಹೀಗೆ ರೊಲಾರ ಆತ್ಮ ತನ್ನ ಉತ್ಕ್ರಾಂತಿಯ ಅತ್ಯುಚ್ಚ ಶಿಖರವನ್ನು ತಲ್ಪಿತೆಂದು ಅನ್ನಬಹುದು. ತಮ್ಮ ಗೆಳೆಯರೊಬ್ಬರಿಗೆ ೧೯೩೬ರಲ್ಲಿ ಬರೆದ ಪತ್ರದಲ್ಲಿ ರೊಲಾ ಅನ್ನುತ್ತಾರೆ: "ಹಿಂದಿನ ಇಂದಿನ ಮುಂದಿನ ಯುಗ ಯುಗಕ್ಕೂ ಸರ್ವಶ್ರೇಷ್ಠ ಅನುಭಾವಿಗಳಾದ ಭಗವದ್ಭಕ್ತ ಶ್ರೀರಾಮಕೃಷ್ಣರು (ನನ್ನ ಅಚ್ಚುಮೆಚ್ಚಿನ ಸಂತಶಿರೋಮಣಿ) ಧೈರ್ಯವಾಗಿ ಸಾರಿದರು: 'ಧರ್ಮ ಹಸಿದ ಹೊಟ್ಟೆಗಾಗಿ ಅಲ್ಲ. ಜ್ಞಾನವೂ ಅಲ್ಲ' ಮತ್ತು ಅವರ ತೇಜಸ್ವಿಯಾದ ಶಿಷ್ಯ ಶ್ರೀ ವಿವೇಕಾನಂದರು ('ದೀನರಲ್ಲಿಯ ನನ್ನ ದೇವ' ಎಂಬುದು ಅವರ ಧ್ವಜದ ಮೇಲಿನ ಮಂತ್ರ!) ಘೋಷಿಸಿರುವರು: 'ನನ್ನ ದೇಶದಲ್ಲಿ ಒಂದು ನಾಯಿ ಸಹ ಹಸಿದ ಹೊಟ್ಟೆಯಿಂದ ಮರುಗುತ್ತಿರುವಾಗ ಅದರ ಹಸಿವೆ ಹಿಂಗಿಸುವುದೇ ನನ್ನ ಧರ್ಮ!'

"ಶ್ರೀರಾಮಕೃಷ್ಣ-ವಿವೇಕಾನಂದ"

ಅದೇ ನನ್ನದಾದರೂ ಧರ್ಮ! ”

“ಆಧುನಿಕ ಭಾರತದಲ್ಲಿ ಅನುಭಾವ-ಕರ್ಮಯೋಗದ ಅಭ್ಯಾಸ” ಎಂದು ಹೆಸರಿಟ್ಟು, “Prophets of New India” ( ನವ ಭಾರತದ ಧರ್ಮಜ್ಯೋತಿ ) ಎಂದು ಶ್ರೀರಾಮಕೃಷ್ಣರ ಜೀವನವನ್ನು ಮೊದಲನೆಯ ಭಾಗದಲ್ಲಿ ಮತ್ತು ಶ್ರೀ ವಿವೇಕಾನಂದರ ಜೀವನವನ್ನು ಎರಡನೆಯ ಭಾಗದಲ್ಲಿ ರೋಲಾ ಚಿತ್ರಿಸಿರುವರು. ದೂರ ದೇಶದಲ್ಲಿ ಭಿನ್ನ ಧರ್ಮಸಂಸ್ಕೃತಿದರ್ಶನಗಳ ವಾತಾವರಣದಲ್ಲಿ ಬೆಳೆದು, ಭಾರತಕ್ಕೆ ಬರದೆ, ಈ ಎರಡೂ ವಿಭೂತಿಗಳನ್ನು ಕಣ್ಣಾರೆ ಕಾಣದೆಯೂ ಕೇವಲ ಓದಿ, ಕೇಳಿ, ಮನನಿಸಿ, ಧ್ಯಾನಿಸಿ ರೋಲಾ ತೆಗೆದ ಶಬ್ದ ಚಿತ್ರಗಳಲ್ಲಿ ಶ್ರೀರಾಮಕೃಷ್ಣವಿವೇಕಾನಂದರನ್ನು ಜೀವಂತವಾಗಿ ಕಂಡಂತೆ ಆಗುತ್ತದೆ. ಭವ್ಯ ಭಾರತದ ಅಧ್ಯಾತ್ಮಯೋಗದ ಭಕ್ತಿಯ ಭಾಗೀರಥಿ, ಜ್ಞಾನಯೋಗದ ಜಮುನೆ, ಕರ್ಮಯೋಗದ ಸರಸ್ವತಿ–ಈ ತ್ರಿವೇಣೀ ಸಂಗಮವನ್ನು ರೋಲಾ ಬಹಳ ಮನಮುಟ್ಟುವಂತೆ ಬಣ್ಣಿಸಿರುವರು. ಈ ಚರಿತ್ರೆಗಳಲ್ಲಿ ಇತಿಹಾಸ, ವ್ಯಕ್ತಿಚಿತ್ರ, ಆತ್ಮವಿಕಾಸ-ಎಲ್ಲವನ್ನೂ ಕಲೆಯ ಕೌಶಲ್ಯದಿಂದ ಸುಂದರವಾಗಿ, ಸಜೀವವಾಗಿ, ಸುಸಂಗತವಾಗಿ ವಿವರಿಸಿದುದನ್ನು ಕಾಣಬಹುದು.

ಜರ್ಮನ್ ಕವಿ ಗಟೆ, ಜರ್ಮನ್ ಸಂಗೀತಗಾರರು ಹ್ಯಾಂಡೆಲ್ ಮತ್ತು ಬ್ರಾಹ್ಮ್ ಎಂಬವರ ಚರಿತ್ರೆಗಳನ್ನೂ ರೋಲಾ ಬರೆದಿರುವರು. ಯುರೋಪದಲ್ಲಿ ಬೆಳೆದು ಬಂದ ಸಂಗೀತದ ಮತ್ತು ಅದರ ಇತಿಹಾಸದ ವಿಷಯದಲ್ಲಿ ಒಂದು ಉದ್ಗ್ರಂಥವನ್ನೂ ಮತ್ತೆ ಹಲವು ಪುಸ್ತಕಗಳನ್ನೂ ಬರೆದಿರುವರು.

ಇನ್ನು ಅವರು ಬರೆದ ಕಾದಂಬರಿಗಳಲ್ಲಿ ಮುಖ್ಯವಾದವುಗಳ ವಿಷಯವಾಗಿ ನಾಲ್ಕು ಮಾತು. ಈ ಕಾದಂಬರಿಯ ಕನಸು ರೋಲಾ

“Jean-Christophe”
“ಜೀನ್ ಕ್ರಿಸ್ಟಾಫ಼”

ಮೊದಲು ಕಂಡುದು ಇಟಲಿಯಲ್ಲಿ. ಮಾಲವಿದಾಳ ಕೂಡ ಬಾಳು, ಕಲೆ, ಸಂಗೀತ ಮುಂತಾದ

ವುಗಳ ವಿಷಯುವಾಗಿ ಮಾತನಾಡುವಾಗ, ರೋಮುದಲ್ಲಿ ಅಲೆದಾಡುವಾಗ, ತಮ್ಮಷ್ಟಕ್ಕೆ ತಾವೇ ಧ್ಯಾನ ಮಾಡುತ್ತಿರುವಾಗ ಕಾದಂಬರಿಯು ಕಲ್ಪನೆ ರೂಪಗೊಂಡಿತು. ೧೮೯೫ರ ಸುಮಾರಿಗೆ ಕಾದಂಬರಿಯು ರೂಪರೇಷೆ ಯನ್ನೂ ಹಾಕಲಾಯಿತು. ಅದು ಮುಂದೆ ಬರೆದು ಪ್ರಕಾಶಿತವಾದುದು ೧೯೦೨ರ ಫೆಬ್ರುವರಿಯಿಂದ ೧೯೧೨ರ ಅಕ್ಟೋಬರ್ ವರೆಗೆ. ಸ್ವಿಟ್ಜರ್ಲಂಡದ ಯಾವುದೋ ಹಳ್ಳಿಯಲ್ಲಿ ಬರೆಯಲು ಆರಂಭ. ಝುರೀಚ್ ಎಂಬಲ್ಲಿ ಝುಗ್ ಎಂಬ ಸರೋವರದ ತೀರದ ಮೇಲೆ, ಪ್ಯಾರಿಸದಲ್ಲಿ, ಇಟಲಿಯಲ್ಲಿ, ಇಂಗ್ಲಂಡದ ಆಕ್ಸ್‌ಫರ್ಡದಲ್ಲಿ ಬರೆಬರೆಯುತ್ತ ಜರ್ಮನಿಯ ಬ್ಯಾವ್ಹೆನೋ ಎಂಬಲ್ಲಿ ಮುಗಿಸಿದರು. ಹತ್ತು ವರ್ಷ ರೂಪಗೊಳ್ಳುತ್ತ, ಹತ್ತು ವರ್ಷ ಪ್ರಕಟವಾಗುತ್ತ ಹೋದ ಈ ಕಾದಂಬರಿಯಲ್ಲಿ ಸುಮಾರು ಎರಡು ಸಾವಿರ ಪುಟಗಳಿವೆ. ಪ್ರಪಂಚದಲ್ಲಿಯೇ ಅತಿ ದೊಡ್ಡ ಕಾದಂಬರಿ. ಅತ್ಯಂತ ಶ್ರೇಷ್ಠ ಕಾದಂಬರಿಗಳಲ್ಲಿಯೂ ಒಂದು. ಇದಕ್ಕಾಗಿಯೇ ರೊಲಾರಿಗೆ ಒಂದೂವರೆ ಲಕ್ಷ ರೂಪಾಯಿಗಳ ನೋಬೆಲ್ ಪಾರಿತೋ ಷಿಕ ೧೯೧೫ರಲ್ಲಿ ಸಿಕ್ಕಿತು. ಸಾಹಿತ್ಯದ ಇತಿಹಾಸದಲ್ಲಿ ರೊಲಾರಿಗೆ ಅಮರ ಸ್ಥಾನ ದೊರೆಯಿತು.

ಈ ಕಾದಂಬರಿಯಲ್ಲಿ ಏನಿದೆ? ಏನಿದೆ ಏನಿಲ್ಲ ಇದರಲ್ಲಿ! ಚರಿ ತ್ರೆಯಿದೆ. ತತ್ವಜ್ಞಾನವಿದೆ. ನೀತಿಯಿದೆ. ಧರ್ಮವಿದೆ. ಜನಜೀವನವಿದೆ. ಕಲೆಯಿದೆ. ಲಘುಗೀತೆಯಿದೆ. ಮಹಾಕಾವ್ಯವಿದೆ. ಸರಸ ವರ್ಣನೆ ಇವೆ. ಸುಂದರ ಕಥೆಯಿದೆ. ವಸ್ತುವಿನ್ಯಾಸ ಪೋಷಣೆ ಮುಕ್ತಾಯ ಮನ ಮುಟ್ಟುವಂತಿವೆ. ಪಾತ್ರಪೋಷಣೆ ಮನ ಒಪ್ಪುವಂತಿದೆ. ಕಾಮವಿದೆ. ಕಾಮದ ಕೆಸರು ಕಳೆದ ಪ್ರೇಮವಿದೆ. ಒಬ್ಬ ಕಲೆಗಾರನ, ಒಬ್ಬ ಸಂಗೀ ತಗಾರನ ಬಾಳನ್ನು ಚಿತ್ರಿಸುತ್ತ, ಒಂದು ಯುಗದ ಬಾಳನ್ನೇ ರೊಲಾ ಚಿತ್ರಿಸಿರುವರು. ಸಮಾಜಜೀವನದ ಅನೇಕ ಮುಖಗಳನ್ನು ಇಲ್ಲಿ ಕಾಣ ಬಹುದು. ಇಲ್ಲಿ ಸಾಹಿತ್ಯವಿದೆ. ವಿಮರ್ಶೆಯಿದೆ. ಬಾಳಿನ ಬಾಹ್ಯ ರೂಪ ವಿದೆ. ಮಾನವನ ಆಂತರ ವಿಕಾಸವಿದೆ. ಆದರ್ಶವಿದೆ. ಆಶಾವಾದವಿದೆ

ಹವಣಿಕೆಯಿದೆ. ಹಂಬಲವಿದೆ. ಆಶೆಆಕಾಂಕ್ಷೆಗಳಿವೆ. ನೋವುಕಾವುಗಳಿವೆ. ಸೋಲುಗೆಲುವುಗಳಿವೆ. ಕತ್ತಲೆಬೆಳಕುಗಳಿವೆ. ಸಾಂತದಿಂದ ಅನಂತದ ಅಂಚಿನ ವರೆಗೆ ಸಾಗಿದ ಹಿಗ್ಗಿನ ಹೊಳೆಯಿದು. ನೆಲಮುಗಿಲನ್ನಪ್ಪಿ ಬೆಳಗಿದ ಬೆಳಕಿದು. ಇಡಿಯಾಗಿ ಬಿಡಿಯಾಗಿ ಎಷ್ಟೆಷ್ಟು ಬಣ್ಣಿಸಿದರೂ ಸಾಲದುದನ್ನು ಈ ಸಣ್ಣ ಬರಹದಲ್ಲಿ ಏನೆಂದು ಬಣ್ಣಿಸಬಹುದು ! ಇಂದುರಿಂದುರಿವ ಶ್ರೀಮಾನ್, ಸಾಗರಃಸಾಗರೋಪಮಃ ! ಚಂದಿರನಂತೆ ಸುಂದರನಾರು ? ಚಂದಿರನೇ ! ಸಮುದ್ರದಂತೆ ಗಂಭೀರನಾರು ? ಸಮುದ್ರವೇ ! ಜೀನ್ ಕ್ರಿಸ್ಟಾಫಿಯಂಥ ಕಾದಂಬರಿ ಯಾವುದು ? ಜೀನ್ ಕ್ರಿಸ್ಟಾಫಿಯೇ ! ಒಟ್ಟಿನಲ್ಲಿ ಒಂದೇ ಮಾತಿನಲ್ಲಿ ಹೇಳುವುದಾದರೆ, ಹುಟ್ಟಿದ ಮೇಲೆ ಒಮ್ಮೆಯಾದರೂ ಓದಲಾರದೆ ಸಾಯಬಾರದು ಎನ್ನುವಂಥದು ಈ ಕಾದಂಬರಿ !

೧೦ ಸಂಪುಟಗಳ ಜೀನ್ ಕ್ರಿಸ್ಟಾಫಿಯನ್ನು ೧೦ ವರ್ಷಗಳಲ್ಲಿ ಮುಗಿಸಿ ಕೈ, ಕಾಲು, ಮನ, ಮಸ್ತಕ ಎಲ್ಲವನ್ನೂ ಸಡಿಲಿಸಬೇಕೆಂದು ರೊಲಾ ತಮ್ಮ ಹುಟ್ಟಿದೂರಿಗೆ ಹೋಗಿ ಕೆಲ ದಿನ ಕಳೆದರು. ಇರುಇರುತ್ತಲೆ ರೊಲಾ ಮತ್ತೊಬ್ಬ ಕಲೆಗಾರನ ಕನಸು ಕಂಡರು. ೧೯೧೩ರ ಬೇಸಗೆಯ ೩-೪ ತಿಂಗಳುಗಳಲ್ಲಿ ಆ ಕಲೆಗಾರನನ್ನು ಕಾದಂಬರಿಯಲ್ಲಿ ಚಿತ್ರಿಸಿಯೇ ಬಿಟ್ಟರು. ಕಥಾನಾಯಕ ಬ್ರ್ಯೂನನ್ ಕಟ್ಟಿಗೆಯಲ್ಲಿ ಕೆತ್ತನೆಯ ಕೆಲಸ ಮಾಡುವ ಒಬ್ಬ ಕುಶಲ ಕಲೆಗಾರ. ಎಲ್ಲರಲ್ಲಿಯೂ ನಗುತ್ತ ಕಲೆಯುತ್ತ, ಆಡುತ್ತ ನೋಡುತ್ತ, ಕುಡಿಯುತ್ತ ಕುಣಿಯುತ್ತ ಹಿಗ್ಗಿನ ಬಾಳು ಸಾಗಿಸಿದ್ದನು. ಕಾಲನ ಕುಲುಮೆಯಲ್ಲಿ ಕುದಿಯುವ ಕಾಲವೂ ಬಂದಿತು ! ಮನೆ ಸುಟ್ಟುಹೋಯಿತು ! ಮಡದಿ ಮಡಿದು ಹೋದಳು ! ! ಮೂವತ್ತು ವರ್ಷಗಳ ಅವನ ಕಲಾಸೃಷ್ಟಿ ಬೆಂಕಿಯಲ್ಲಿ ಬೂದಿಯಾಯಿತು ! ಕಾಳಗದ ಹಾವಳಿ ! ಅಸೂಯೆಯ ಅನಾಹುತ ! ಅವನ ಕಲೆಗೆ ಬೆಲೆಯಿಲ್ಲ ! ಬೇನೆಯ ಬಳಲಿಕೆಯಿಂದ

Colas Breugnon
ಕೊಲ್ಯಾಸ್ ಬ್ರ್ಯೂನನ್

ಕೈ ನಿಂತು ಹೋಯಿತು. ಆದರೆ ಅವನು ಧೀರ. ವೀರ. "ದುಃಖ ದುಗುಡವೆಲ್ಲ ದೂರೇ ದೂರ. ನನ್ನದೇ ಆದ ನಗೆಯನ್ನು ಕಸಿದು ಒಯ್ಯಲಾರವು!" ಎಂದನು. ಮನೆ ಸುಟ್ಟಾಗ, "ನನ್ನದು ಅಳಿದಾಗ ನಾನು ಬೆಳೆಯುವೆ!" ಎಂದನು. "ಹೋರಾಟ ಕಷ್ಟ. ಆದರೆ ಹೋರಾಟ ಹಿಗ್ಗು!" ಎಂದನು. ವಿಲಕ್ಷಣ ವಿನೋದದ ಆ ನಗೆಗಾರ ಆ ಕಲೆಗಾರ ಸೋಲನ್ನು ಸಾವನ್ನು ನಗುನಗುತ್ತ ಸಂಧಿಸುತ್ತಾನೆ. ಬಾಳ ಹಿಗ್ಗಿನ ಹಿರಿಯ ಹಾಡು ಈ ಕಾದಂಬರಿ. ಕಿರಿಯದಾದರೂ ಕಮನೀಯವಾದ ಕುಂದಿಲ್ಲದ ಕಲಾಕೃತಿ.

Clerambault
ಕ್ಲೆರಾಂಬಾಲ್ಟ್

ಈ ಕಾದಂಬರಿಯ ನಾಯಕ ಒಬ್ಬ ಸಾಮಾನ್ಯ ಲೇಖಕ, ಪ್ಯಾರಿಸದ ಉಪನಗರದಲ್ಲಿ ಅವನ ವಾಸ. ನಿರುಪದ್ರವಿ ಪ್ರಾಣಿ. ನಿರ್ಮಲ ಮನಸಿನ ಹೆಂಡತಿ. ಸುಖವಾದ ಸಂಸಾರ. ಒಬ್ಬ ಮಗ. ಒಬ್ಬಳು ಮಗಳು. ಬಾಳಿನಲ್ಲಿ ಆಸಕ್ತಿ. ಭಗವಂತನಲ್ಲಿ ಭಕ್ತಿ. ಬಾಳಿನ ಘೋರ ಸಮಸ್ಯೆಯಾವುದೂ ಅವನನ್ನು ಎದುರಿಸಿಲ್ಲ. ಸುಖಸಲ್ಲಾಪಗಳನ್ನು ಮಾಡುತ್ತಿದ್ದನು. ಶಾಂತಿಗೀತಗಳನ್ನು ಬರೆಯುತ್ತಿದ್ದನು. ರಾಷ್ಟ್ರ ರಾಷ್ಟ್ರಗಳಲ್ಲಿ ಪ್ರೀತಿಶಾಂತಿಗಳಿರಬೇಕೆಂದು ಪ್ರತಿಪಾದಿಸುತ್ತಿದ್ದನು. ಆಶಾವಾದಿ. ಮಾನವನ ಭವಿಷ್ಯ ಸೊಗಸಾಗಿದೆಂದು ಅವನ ನಂಬಿಕೆ.

ಒಮ್ಮೆಲೇ ಆ ಉಪನಗರದಲ್ಲಿ ಸಿಡಿಲು ಬಿದ್ದಂತೆ ಗಲಾಟೆ. ಕಾಳಗದ ಕಹಳೆ ಕೂಗಿತು! ಪ್ಯಾರಿಸಕ್ಕೆ ರೈಲು ಹತ್ತಿದನು. ಅಲ್ಲಿಯ ವಾತಾವರಣದಲ್ಲಿ ಅದೆಂಥ ಹುಮ್ಮಸ್ಸು! ದೇಶಾಭಿಮಾನದ ಬಿಸಿಯುಸಿರಿನಿಂದ ಅವನ ನೆತ್ತರು ಕುದಿಯಿತು. ಆ ಕಾವಿನಿಂದ ಶಾಂತಿಯು ಅಂತರರಾಷ್ಟ್ರೀಯ ಪ್ರೀತಿಯು ಆದರ್ಶ ಕಮರಿ ಹೊಗೆಯಾಗಿ ಹೋದವು. ಮರಳಿ ಮನೆಗೆ ಬರುವಾಗ ಹಗೆಯ ಮೇಲೆ ಕೆಂಡ ಕಾರುತ್ತಿರುವನು. ಕೆಂಡದಂತೆ ನಿಗಿನಿಗಿಸುವ ರಾಷ್ಟ್ರಗೀತಗಳನ್ನು ಬರೆಯುತ್ತಾನೆ. ಅವನ ಸಾಹಿತ್ಯಕ್ಕೆ ಅವನ ಕಾವ್ಯಕ್ಕೆ ಕಳೆಯೇರುತ್ತದೆ. ಕೀರ್ತಿಯ ಕಿರೀಟ

ತಲೆಯಮೇಲೆ ಬರುತ್ತದೆ. ಅದರ ಮೇಲೆ ಜನರ ಪ್ರಶಂಸೆಯ ಸುರಿಮಳೆ. ಯುದ್ಧೋತ್ಸಾಹದಿಂದ ಉಬ್ಬಿ ಮಗ—ಮ್ಯಾಕ್ಸಿಮಾ—ರಣಭೂಮಿಗೆ ಹೊರಟಾಗ ಲೇಖಕನ ಬಾಳಿನ ಹಿಗ್ಗು ಹಿರಿಹೊಳೆಯಾಯಿತು !

ಮಗ ರಜೆಗೆಂದು ಮನೆಗೆ ಬರುತ್ತಾನೆ. ಕಾಳಗದ ಹುಮ್ಮಸ್ಸಿನ ಭೀಕರ ಹರ್ಷಾವೇಶದ ಎದೆಯುಬ್ಬಿಸುವ ಮಾತುಗಳನ್ನು ಮಗನ ಬಾಯಿಂದ ಕೇಳಬೇಕೆಂದು ತಂದೆಯ ಹಂಬಲ. ಆದರೆ ರಣಾಂಗಣದಲ್ಲಿ ಕಂಡ ನೋಟಗಳಿಂದ ಕಂಗೆಟ್ಟ ಮಗ ಪಿಟ್ಟೆಂದು ತುಟಿ ಬಿಚ್ಚಲಿಲ್ಲ. ತಂದೆಯ ಉತ್ಸಾಹವನ್ನು ಹಿಗ್ಗಿಸಲೂ ಇಲ್ಲ. ಕುಗ್ಗಿಸಲೂ ಇಲ್ಲ. ಮಗನ ಎದೆಯಲ್ಲಿ ಏನೋ ಕುದಿಯುತ್ತಿದೆ ! ಅವನು ಏನೋ ಮುಚ್ಚುಮರೆ ಮಾಡುತ್ತಿರುವನು ! ತಂದೆಗೆ ದಿಗಿಲಾಯಿತು!

ರಜೆಯ ಕೊನೆಯ ದಿನ. ಮಗ ಗಟ್ಟಿ ಧೈರ್ಯ ಮಾಡಿ ಬಾಯಿ ಬಿಚ್ಚುತ್ತಾನೆ: "ಅಪ್ಪಾಜಿ ! ನೀವು ನಿಜವಾಗಿ ನಂಬಿರುವಿರಾ........?" ಕೊರಳು ಬಿಗಿಯಿತು ! ಕೇಳಬೇಕೆನ್ನುವ ಮಾತು ನಿಂತು ಹೋಯಿತು! ಮಗ ಮತ್ತೆ ಮರಳಿ ರಣರಂಗಕ್ಕೆ ತೆರಳುತ್ತಾನೆ !

ಕಾಳಗಕ್ಕೆ ಕಳೆಯೇರುತ್ತದೆ. ಮ್ಯಾಕ್ಸಿಮಾ ಕಾಣದಾಗಿರುವನೆಂದು ಕಾಳಗದ ವರದಿ. ಮೃತನಾದನೆಂದು ಮುಂದಿನ ವರದಿ ! ಕೊನೆಯ ದಿನ ಮಗ ಆಡಬೇಕೆಂದ, ಆದರೆ ಆಡದ ಮಾತು ಯಾವುದು? ಆ ನಿಶ್ಶಬ್ದದ ಹಿಂದೆ ಹುದುಗಿದ ಘೋರ ಅರ್ಥವಾವುದು ? ತಂದೆ ಕತ್ತಲಲ್ಲಿ ಕೈಯಾಡಿಸಹತ್ತಿದನು. ಒಳಗಣ್ಣಿನಿಂದ ನೋಡಿಕೊಳ್ಳಹತ್ತಿದನು. ಸದಸದ್ವಿವೇಕಬುದ್ಧಿ ಅವನನ್ನು ಸಿಗಿಯಿತು. ಪೊಳ್ಳು ಆವೇಶದ, ಸುಳ್ಳು ತತ್ವದ, ಜಳ್ಳು ಹಿಗ್ಗಿನ ಮಬ್ಬು ಮಾಯವಾಯಿತು. ಕಣ್ದೆರೆದು ಬೆಳಕು ಕಾಣುತ್ತಾನೆ. ಬಾಳು ದೇವರು ಕೊಟ್ಟ ವಿಶ್ವಾಸದ ಸೊತ್ತು, ಪವಿತ್ರವಾದುದು. ಅದನ್ನು ಹಾಳುಗೆಡಹುವ ಅಧಿಕಾರ ಯಾರಿಗೂ ಇಲ್ಲ. ನೆರೆಹೊರೆಯವರ ಎದುರಿನಲ್ಲಿ ಈ ಹೊಸ ಸಂದೇಶವನ್ನು ಉಸುರುತ್ತಾನೆ. ಅವರೂ ಎಲ್ಲವನ್ನು ಬಲ್ಲರು. ಆದರೆ ಬಾಯಿ ಬಿಚ್ಚಲು

ನಾಲಿಗೆ ಏಳಲೊಲ್ಲದು. ಅವನ ಎದೆಯ ಬೆಟ್ಟದಲ್ಲಿ ಸತ್ಯದ ಬೆಂಕಿ ಕುದಿಯುತ್ತಿದೆ. ಬರಬರುತ್ತ ಮುಚ್ಚಳ ಹಾರಿ ಹೊಡೆದು ಸತ್ಯದ ಲಾವಾರಸ ಹೊರಹೊಮ್ಮಿತು ! ತನ್ನ ಸಂದೇಶವನ್ನು ಪ್ರಪಂಚಕ್ಕೆ ಕೂಗಿ ಕೂಗಿ ಸಾರಿಹೇಳಿದನು ! ಕಾಳಗದ ಮೇಲೆ ಕಾಳಗದ ಕಹಳೆಯನ್ನು ಅವನ ಕಾವ್ಯ ಊದಿತು ! ಹಗೆತನದ ಮೇಲೆ ಹಗೆತನದ ಹಾಡು ಹಾಡಿತು ಅವನ ಹೃದಯ !

ಜನತೆಯ ಕಣ್ಣು ಕೆಂಪಾಯಿತು. ಗೆಳೆಯರು ಅವನನ್ನು ತೊರೆದರು. ಅವನ ಶಾಂತಿಸಂದೇಶವನ್ನು ದೇಶದ್ರೋಹವೆಂದು ಪ್ರತಿಭಟಿಸಿ ದೇಶಭಕ್ತಿಯ ಹುಮ್ಮಸ್ಸು ತೋರಲು ಹಲವರು ಮುನ್ನುಗ್ಗಿದರು. ಅವನ ಹೆಂಡತಿಗೂ ಮಗಳಿಗೂ ಕಷ್ಟ ಬಂದಿತು. ಅವನು ಏಕಾಕಿಯಾಗಿ ನಿಂತನು ! ಮುಂದಕೆ ಸಾಗಿದನು ! ಮಾನವನ ಸಂಕುಚಿತ ಭಾವನೆಗಳ ಬಂಧನದ ಆಚೆ ಸಾಗಿದನು ! ಮುಂದಕೆ ಮುಂದಕೆ ಸಾಗಿತು ಅವನ ವಿಜಯಯಾತ್ರೆ ! ಅವನ ಸತ್ಯಸಂದೇಶ, ಅವನ ಪ್ರೀತಿಗೀತ ಅವನ ಶಾಂತಿಗೀತ ತೆರೆಯಿಲ್ಲದೆ ಮರೆಯಿಲ್ಲದೆ ಎಲ್ಲ ಮೇರೆಗಳನ್ನು ಮೀರಿ ಪ್ರಪಂಚಕ್ಕೆ ಆಹ್ವಾನವನ್ನಿತ್ತಿತು ! ಸರಕಾರ ರೋಷ ತಾಳಿತು ! ಅವನ ಮೇಲೆ ಕೇಸು ನಡೆಯಿತು ! ದೇಶದ್ರೋಹದ ಆಪಾದನೆ. ಸ್ವಾತಂತ್ರ್ಯಕ್ಕೆ ಹೊರಹೊರಟ ಯಾತ್ರಿಕ ! ಆದರೆ ಅಪರಾಧಿ !

ಕೇಸು ನಡೆನಡೆದಿರುವಾಗಲೇ ಒಬ್ಬ ದೇಶಭಕ್ತನ ( ?) ಪಿಸ್ತೂಲಿನ ಗುಂಡಿಗೆ, ಅಂಧ ಭಕ್ತಿಯ ಆವೇಶಕ್ಕೆ ಅವನು ಆಹುತಿಯಾದನು !

ಈ ಕಾದಂಬರಿಯಲ್ಲಿ ಕಥೆಯ ಕಿಡಿ, ಕಲೆಯ ಕಾಂತಿ, ತತ್ವದ ಜ್ಯೋತಿ ಎಲ್ಲವೂ ಕೂಡಿ ಕಾಮನ ಬಿಲ್ಲಿನ ಅಂದವನ್ನು ಬೀರುವವು.

"Soul Enchanted" ಎಂಬ ಇನ್ನೂ ಒಂದು ಮಹಾ ಕಾದಂಬರಿಯನ್ನೂ, Mother and Son, Annette and Sylve, Summer, Pierre and Luce ಮುಂತಾದ ಮತ್ತೂ ಅನೇಕ ಕಾದಂಬರಿಗಳನ್ನು ರೊಲಾ ಬರೆದಿರುವರು.

# ಸಂದೇಶ

೧೮೮೭ರಲ್ಲಿ ನಾರ್ಮಲ್ ಸ್ಕೂಲಿನಲ್ಲಿ ಇನ್ನೂ ವಿದ್ಯಾರ್ಥಿಯಾಗಿ ಕಲಿಯುತ್ತಿರುವಾಗಲೇ ರೋಲಾ ಟಾಲ್ಸ್ಟಾಯನಿಗೆ ಪತ್ರ ಬರೆಯುವ ಸಾಹಸ ಮಾಡಿದ ವಿಷಯ ಮೇಲೆ ಬಂದಿದೆ. ಆಗ ರೋಲಾರಿಗೆ ೨೧ನೇ ವರ್ಷ ಮಾತ್ರ ನಡೆಯುತ್ತಿದ್ದಿತು. ಆ ಎಳೆ ವಯಸ್ಸಿನಲ್ಲಿಯೂ ಕಲೆ ಮತ್ತು ಜೀವನಗಳ ವಿಷಯವಾಗಿ ಎಂಥ ಮಹಾಸಮಸ್ಯೆಗಳನ್ನು ಬಿಡಿಸುವ ಹಂಬಲ ಅವರಿಗೆ! ಎಂಥ ಉಚ್ಚ ವಿಚಾರ! ಎಂಥ ಉನ್ನತ ಆದರ್ಶ! ಅವರ ಹೃದಯದ ವಿಶಾಲತೆ ಎಷ್ಟು! ಬುದ್ಧಿ ಅದೆಷ್ಟು ಸೂಕ್ಷ್ಮ! ಆತ್ಮದ ಉಜ್ವಲ ಆಕಾಂಕ್ಷೆಗಳೇನು! ಆ ಪತ್ರದಲ್ಲಿಯ ಕೆಲ ಅವತರಣಿಕೆಗಳನ್ನು ಇಲ್ಲಿ ಕೊಟ್ಟಿದೆ:

"............ನಿಮ್ಮ ಕಾದಂಬರಿಗಳ ಒಂದೊಂದು ಪುಟದಿಂದಲೂ ಎದ್ದು ಬರುವುದೇನೋ ಎಂದು ಕಾಣುವ ಸಾವಿನ ಕಲ್ಪನೆಯಿಂದ ನನಗೆ ತಳಮಳವಾಗಿದೆ .... ಹೊರಗಣ್ಣಿಗೆ ಕಾಣುವ ಬಾಳು ನಿಜವಾದ ಬಾಳಲ್ಲ ಎಂದು ನಾನು ಮನಗಂಡಿರುವೆನು .... ಜೀವಜೀವಗಳಲ್ಲಿ ಭೇದ ಕಲ್ಪಿಸಿ ಮಾನವನು ಸಾಧಿಸುವ ಸ್ವಾರ್ಥದಲ್ಲಿ ಅಡಕವಾಗಿರುವ ಅಹಂಕಾರವನ್ನು ತೊರೆದು ವಿಶ್ವಜೀವನದಲ್ಲಿ, ಪರಂಜೀವನದಲ್ಲಿ ಬೆರೆತು ಹೋಗುವುದೇ ಬಾಳಿನ ನಿಜವಾದ ಹುರುಳೆಂದು ನಾನು ಮನಗಂಡಿರುವೆನು. ಒಣ ಭಾವನೆಗಳ, ಕೆಲಸಕ್ಕೆ ಬಾರದ ಕನಸುಗಳ ರಾಜ್ಯದಲ್ಲಿ ಸೊಗಸನ್ನು ಹುಡುಕುವುದನ್ನು ಬಿಟ್ಟು ಎಲ್ಲರ ಸುಖಕ್ಕಾಗಿ ಎಲ್ಲರ ಕಲ್ಯಾಣಕ್ಕಾಗಿ ಹೆಣಗುವುದೇ ಈ ಅಹಂಕಾರವನ್ನು ಗೆಲ್ಲುವ ಹಾದಿಯೆಂದು ತಿಳಿದಿರುವೆನು. ಆದರೆ ನಮ್ಮ ಸಂಕುಚಿತ ಅಹಂಕಾರದ ದುಷ್ಟ ಮತ್ತು ಕೇಡು ಬಗೆಯುವ ಭಾವನೆಯ ಸೆರಗನ್ನು ಹರಿದುಕೊಂಡು ದೂರಾಗಿ ಹಗುರಾದ ಹೃದಯ, ಕಣ್ತುಂಬ ನಿದ್ದೆ, ಚಿತ್ತದ ಶಾಂತಿ ಇವನ್ನು ನಿಜವಾದ ಸುಖವನ್ನು ಸಾಧಿಸಲು ವ್ಯಾವಹಾರಿಕ

ಔದಾರ್ಯ ಬೇಕು, ವ್ಯೈಯನ್ನು ಮಣಿಸಿ ದುಡಿದೇ ತೀರಬೇಕು ಎಂದು ನೀವು ಅನ್ನುತ್ತೀರಿ. ಈ ಅಹಂ ಎನ್ನುವುದನ್ನು ಗೆಲ್ಲುವುದೇ ನನ್ನ ಮನದ ಬಯಕೆ, ಹೃದಯದ ಹಾರೈಕೆ. ಅದನ್ನೇ ನಾನು ಹುಡುಕುತ್ತಿರುವೆನು. ಮತ್ತು ಅದನ್ನು ನಾನು ದೊರಕಿಸುವೆನೆಂದು ನಂಬಿದ್ದೇನೆ.

ಆದರೆ ವ್ಯೈಮಣಿತದಿಂದಲೇ ಇದು ಸಾಧ್ಯವೆಂದು ನಿಮ್ಮ ಹಟವೇಕೆ ? .... ಕಲೆಯನ್ನೇಕೆ ನೀವು ನಿಂದಿಸುವಿರಿ ? ನಿರಹಂಕಾರವನ್ನು ತ್ಯಾಗವನ್ನು ಸಾಧಿಸಲು ಕಲೆಯನ್ನು ನಿರ್ದೋಷವಾದ ಸಲಕರಣೆಯೆಂದು ನೀವು ಬಳಸಬಯಸುವುದಿಲ್ಲವೇ ? .... ಕಲೆಯಲ್ಲಿ ಸೊಗಸು ವಿಲಾಸಗಳ ಕಾಮನೆ ಕೇವಲ ನಿಮಗೆ ಕಾಣುವುದೇ ? ಆ ಕಾಮನೆಯಿಂದ ವಿಷಯವಿಕಾರಗಳು ಕೆರಳಿ, ಅಹಂಕಾರ ಇನ್ನಷ್ಟು ಬಲಗೊಂಡು ಮನುಷ್ಯ ಮತ್ತೂ ಕೀಳಾಗುತ್ತಾನೆಯೋ ? ಅಂತೆಯೇ ಕಲೆಯನ್ನು ನೀವು ಹೀಯಾಳಿಸುವಿರಲ್ಲವೇ ?

ಕಲೆಗಾರರೆಂದು ಹೇಳಿಕೊಳ್ಳುವ ಹಲವರಲ್ಲಿ ಕಲೆ ಕೀಳು ಸೊಗಸಿಗಾಗಿ ಬಳಸಲಾಗಿದೆನ್ನುವುದನ್ನು ನಾನು ಬಲ್ಲೆನು. ಆದರೆ ಇದೇ ಕಲೆಯೇ ? ಅದು ಇದಕ್ಕೂ ಬೇರೆ ಇಲ್ಲವೇ ? ಇದಕ್ಕೂ ಹೆಚ್ಚಿನದಿಲ್ಲವೇ ? ಕೆಲವರಿಗಾದರೂ ಕಲೆಯೆಂದರೆ ಬೇರೆ, ಕಲೆಯೆಂದರೆ ಜೀವನ ಸರ್ವಸ್ವವಾಗಿಲ್ಲವೇ? ಅವರಿಗೆ ಕಲೆಯೆಂದರೆ ಕೀಳು ಅಹಂಕಾರದ ಮೇಲಿನ ಗೆಲುವು. ಕಲೆಯೆಂದರೆ ವ್ಯಷ್ಟಿ ದಿವ್ಯಸಮುಷ್ಟಿಯಲ್ಲಿ ಸಮರಸವಾಗುವುದು. ಕಲೆಯೆಂದರೆ ಸೃಷ್ಟಿಯ ಹಿಗ್ಗು. ಆ ಹಿಗ್ಗಿನಲ್ಲಿ ಸಾವಿನ ಕಾಟವೆಲ್ಲಿ ? ಆ ಹಿಗ್ಗಿನಲ್ಲಿ ಸಾವಿನ ಕಾಟ ನಮಗೆ ಸರಸಾಟ. ಸಾವೇ ಸಾಯುತ್ತದೆ. ಸಾವಿನ ಕೊಲೆಗಾರಳು ಕಲೆ .... ನನ್ನ ಅಹಂಕಾರವನ್ನು ಕರಗಿಸಿ ನನ್ನನ್ನು ಚಿರಂಜೀವನದಲ್ಲಿ ಸಮರಸವಾಗಿಸುವ ಕಲೆಗೆ ನಾನು ಮನಸೋತಿರುವೆನು. ಮುಂದಿನ ಯುಗದಲ್ಲಿ ಕಲೆ ಮಹಾಕಾರ್ಯ ಮಾಡಬೇಕಾಗಿದೆಯೆಂದು ನೀವು ನಂಬುವುದಿಲ್ಲವೇ ? .... "

" On Life " ಎಂಬ ಪುಸ್ತಕ ಬರೆಯುವುದರಲ್ಲಿ ತೊಡಗಿದ

ಟಾಲ್‌ಸ್ಟಾಯ್‌ನಿಂದ ಆ ಪತ್ರಕ್ಕೆ ಉತ್ತರ ಹೋಗಲಿಲ್ಲ. ಆರು ತಿಂಗಳ ನಂತರ ರೊಲಾ ಮತ್ತೊಂದು ಕಾಗದ ಬರೆದರು. ಅದರಲ್ಲಿ ಅವರು ಕೇಳುತ್ತಾರೆ:

“.... ದಯಮಾಡಿ ಹೇಳುವಿರಾ? ನೀವು ಸತ್ಯವನ್ನು ಕಂಡಿರುವಿರಲ್ಲವೇ? ಹಾಗಾದರೆ ಸತ್ಯವಾಗಿ ಹೇಳಿರಿ, ನೀವು ಕಂಡ ಆ ಸತ್ಯದಿಂದ ನೀವು ಸುಖಿಯಾಗಿರುವಿರಾ? .... ಉತ್ತರ ಕೊಡಿರಿ. ನಿಮ್ಮ ಸಲಹೆಗಾಗಿ ನಾನು ಕೊರಗುತ್ತಿರುವೆನು! ನನ್ನ ಸುತ್ತೆಲ್ಲ ದಾರಿ ತೋರುವ ನೀತಿವಂತರು ಯಾರೂ ಕಾಣದಾಗಿದೆ! ....”

ಆ ತಳಮಳದ ಕೂಗಿಗೆ ಟಾಲ್‌ಸ್ಟಾಯ್ ಉತ್ತರ ಕೊಟ್ಟ ವಿಷಯ ಮೇಲೆ ಬಂದಿದೆ. ಮುಂದೆ ೧೦ ವರ್ಷಗಳ ನಂತರ, ೧೮೯೭ರಲ್ಲಿ, ರೊಲಾ ಮೂರನೆಯ ಸಲ ಟಾಲ್‌ಸ್ಟಾಯನಿಗೆ ಕಾಗದ ಬರೆದರು:

“ಹಿಂದೊಮ್ಮೆ ನಾನು ನಿಮ್ಮ ಸಲಹೆ ಕೇಳಿದ್ದೆನು. ಆಗ ಕಲೆ ಮತ್ತು ನೀತಿ ಇವುಗಳಲ್ಲಿ ನೀವು ಕಲ್ಪಿಸುವಂತೆ ಕಾಣುವ ವಿರೋಧದ ವಿಚಾರ ನನ್ನ ತಲೆತಿನ್ನುತ್ತಿದ್ದಿತು. ಕಲೆಯೇ ನನ್ನ ಜೀವನವಾಗಿದ್ದಿತು. ನನ್ನ ಧರ್ಮವಾಗಿದ್ದಿತು. ನನ್ನ ಅತ್ಯಂತ ನಿರ್ಮಲ ಮತ್ತು ನಿಷ್ಪಾಪ ಆನಂದವನ್ನು ನಾನು ಕಲೆಯಲ್ಲಿ ಕಂಡಿದ್ದೆನು. ಮತ್ತು ಪ್ರಪಂಚದ ತಾಮಸ ಶಕ್ತಿಗಳ ಕೂಡ ಹೋರಾಡಲು ನನಗೆ ಶ್ರೇಷ್ಠವಾದ ಸಾಮರ್ಥ್ಯ ಬಂದುದೂ ಅದರಿಂದಲೇ. ಸ್ವಾರ್ಥತ್ಯಾಗಕ್ಕೆ ಕಲೆ ವಿರೋಧಿಯೇ?— ಜನವನ್ನು ಪ್ರೀತಿಸದಿರು ಎಂದು ಕಲೆ ಹೇಳುವುದೇ?— ಎಂದು ಆಗ ನಾನು ನಿಮಗೆ ಕೇಳಿದ್ದೆನು. ನಿಮ್ಮ ವಿರೋಧ ಕಲೆಗಲ್ಲ ಆದರೆ ಇಂದಿನ ಕಲೆಗಾರರ ವಿಷಯದಲ್ಲಿ ಎಂದು ನೀವು ಉತ್ತರ ಕೊಟ್ಟಿದ್ದಿರಿ. ಹೃದಯದಿಂದ ಹೊರಹೊಮ್ಮಿದ ಹಾಡನ್ನು ಹಾಡಕೂಡದೆಂದಲ್ಲ ಆದರೆ ಸಂಗೀತವನ್ನು ವಿಲಾಸದ ಮತ್ತು ಹಣ ಗಳಿಸುವ ಸಾಧನವಾಗಿ ಮಾಡಿಕೊಂಡವರ ವಿಷಯದಲ್ಲಿ ನಿಮ್ಮ ವಿರೋಧವೆಂದು ನೀವು ಉತ್ತರ ಕೊಟ್ಟಿರಿ ........

ಜನಕ್ಕೆ ಏನು ಅಲ್ಪಸ್ವಲ್ಪ ಸೇವೆಯನ್ನು ಹಿತವನ್ನು ನಾನು ಮಾಡಬಲ್ಲೆನೋ ಅದಕ್ಕಿಂತ ಹೆಚ್ಚಿನ ಯಾವ ಕನಸನ್ನೂ ನಾನು ಕಾಣುವುದಿಲ್ಲ. ಸುತ್ತೆಲ್ಲ ಮುತ್ತಿ ಜನದ ಉಸಿರನ್ನು ಕಟ್ಟುತ್ತಿದ್ದ ಈ ಶೂನ್ಯವಾದದಿಂದ ಅವರನ್ನು ಎಳೆದೊಯ್ಯುವುದೇ ನನ್ನ ಕಿರಿಯ ಕನಸು.... ಯಾವುದರಲ್ಲಿ ಏನಿದೆ ?–ಏನು ಮಾಡಿದರೆ ಏನಿದೆ?–ಯಾವ ಪ್ರಯತ್ನದಿಂದೇನು?–ಇಂದೇನು? ಎಂದೇನು?–ಮುಂದೇನು?–ಎಂಬ ಶೂನ್ಯವಾದವು ಮಾನವನ ಸತ್ವವನ್ನು ಹೀರುತ್ತಿದೆ. ಈ ಘಾತಕ ನೈರಾಶ್ಯವಾದವು ಅದೆಷ್ಟೊ ಜನರ ಪ್ರಾಣ ತೆಗೆಯುತ್ತಿದೆ. ನನ್ನ ಸುತ್ತಲೂ ಹಲವರ ಜೀವವನ್ನು ಹಿಂಡಿದೆ."

ಕಲೆಯ ವಿಷಯದಲ್ಲಿ ರೊಲಾರ ಸಂದೇಶವನ್ನು ಇನ್ನು ಬೇರೆ ಹೆಚ್ಚಿನ ಮಾತಿನಲ್ಲಿ ಹೇಳುವ ಅವಶ್ಯಕತೆಯೇ ಇಲ್ಲ. ಸಣ್ಣಕತೆಗಾರ, ಕಾದಂಬರಿಕಾರ, ಸಂಗೀತಗಾರ, ನಟ, ನರ್ತಕ, ಶಿಲ್ಪಿ—ಯಾವ ಕಲೆಗಾರನೇ ಆಗಲಿ ರೊಲಾರ ಸಂದೇಶದಿಂದ ಸ್ಫೂರ್ತಿ ಹೊಂದಿದರೆ ಪ್ರಪಂಚಕ್ಕೆ ಎಷ್ಟು ಹಿತವಾದೀತು. ! ರೊಲಾರಿಗೆ ಕಲೆಯೇ ಬಾಳು. ಬಾಳನ್ನೆ ಕಲೆಯಾಗಿ ಮಾರ್ಪಡಿಸಿದರವರು. ಕಲೆಯ ಹಿಗ್ಗು ಅವರಿಗೆ ಹಿಗ್ಗಿನ ಕಲೆಯಾಯಿತು. ಕಲೆ ವಿಲಾಸವಲ್ಲ, ವಿವೇಕವಹುದು, ಆನಂದವೂ ಇದೆ, ಕಲ್ಯಾಣವೂ ಸರಿ–ಎಲ್ಲವೂ, ತನಗೂ ಮತ್ತು ಪರರಿಗೂ.

ಇನ್ನು ಬಾಳಿನ ಬಗೆಗೆ ತಮ್ಮ ಸಂದೇಶವನ್ನು ಅವರು ತಮ್ಮ ಸಾಹಿತ್ಯದಲ್ಲಿ, ಪುಸ್ತಕಪುಸ್ತಕದಲ್ಲೂ ಪುಟಪುಟದಲ್ಲೂ ಸಾರಿದ್ದಾರೆ. ಅವರು ಬರೆದ ಹಲವು ಕಾದಂಬರಿಗಳ ಮತ್ತು ಜೀವನಚರಿತ್ರೆಗಳ ನಾಯಕರ ಜೀವನವನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ, ಅವರ ಸಾಹಿತ್ಯದಲ್ಲಿ ಅವರ ಸಂದೇಶ ಕೇಳಿಸುತ್ತದೆ. ಅಲ್ಲಿ ಅವರ ವ್ಯಕ್ತಿತ್ವದ ಉತ್ಕ್ರಾಂತಿಯನ್ನೂ ಕಾಣಬಹುದು. ಸತ್ಯ, ನೀತಿ, ಪ್ರೀತಿ, ವಿಶ್ವಬಂಧುತ್ವ, ಶ್ರದ್ಧೆ, ಬಲ–ಇವೇ ಅವರ ಮಂತ್ರ. ಈ ಮಂತ್ರಗಳ ಸಿದ್ಧಿ ಇಹಪರಗಳ ಸಾಧನೆ ಅವರಿಗೆ. ಇವುಗಳಿಂದ ಮಾನವನ ವೈಯ

ಕ್ತಿಕ, ಸಾಮಾಜಿಕ ಮತ್ತು ಆಧ್ಯಾತ್ಮಿಕ ಕಲ್ಯಾಣ ಆಗದೇ ಇರದು.

ಅವರ ಜೀವನ ಮತ್ತು ಸಾಹಿತ್ಯಗಳ ವಿಷಯವಾಗಿ ಮೇಲೆ ಹೇಳಿದ ಮಾತುಗಳಲ್ಲಿ ಅವರ ಜೀವನಸಂದೇಶ, ಅವರ ಸಾಹಿತ್ಯ ಸಂದೇಶ ಅಡಕವಾಗಿಯೇ ಇದೆ; ಅದೇಕೆ, ನಿಚ್ಚಳವಾಗಿ ಸಾರಿಯೂ ಹೇಳಿದುದಾಗಿದೆ.

"Know life and love it !" ಬಾಳನ್ನು ಅರಿ ಮತ್ತು ಮೆಚ್ಚು ! ಇದೇ ಅವರ ಜೀವನದ ಸೂತ್ರ ! ಸುಖದುಃಖ, ಸೋಲು ಗೆಲುವು, ಕಹಿಸಿಹಿ, ಆಸೆನಿರಾಸೆ—ಎಲ್ಲವನ್ನೂ ಮೆಟ್ಟಿ ನಿಲ್ಲು !— ಮೃತ್ಯುಂಜಯನಾಗಿ ಮೆರೆ !—ನಟರಾಜನಾಗಿ ಕುಣಿ !



## ಆಧಾರ ಗ್ರಂಥಗಳು


1 Life of Ramakrishna — by Romain Rolland
2 Life of Vivekananda ,, ,,
3 " Romain Rolland " —by Stephan Zweig
4 " Romain Rolland — The Story of a Conscience "
— by Dr· Aronson·
5 " Among the Great " — by Sri Dilip Kumar Roy